ಮಾಧ್ಯಮಿಕ ಶಾಲಾ ಹಾಗು ಟ್ರೇನಿಂಗ ಕಾಲೇಜುಗಳ
ವಿದ್ಯಾರ್ಥಿಗಳಿಗೆ ಅತ್ಯುಪಯುಕ್ತವಾದ



# ನಿಬಂಧ ಸಂ




ಲೇಖಕರು :—
ಅನಂತ ಕುಲಕರ್ಣಿ, ಬಿ. ಎ. (ಆನರ್ಸ) ಬಿ. ಎಡ್.
ಹೆಡ್‌ಮಾಸ್ತರ, ಇಂಗ್ಲಿಷ್ ಸ್ಕೂಲ, ಕಿತ್ತೂರ



ಪ್ರಕಾಶಕರು:—
ಕೆ. ಎಸ್. ಕುಲಕರ್ಣಿ
ಕುಲಕರ್ಣಿ ಬುಕ್ ಡಿಪೋ, ಸ್ಟೇಶನ್‌ರೋಡ, ಹುಬ್ಬಳ್ಳಿ

ಮುದ್ರಕರು :—
ಎಸ್. ಎಸ್. ಕಾರಂತ
ಆಶಾ ಪ್ರೆಸ್, ರಾಧಾಕೃಷ್ಣಗಲ್ಲಿ, ಹುಬ್ಬಳ್ಳಿ

೧೯೫೩ ) ( ಬೆಲೆ

# ವಿಷಯಾನುಕ್ರಮಣಿಕೆ

# ಮೊದಲು ಮಾತು

ನಿಬಂಧವು ಒಂದು ಶ್ರೇಷ್ಠವಾದ ಕಲೆಯು. ಕಾವ್ಯವನ್ನು ಬರೆಯುವದಕ್ಕೆ ಬೇಕಾಗುವ ಪ್ರತಿಭಾ ಶಕ್ತಿಯು ನಿಬಂಧ ಬರೆಯಲೂ ಬೇಕು. ಅದಕ್ಕಾಗಿಯೇ ಪುರಾತನರು "ಗದ್ಯಂ ಕವೀನಾಂ ನಿಕಷಂ ವದಂತಿ" ಎಂದು ಹೇಳಿದ್ದಾರೆ. ಈ ಕಲೆಯಲ್ಲಿ ಪಾರಂಗತರಾಗಬೇಕಾದರೆ ವಿದ್ಯಾರ್ಥಿಗಳು ನಿಬಂಧಗಳನ್ನು ಬರೆಯುವ ರೂಢಿ ಮಾಡಬೇಕು. ಮಾದರಿಯ ಕೆಲವು ನಿಬಂಧಗಳನ್ನು ಓದಬೇಕು. ಕನ್ನಡ ಸಾಹಿತ್ಯದಲ್ಲಿ ಕತೆ, ಕಾದಂಬರಿ, ಕವನಗಳು ಬೆಳೆದು ಬಂದಂತೆ ನಿಬಂಧ ಸಾಹಿತ್ಯವು ಬೆಳೆದು ಬಂದಿಲ್ಲ. ಅದರಲ್ಲಿಯೂ ವಿದ್ಯಾರ್ಥಿಗಳ ಸಲುವಾಗಿ ಬರೆದ ನಿಬಂಧಗಳು ಬಹಳ ಕಡಿಮೆಯಿರುವವು. ಈ ಕೊರತೆಯನ್ನು ಹೋಗಲಾಡಿಸುವದಕ್ಕಾಗಿ ನಾನು ಇಲ್ಲಿ ಪ್ರಯತ್ನಿಸಿದ್ದೇನೆ. ಇವು ಮಾದರಿಯ ಬರಹಗಳೆಂದು ನಾನು ಹೇಳಲಾರೆನು. ಆದರೆ ಈ ನಿಬಂಧಗಳಿಂದ ವಿದ್ಯಾರ್ಥಿಗಳಿಗೆ ಸ್ವಲ್ಪಾದರೂ ಮಾರ್ಗದರ್ಶನವಾದರೆ ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸುವೆನು. ವಿದ್ವಾಂಸರಾದವರು ಇವರಲ್ಲಿಯ ದೋಷಗಳನ್ನು ತಿಳಿಸಿದರೆ ಮುಂದಿನ ಆವೃತ್ತಿಯಲ್ಲಿ ಅವುಗಳನ್ನು ತಿದ್ದಿಕೊಳ್ಳುವೆನು. ನನ್ನ ಉಳಿದ ಪುಸ್ತಕಗಳಂತೆ ಈ ಪುಸ್ತಕವನ್ನೂ ಕನ್ನಡಿಗರು ಆದರದಿಂದ ಬರಮಾಡಿಕೊಳ್ಳುವರೆಂದು ಭಾವಿಸುವೆನು.

ಅನಂತ ಕುಲಕರ್ಣಿ

# ನಿಬಂಧ ಸಂಗ್ರಹಗಳು

## ೧. ಚಲನಚಿತ್ರಗಳ ಮಹತ್ವ

ಮನುಷ್ಯನು ತನ್ನ ಸುಖವನ್ನು ಹೆಚ್ಚಿಸುವದಕ್ಕಾಗಿ ಅನೇಕ ಶೋಧಗಳನ್ನು ಮಾಡಿರುವನು. ಆಕಾಶದಲ್ಲಿ ಹಾರಾಡುವದಕ್ಕಾಗಿ ವಿಮಾನಗಳನ್ನು ನಿರ್ಮಿಸಿದನು. ಸಮುದ್ರದಲ್ಲಿ ಪ್ರವಾಸ ಮಾಡುವದಕ್ಕೆ ಹಡಗಗಳನ್ನು ನಿರ್ಮಾಣಮಾಡಿದನು. ವಿಜ್ಞಾನದ ಸಹಾಯದಿಂದ ಮನುಷ್ಯನು ಸೃಷ್ಟಿಯನ್ನೇ ಗೆಲ್ಲಲು ಪ್ರಯತ್ನಿಸುತ್ತಿರುವನು. ತನ್ನ ಮನೋರಂಜನೆಗಾಗಿ ಚಲನಚಿತ್ರಗಳನ್ನು ನಿರ್ಮಿಸಿರುವನು. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಚಲನಚಿತ್ರ ಮಂದಿರಗಳು ಭರದಿಂದ ಬೆಳೆಯುತ್ತಿರುವವು. ಆಧುನಿಕ ಯುಗದಲ್ಲಿ ಚಲನಚಿತ್ರ ಮಂದಿರವಿಲ್ಲದ ಪಟ್ಟಣವೇ ನಮಗೆ ದೊರೆಯಲಾರದು. ಚಲನಚಿತ್ರವು ನವನ ಚಿಹ್ನವಾಗಿದೆ. ಅಶಿಕ್ಷಿತರ, ಶಿಕ್ಷಿತರ ಎಲ್ಲರ ಪ್ರೀತಿಗೂ ಪಾತ್ರವಾಗಿದೆ. ಚಲನಚಿತ್ರ ಮಂದಿರಗಳ ಬೆಳವಣಿಗೆಯಿಂದ ನಾಟಕಗಳು ಕಡಿಮೆಯಾಗಿರುವವು. ಮೊದಲಿನ ಕಾಲದಲ್ಲಿ ಇಡೀ ರಾತ್ರಿಯೆಲ್ಲವೂ ನಾಟಕಗಳನ್ನು ಆಡುತ್ತಿದ್ದರು. ಇದರಿಂದ ಬಹಳ ವೇಳೆಯು ವ್ಯಯವಾಗುತ್ತಿತ್ತು. ಆರೋಗ್ಯ ದೃಷ್ಟಿಯಿಂದಲೂ ಇದು ಒಳ್ಳೇದಲ್ಲ. ಚಲನಚಿತ್ರವು ಬಹುಬೇಗನೆ ಮುಗಿಯುತ್ತದೆ. ನಾಟಕವನ್ನು ಆಡಬೇಕಾದರೆ ಒಂದು ಊರಿಂದ ಮತ್ತೊಂದು ಊರಿಗೆ ಅನೇಕ ಸಾಮಗ್ರಿಗಳನ್ನು ಒಯ್ಯಬೇಕಾಗುತ್ತದೆ. ಇದರಿಂದ ಖರ್ಚುಬಹಳ ಬರುವದು. ಚಲನಚಿತ್ರ, ತಯಾರಿಸುವಾಗ ಮಾತ್ರ ವಿಶೇಷವಾಗಿ ಖರ್ಚು ಬರುವದು. ಆದರೆ ಒಮ್ಮೆ ಚಿತ್ರವನ್ನು ತಯಾರಿಸಿದರೆ ಆ ಚಿತ್ರವನ್ನು ಬೇಕಾದಲ್ಲಿ ತೋರಿಸಬಹುದು. ಇದಲ್ಲದೆ ನಾಟಕದಲ್ಲಿ ಬೇರೆ ಬೇರೆ ದೇಶಗಳ ಸೃಷ್ಟಿಸೌಂದರ್ಯವನ್ನು ತೋರಿಸಲು ಸಾಧ್ಯವಾಗುವದಿಲ್ಲ; ಸನ್ನಿವೇಶಗಳನ್ನು ನಿರ್ಮಿಸಲು ಅವಕಾಶವಿರುವದಿಲ್ಲ. ಚಲನಚಿತ್ರದಲ್ಲಿ ನಮಗೆ ಬೇಕಾದ ಸನ್ನಿವೇಶವನ್ನು ನಿರ್ಮಿಸಲು ಅವಕಾಶವಿರುವದು. ಇದರಿಂದಲೇ ಚಲನಚಿತ್ರವು ಲೋಕಪ್ರಿಯವಾಗಿರುವದು.

ಮೊಟ್ಟಮೊದಲು ಚಲನಚಿತ್ರವನ್ನು ಎಡಿಸನ್‌ನೆಂಬ ಅಮೇರಿಕದ ವಿಜ್ಞಾನಿಯು ೧೮೯೦ರಲ್ಲಿ ಹುಡುಕಿತೆಗೆದನು. ಮೊದಲು ಮೂಕಚಿತ್ರಗಳಿದ್ದವು. ಅವುಗಳಲ್ಲಿ ಸುಧಾರಣೆಯಾಗಿ ಮಾತನಾಡುವ ಚಲನಚಿತ್ರಗಳು ಸಿದ್ಧವಾದವು. ಅದರಲ್ಲಿ ಇನ್ನೂ ಸುಧಾರಣೆಯು ನಡೆದೇ ಇರುವದು. ಈಗ ಬಣ್ಣದ ಚಿತ್ರಗಳನ್ನು ತಯಾರಿಸುತ್ತಿರುವರು. ಮೊದಲನೇ ಚಲನಚಿತ್ರವು ಭಾರತದಲ್ಲಿ ೧೯೧೩ರಲ್ಲಿ ಸಿದ್ಧವಾಯಿತು. ಇಂದು ಚಲನಚಿತ್ರ ವ್ಯವಸಾಯವು ಬಹಳವಾಗಿ ಬೆಳವಣಿಗೆ ಹೊಂದಿರುವದು.

ಮನೋರಂಜನೆಗೆ ಜೀವನದಲ್ಲಿ ಒಂದು ಸ್ಥಾನವಿದೆ. ಜನರು ಬೇರೆ ಬೇರೆ ರೀತಿಯಿಂದ ಮನೋರಂಜನೆಯನ್ನು ಮಾಡಿಕೊಳ್ಳಬಹುದು. ಕೆಲವರಿಗೆ ಸಂಗೀತವೆಂದರೆ ಪ್ರಾಣ. ಕೆಲವರಿಗೆ ಸಾಹಿತ್ಯವೆಂದರೆ ಬಹಳ ಪ್ರೀತಿ. ಅಭಿನಯ, ನೃತ್ಯ, ಸಂಗೀತ ಮುಂತಾದ ಕಲೆಗಳು ಎಲ್ಲರ ಮನಸ್ಸನ್ನು ಸೂರೆಗೊಳ್ಳುವವು. ಸಂಗೀತಕ್ಕೆ ಮುಗ್ಧನಾಗದ ಮನುಷ್ಯನು ಯಾವನಿರುವನು? ಬೇರೆ ಬೇರೆ ದೇಶಗಳನ್ನು ಸಂಚಾರ ಮಾಡಿ ಅಲ್ಲಿಯ ಸೃಷ್ಟಿಸೌಂದರ್ಯವನ್ನು ನೋಡಬೇಕೆಂದು ನಾವು ಇಚ್ಛಿಸುವೆವು. ಆದರೆ ಸ್ವಲ್ಪ ಜನರಿಗೆ ಮಾತ್ರ ದೇಶಗಳನ್ನು ಸಂಚಾರಮಾಡಲು ಸಾಧ್ಯವಾಗುವದು. ಹಿಮಾಲಯ ಪರ್ವತ, ತಾಜಮಹಾಲ, ಲಂಡನ್ ಪಟ್ಟಣಗಳನ್ನು ಎಷ್ಟು ಜನರು ತಮ್ಮ ಜೀವನದಲ್ಲಿ ನೋಡುವರು? ಪ್ರತ್ಯಕ್ಷವಾಗಿ ಇವುಗಳನ್ನು ನೋಡದೆಯಿದ್ದವರು ಚಲನ ಚಿತ್ರಗಳಲ್ಲಿ ಇವುಗಳನ್ನು ನೋಡಿ ಆನಂದಪಡಬಹುದು; ಸಮಾಧಾನಪಟ್ಟು ಕೊಳ್ಳಬಹುದು. ಚಲನಚಿತ್ರದಲ್ಲಿ ಸಂಗೀತ, ಅಭಿನಯ, ನೃತ್ಯ, ಸಾಹಿತ್ಯ ಎಲ್ಲವನ್ನೂ ಏಕಕಾಲಕ್ಕೆ ಅನುಭವಿಸಬಹುದು. ಗಿರಣಿಗಳಲ್ಲಿ ಮುಂಜಾನೆ ಯಿಂದ ಸಂಜೆಯ ವರೆಗೆ ದುಡಿಯುವ ಕೂಲಿಕಾರನಿಗೆ ಚಲನಚಿತ್ರವೇ ಮನೋರಂಜನೆಯ ಸಾಧನವಾಗಿದೆ. ಚಲನಚಿತ್ರವನ್ನು ನೋಡುತ್ತಿರುವಾಗ ಅವನು ತನ್ನ ಕಷ್ಟಗಳನ್ನು ಮರೆಯುವನು. ಸ್ವಲ್ಪ ಹಣದಲ್ಲಿಯೇ ಅವನ ಮನೋರಂಜನೆಯನ್ನು ಮಾಡಿಕೊಳ್ಳುವನು. ಚಲನಚಿತ್ರವನ್ನು ಬಹಳ ನೋಡುವದರಿಂದ ದುಷ್ಪರಿಣಾಮವೂ ಆಗುವದು. ಆದರೆ, ಇದರ ದೋಷವು ಚಲನಚಿತ್ರದ್ದಲ್ಲ. ಬೆಂಕಿಯನ್ನು ವಿನಾಶಕ್ಕೂ, ಹಿತಕ್ಕೂ ಉಪಯೋಗ ಮಾಡಿಕೊಳ್ಳಬಹುದಲ್ಲವೇ? ಚಲನಚಿತ್ರ ನೋಡುವದರಲ್ಲಿ ಮಿತವ್ಯಯತೆ

ಬೇಕು. ಬಹಳ ಸಾರೆ ನೋಡುವದರಿಂದ ಕಣ್ಣುಗಳು ಕೆಡುವವು; ವ್ಯರ್ಥವಾಗಿ ಹಣವೂ ಖರ್ಚಾಗುವದು,

ಶಿಕ್ಷಣ ಕೊಡುವದಕ್ಕಾಗಿಯೂ ಚಲನಚಿತ್ರವನ್ನು ಉಪಯೋಗಿಸ ಬಹುದು. ಅಮೇರಿಕಾ ದೇಶದಲ್ಲಿ ಶಿಕ್ಷಣ ಕೊಡುವದಕ್ಕಾಗಿ ಬಹಳವಾಗಿ ಚಲನಚಿತ್ರವನ್ನುಉಪಯೋಗಿಸುವರು. ಇದರಿಂದ ಶಿಕ್ಷಣದಲ್ಲಿ ಪ್ರಗತಿಯನ್ನು ಬೇಗನೆ ಸಾಧಿಸುವದು ಸಾಧ್ಯವಿದೆಯೆಂಬುದು ಪ್ರಯೋಗಗಳಿಂದ ಸಿದ್ಧವಾಗಿ ರುವದು. ನಾವು ಜ್ಞಾನವನ್ನು ಗಳಿಸುವುದಕ್ಕೆ ಐದು ಜ್ಞಾನೇಂದ್ರಿಯಗಳನ್ನು ಉಪಯೋಗಿಸುವೆವು. ಇದರಲ್ಲಿ ಕಣ್ಣು ಬಹಳ ಪ್ರಭಾವಶಾಲಿಯಾದದ್ದು. ತಾಜಮಹಾಲ ಅಥವಾ ಹಿಮಾಲಯ ಪರ್ವತದ ವರ್ಣನೆಯನ್ನು ಎಷ್ಟು ಓದಿದರೂ ಅದರ ಸರಿಯಾದ ಕಲ್ಪನೆಯು ನಮಗೆ ಬರಲಾರದು. ಅದೇ ಅದರ ಚಿತ್ರವನ್ನು ನೋಡಿದರೆ ನಾವು ಅದನ್ನು ಮರೆಯಲಾರೆವು. ವಿದ್ಯೆಯನ್ನು ಕೇವಲ ಪುಸ್ತಕಗಳಿಂದ ದೊರಕಿಸುತ್ತೇವೆಂದು ತಿಳಿಯಬಾರದು. ಭೂಗೋಲ ಇತಿಹಾಸಗಳನ್ನು ಕಲಿಸುವದಕ್ಕೆ ಚಲನಚಿತ್ರವು ಬಹಳ ಉಪಯುಕ್ತ ವಾದದ್ದು. ಅಮೇರಿಕಾ ದೇಶದಲ್ಲಿಯ ಪನಾಮಾ ಕಾಲುವೆಯನ್ನು ನಿರಸವಾದ ಶಬ್ದಗಳಿಂದ ವರ್ಣಿಸುವದಕ್ಕಿಂತ ಅದರ ಚಿತ್ರವನ್ನು ತೋರಿಸುವದು ಒಳ್ಳೇದಲ್ಲವೇ? ಇದರಿಂದ ವಿಷಯವು ಚೆನ್ನಾಗಿ ಮನದಟ್ಟಾಗುವದು. ಓದ್ಳ ಬರಹ ಬಾರದ ಜನರಿಗೂ ಚಲನಚಿತ್ರದಿಂದ ಶಿಕ್ಷಣ ಕೊಡಬಹುದಾಗಿದೆ. ರೋಗಗಳ ಹಬ್ಬುವಿಕೆ, ಅವುಗಳ ನಿವಾರಣೋಪಾಯ ಮುಂತಾದ ವಿಷಯ ಗಳನ್ನು ಚಲನಚಿತ್ರದಮುಖಾಂತರ ತೋರಿಸಬಹುದು. ನಮ್ಮನೆರೆಹೊರೆಯ ಜನರ ಬಗ್ಗೆ ನಾವು ಯಾವ ವಿಷಯವನ್ನೂ ಅರಿತುಕೊಂಡಿಲ್ಲ. ಇದರಿಂದಲೆ ನಾವು ಬಡಿದಾಡುತ್ತೇವೆ. ಚಲನಚಿತ್ರಗಳ ಮುಖಾಂತರವಾಗಿ ಅಲ್ಲಿಯ ಜನರ ಜೀವನವನ್ನು ನಾವು ಅರಿತುಕೊಳ್ಳಬಹುದು.

ರಾಜಗೋಪಾಲಾಚಾರ್ಯರು ಚಲನಚಿತ್ರಗಳನ್ನು ನೋಡಬಾರ ದೆಂದು ವಿದ್ಯಾರ್ಥಿಗಳಿಗೆ ಆಗಾಗ್ಗೆ ಉಪದೇಶ ಮಾಡುತ್ತಾರೆ. ಇದರ ಕಾರಣ ವೆಂದರೆ ನಮ್ಮದೇಶದಲ್ಲಿಯ ಚಲನಚಿತ್ರಗಳು ಕೇವಲ ಶೃಂಗಾರ ರಸಪ್ರಧಾನ ವಾಗಿರುವವು. ಇಂಥ ಚಿತ್ರಗಳನ್ನು ನೋಡುವದರಿಂದ ವಿದ್ಯಾರ್ಥಿಗಳ ಮೇಲೆ ಬಹಳ ಕೆಟ್ಟಪರಿಣಾಮವಾಗುತ್ತದೆ. ವಿದ್ಯಾರ್ಥಿಗಳ ಸಲುವಾಗಿಯೇ

ಬೇರೆ ಚಿತ್ರಗಳನ್ನು ತಯಾರಿಸಬೇಕು. ಈ ಚಿತ್ರಗಳಿಂದ ಅವರ ಜ್ಞಾನದ ಮಟ್ಟವು ಹೆಚ್ಚಾಗಬೇಕು. ಬೇರೆ ಬೇರೆ ದೇಶಗಳಲ್ಲಿಯ ರೀತಿ, ನೀತಿಗಳು ಅಲ್ಲಿಯ ಪಟ್ಟಣಗಳು, ನೋಡತಕ್ಕಂಥ ಸ್ಥಳಗಳು, ಇವುಗಳನ್ನು ತೋರಿಸು ವದರಿಂದ ಅವರ ಜ್ಞಾನವು ಬೆಳೆಯುವದಲ್ಲದೆ, ಬೇರೆ ದೇಶಗಳ ಬಗ್ಗೆ ಪ್ರೀತಿಯು ಉತ್ಪನ್ನವಾಗುವದು. ಬೇರೆ ದೇಶಗಳ ಬಗ್ಗೆ ಪ್ರೀತಿಯು ಉತ್ಪನ್ನವಾದರೆ ದೇಶ ದೇಶದೊಳಗಿನ ಬಡಿದಾಟಗಳು ಇಲ್ಲದಂತಾಗುವವು. ಇದರಿಂದ ಜಗತ್ತು ಸುಖಮಯವಾಗುವದರಲ್ಲಿ ಸಂದೇಹವಿಲ್ಲ. ಇಂಥ ಚಿತ್ರಗಳನ್ನು ಉಪಯೋಗಿಸುವದರಿಂದ ವಿದ್ಯಾರ್ಥಿಗಳಲ್ಲಿ ವಿದ್ಯೆಯ ಬಗ್ಗೆ ಅಭಿರುಚಿ ಯುಂಟಾಗುವದು. ಇಂದು ಶಿಕ್ಷಣವೆಂದರೆ ಕೇವಲ ಓದು ಬರಹವೆಂದು ಜನರ ತಿಳುವಳಿಕೆಯಾಗಿದೆ. ಸಾಲೆಯೆಂದರೆ ಮಕ್ಕಳಿಗೆ ಬೇಸರ ಬರುತ್ತದೆ. ಇದನ್ನು ತಪ್ಪಿಸುವದಕ್ಕಾಗಿ ನಾವು ಶಿಕ್ಷಣದಲ್ಲಿ ಚಲನಚಿತ್ರಗಳನ್ನು ಹೆಚ್ಚಾಗಿ ಉಪಯೋಗಿಸಬೇಕು. ಮಕ್ಕಳನ್ನು ಸಾಲೆಗೆ ಬರುವಂತೆ ಆಕರ್ಷಿಸುವದಕ್ಕೆ ಇದರಿಂದ ಬಹಳ ಸಹಾಯವಾಗುವದು.

## ೨. ವಿಜ್ಞಾನದಿಂದಾಗುವ ಲಾಭಗಳು

ಇಂದು ನಾವು ವಿಜ್ಞಾನಯುಗದಲ್ಲಿ ವಾಸಿಸುತ್ತಿರುವೆವು. ವಿಜ್ಞಾನದ ಸಹಾಯದಿಂದ ನಾವು ಸೃಷ್ಟಿಯನ್ನೇ ಗೆಲ್ಲುತ್ತಿರುವೆವು. ನಮ್ಮ ಸುಖವನ್ನು ಹೆಚ್ಚಿಸಲು ಅನೇಕ ಯಂತ್ರ ಸಾಮುಗ್ರಿಗಳನ್ನು ನಿರ್ಮಿಸಿಕೊಂಡಿರುವೆವು. ಇದರಿಂದ ಸುಖವನ್ನು ಅನುಭವಿಸಲು ನಮಗೆ ವೇಳೆಯು ದೊರೆತಿರುವದು. ಈ ಅಗಾಧವಾದ ಶಕ್ತಿಯನ್ನು ಮಾನವನು ನಾಶಕ್ಕಾಗಿ ಉಪಯೋಗಿಸುತ್ತಿ ರುವನು. ಅಣುಬಾಂಬಿನಿಂದ ನಾವು ಜಗತ್ತನ್ನೇ ನಾಶಮಾಡಬಹುದು. ಆದರೆ ಅದೇ ಶಕ್ತಿಯನ್ನು ಒಳ್ಳೇ ಕೆಲಸಕ್ಕಾಗಿ ಉಪಯೋಗಿಸಿಕೊಂಡರೆ ಭೂಲೋಕವುನಂದನವನವಾಗುವದು. ನಾವು ವಿಜ್ಞಾನದ ದಾಸರಾಗಬಾರದು; ಅದರ ಒಡೆಯರಾಗಬೇಕು; ಮಾನವನ ಕಲ್ಯಾಣಕ್ಕಾಗಿ ಅದನ್ನು ಉಪ ಯೋಗಿಸಬೇಕು.

ಪ್ರಾಚೀನ ಕಾಲದಲ್ಲಿ ಚೀನಾದೇಶದಿಂದ ಬೌದ್ಧಧರ್ಮವನ್ನು ಅಭ್ಯಾಸ ಮಾಡುವದಕ್ಕಾಗಿ ಅನೇಕ ಯಾತ್ರಿಕರು ಹಿಂದುಸ್ಥಾನಕ್ಕೆ ಬಂದರು. ಈಗಿ

ನಂತೆ ಆಗ ಪುಸ್ತಕಗಳಿರಲಿಲ್ಲ. ಆದ್ದರಿಂದ ಅವರು ಅನೇಕ ಗಂಡಾಂತರಗಳನ್ನು ದಾಟಿ ಹಿಂದುಸ್ತಾನಕ್ಕೆ ಬರಬೇಕಾಯಿತು. ಮುದ್ರಣಾಲಯಗಳಿಲ್ಲದ್ದರಿಂದ ವೃತ್ತಪತ್ರಿಕೆಗಳಾಗಲಿ, ಪುಸ್ತಕಗಳಾಗಲಿ ಇರಲಿಲ್ಲ. ಜನರು ಹಸ್ತಪ್ರತಿಗಳನ್ನು ತಯಾರಿಸಿ ವಿದ್ಯಾಭ್ಯಾಸಕ್ಕಾಗಿ ಅವುಗಳನ್ನೇ ಉಪಯೋಗಿಸುತ್ತಿದ್ದರು. ಪುಸ್ತಕಗಳ ಸಹಾಯವಿಲ್ಲದೆ ವಿದ್ಯಾಭ್ಯಾಸ ಮಾಡುವದು ಎಷ್ಟು ಕಷ್ಟದ ಕೆಲಸ! ಆದ್ದರಿಂದ ಶಿಕ್ಷಣ ಪ್ರಚಾರವಾಗಲು ಆಗಿನಕಾಲದಲ್ಲಿ ಸಾಧ್ಯವಿರಲಿಲ್ಲ. ನಾಲಂದಾ, ತಕ್ಷಶಿಲಾ ಮುಂತಾದ ವಿಶ್ವವಿದ್ಯಾಲಯಗಳಲ್ಲಿ ದೊಡ್ಡ ದೊಡ್ಡ ಗ್ರಂಥಾಲಯಗಳಿದ್ದವು. ಜನರು ಜಗತ್ತಿನ ಮೂಲೆ ಮೂಲೆಗಳಿಂದ ಇಲ್ಲಿಗೆ ಬಂದು ತಮಗೆ ಬೇಕಾದ ಗ್ರಂಥಗಳನ್ನು ಓದುತ್ತಿದ್ದರು. ಈಗ ಅಷ್ಟು ಶ್ರಮ ವನ್ನು ಪಡಬೇಕಾಗಿಲ್ಲ. ಸುಲಭ ಬೆಲೆಯಲ್ಲಿ ನಮಗೆ ಬೇಕಾದ ವಿಷಯವನ್ನು ತಿಳಿದುಕೊಳ್ಳಬಹುದು. ಗ್ರಂಥಾಲಯಗಳೇ ಆಧುನಿಕ ವಿಶ್ವವಿದ್ಯಾಲಯಗಳಾ ಗಿರುವವು. ಶಾಲೆ ಕಾಲೇಜುಗಳಿಗೆ ಹೋಗದಿದ್ದರೂ ಪುಸ್ತಕಗಳ ಸಹಾಯ ದಿಂದ ಜ್ಞಾನವನ್ನು ಗಳಿಸಬಹುದು. ಸಾಹಿತ್ಯವು ಜನಸಾಮಾನ್ಯರಿಗೆ ಲಭ್ಯ ವಾಗಿದೆ. ವೃತ್ತಪತ್ರಿಕೆಗಳಿಂದ ಜಗತ್ತಿನಲ್ಲಿ ನಡೆಯುತ್ತಿರುವ ಸಂಗತಿಗಳನ್ನು ತಿಳಿದುಕೊಳ್ಳಬಹುದು. ಪ್ರತಿಯೊಂದು ಪಟ್ಟಣದಲ್ಲಿಯೂ ಪುಕ್ಕಟೆ ವಾಚನಾಲಯಗಳಿರುವವು. ಆದ್ದರಿಂದ ಜ್ಞಾನಪ್ರಸಾರಕ್ಕೆ ಪುಸ್ತಕಗಳಿಂದ ಬಹಳ ಸಹಾಯವಾಗುವದು.

ಕಾಶೀ ಯಾತ್ರೆಗೆ ಹೋದವನು ತಿರುಗಿ ಬರುತ್ತಾನೆಂಬ ನಿಯಮವಿರ ಲಿಲ್ಲ. ಪ್ರವಾಸ ಮಾಡಲು ಆಗ ಯಾವ ವಾಹನಗಳೂ ಇರಲಿಲ್ಲ. ಕಾಲು ನಡಿಗೆಯಿಂದಲೇ ಪ್ರವಾಸ ಮಾಡಬೇಕಾಗುತ್ತಿತ್ತು. ಜಲಪರ್ಯಟನ ಮಾಡುವದಂತೂ ಅತಿ ಗಂಡಾಂತರಕಾರಿಯಾಗಿತ್ತು. ಗಾಳಿಬಿಟ್ಟಾಗ ಮಾತ್ರ ಸಂಚಾರವು ಸಾಧ್ಯವಿತ್ತು. ಅಪಘಾತಗಳೂ ವಿಶೇಷವಾಗಿದ್ದವು. ಇದರಿಂದ ಬೇರೆ ದೇಶಗಳ ಸಂಗಡ ವ್ಯಾಪಾರವು ವಿಶೇಷವಾಗಿ ಬಳಿಕೆಯಲ್ಲಿರಲಿಲ್ಲ. ದೇಶ ದೇಶಗಳಲ್ಲಿ ಸಂಪರ್ಕವು ಕಡಿಮೆಯಾಗಿತ್ತು. ಈ ಯುಗದಲ್ಲಿ ಅದೆ ಲ್ಲವೂ ಬದಲಾಗಿದೆ. ಬಹಳ ವೇಗದಿಂದ ಹಡಗಗಳ ಮುಖಾಂತರವಾಗಿ ನಾವು ಸಂಚಾರ ಮಾಡಬಲ್ಲೆವು. ಜಲಪರ್ಯಟನ ಮಾಡುವದಕ್ಕೆ ಯಾವ ರೀತಿಯ ಭೀತಿಯೂ ಇರುವದಿಲ್ಲ. ದೇಶದಲ್ಲಿ ಸಂಚಾರ ಮಾಡುವದಕ್ಕೆ

ಉಗಿಬಂಡಿಗಳು ಪ್ರಾಕಾರದಲ್ಲಿ ಬಂದಿರುವವು. ಆಕಾಶದಲ್ಲಿ ಸಂಚಾರ ಮಾಡುವದಕ್ಕೆ ವಿಮಾನಗಳಿರುವವು. ಮುಂಜಾನೆ ಮುಂಬಯಿಯಲ್ಲಿದ್ದರೆ ಸಂಜೆಗೆ ದಿಲ್ಲಿಯಲ್ಲಿರಬಹುದು. ಇಡೀ ಜಗತ್ತೇ ಒಂದು ದೇಶದಂತಾಗಿದೆ. ಯಾವದೊಂದು ದೇಶದಲ್ಲಿ ಬರಗಾಲ ಬಿದ್ದರೆ ಬೇರೆ ದೇಶಗಳಿಂದ ಆಹಾರಗಳನ್ನು ತರಿಸುತ್ತೇವೆ. ಯಂತ್ರ ಸಾಮಗ್ರಿಗಳು ಇಂಗ್ಲಂಡ, ಅಮೇರಿಕಾ ಮುಂತಾದ ದೇಶಗಳಿಂದ ನಮ್ಮ ದೇಶಕ್ಕೆ ಬರುತ್ತವೆ. ಫ್ರಾನ್ಸದಿಂದ ದ್ರಾಕ್ಷಿಯನ್ನು ತರಿಸುತ್ತೇವೆ. ಪ್ರಾಚೀನ ಕಾಲದಲ್ಲಿ ಶ್ರೀಮಂತರಿಗೆ ಎಂದು ಮೀಸಲಾಗಿಟ್ಟಿದ್ದ ಸುಖ ಪದಾರ್ಥಗಳು ಇಂದು ಎಲ್ಲರಿಗೂ ಲಭ್ಯವಾಗಿವೆ. ಒಂದು ದೇಶದಿಂದ ಮತ್ತೊಂದು ದೇಶಕ್ಕೆ ವಿದ್ಯಾರ್ಥಿಗಳು ವಿದ್ಯಾಭ್ಯಾಸಕ್ಕಾಗಿ ಹೋಗುತ್ತಾರೆ. ಜನಸಂಪರ್ಕವೂ ಹೆಚ್ಚಾಗಿದೆ. ಇಂಗ್ಲಿಷ, ಫ್ರೆಂಚ, ಜರ್ಮನಿ ಮುಂತಾದ ಬೇರೆ ದೇಶಗಳ ಸಾಹಿತ್ಯವನ್ನು ಅಭ್ಯಾಸ ಮಾಡಲು ತುಂಬಾ ಅನುಕೂಲವಿದೆ.

ಪುಕ್ಕಟೆಯಾಗಿ ಔಷಧ ಕೊಡುವದಕ್ಕಾಗಿ ಸರಕಾರದವರು ಪಟ್ಟಣಗಳಲ್ಲಿ ಔಷಧಾಲಯಗಳನ್ನು ತೆಗೆದಿರುವರು. ಮನುಷ್ಯನ ರೋಗಗಳನ್ನು ಅರಿತುಕೊಳ್ಳುವದಕ್ಕಾಗಿ ಹೊಸ ಹೊಸ ಶೋಧಗಳನ್ನು ಮಾಡುತ್ತಿರುವರು. ಎಕ್ಸರೇದ ಸಹಾಯದಿಂದ ಶರೀರದೊಳಗಿನ ರೋಗಗಳನ್ನು ಅರಿತುಕೊಳ್ಳುವರು. ಶರೀರದಲ್ಲಿಯ ಯಾವದೊಂದು ಭಾಗವು ಕೆಟ್ಟಿದ್ದರೆ ಅದನ್ನು ಶಸ್ತ್ರ ಚಿಕಿತ್ಸೆಯಿಂದ ನೆಟ್ಟಗೆ ಮಾಡುವರು. ರೋಗಗಳನ್ನು ಬೇಗನೆ ಗುಣಪಡಿಸುವದಕ್ಕಾಗಿ ಚುಚ್ಚು ಮದ್ದುಗಳನ್ನು ಉಪಯೋಗಿಸುತ್ತಿರುವರು. ಪ್ಲೇಗ ಮತ್ತು ಕಾಲರಾಗಳಿಂದ ಈಗ ಐವತ್ತು ವರ್ಷಗಳ ಹಿಂದೆ ಬಹಳ ಅನಾಹುತಗಳಾಗುತ್ತಿದ್ದವು. ಊರಿಗೆ ಊರೇ ಈ ರೋಗಗಳಿಂದ ಬರಿದಾಗುತ್ತಿದ್ದವು. ಈಗ ಪ್ಲೇಗ ಮತ್ತು ಕಾಲರಾಗಳು ಅತಿ ಕಡಿಮೆಯಾಗಿರುವವು. ವೈಜ್ಞಾನಿಕರು ಹೊಸ ಹೊಸ ಸಂಶೋಧನೆಗಳನ್ನು ಮಾಡುವದರಲ್ಲಿ ತತ್ಪರರಾಗಿದ್ದಾರೆ.

ಬಾನುಲಿಯ ಸಹಾಯದಿಂದ ಮುಂಬಯಿ, ದಿಲ್ಲಿ, ಮದ್ರಾಸದಲ್ಲಿಯ ಸಂಗೀತ ಕಾರ್ಯಕ್ರಮಗಳನ್ನು ಇಲ್ಲಿ ಕುಳಿತೇ ಕೇಳಬಹುದು. ಬಾನುಲಿಯು ಮನೋರಂಜನೆಯ ಸಾಧನವಾಗಿರುವದಲ್ಲದೆ, ಜ್ಞಾನವನ್ನು ಬೆಳಿಸುವದಕ್ಕೂ

ಉಪಯುಕ್ತವಾಗಿದೆ. ರಶಿಯಾ ದೇಶದಲ್ಲಿ ಜನರ ಜ್ಞಾನದ ಮಟ್ಟವನ್ನು ಹೆಚ್ಚಿಸುವದಕ್ಕಾಗಿ ಇದನ್ನು ಉಪಯೋಗಿಸಿದ್ದಾರೆ. ಬಾನುಲಿಯಿಂದ ಓದು ಬರೆಹ ಬಾರದ ಜನರೂ ಪ್ರಯೋಜನ ಪಡೆಯಬಹುದು. ವಿಮಾನ ಮತ್ತು ಹಡಗಗಳು ಗಂಡಾಂತರದಲ್ಲಿದ್ದಾಗ ಅವುಗಳಿಗೆ ಸಹಾಯವನ್ನು ಸಲ್ಲಿಸಲು ಬಾನುಲಿಯಿಂದಲೇ ಸಹಾಯವಾಗುವದು. ಹಡಗ ಮತ್ತು ವಿಮಾನಗಳಲ್ಲಿ ಬಾನುಲಿಯನ್ನು ಇಟ್ಟು ಕೊಂಡಿರುವರು. ಅವರಿಗೆ ಗಂಡಾಂತರ ಪ್ರಾಪ್ತ ವಾದಾಗ ಅವರು ಬಾನುಲಿಯ ಮುಖಾಂತರವಾಗಿ ತಿಳಿಸುವರು. ಇದರಿಂದ ಅವರನ್ನು ಗಂಡಾಂತರದಿಂದ ಪಾರು ಮಾಡಲು ಸಾಧ್ಯವಾಗುವದು. ತಾರಾ ಯಂತ್ರದ ಮುಖಾಂತರವಾಗಿ ಬೇಗನೆ ಸುದ್ದಿಗಳನ್ನು ಕಳಿಸಬಹುದು. ವ್ಯಾಪಾರಸ್ಥರಿಗೆ ತಾರಾಯಂತ್ರದಿಂದ ಬಹಳ ಲಾಭವಿರುವದು.

ವಿಜ್ಞಾನದಿಂದ ಆಗಿರುವ ದೊಡ್ಡ ಲಾಭಗಳಲ್ಲಿ ವಿದ್ಯುತ್ ಎಲ್ಲಕ್ಕೂ ಶ್ರೇಷ್ಠವಾದುದೆಂದು ಹೇಳಬಹುದು. ವಿದ್ಯುತ್ತಿನ ಸಹಾಯದಿಂದ ಕಾರ ಖಾನೆಗಳನ್ನು ನಡಿಸಬಹುದು, ಹೊಲಗಳಿಗೆ ನೀರಿನ ಪೂರೈಕೆಯನ್ನುಮಾಡ ಬಹುದು, ಹೊಲಗಳಲ್ಲಿ ಊಳಬಹುದು, ಪುಸ್ತಕಗಳನ್ನು ಮುದ್ರಿಸಬಹುದು, ರೇಲ್ವೆಗಳನ್ನು ನಡಿಸಬಹುದು. ವಿದ್ಯುತ್ತಿನಿಂದ ಆಗದ ಕೆಲಸವೇ ಈ ಯುಗ ದಲ್ಲಿ ಇಲ್ಲ. ನಮ್ಮ ಸೇವಕನಂತೆ ಯಾವ ಕೆಲಸ ಮಾಡುವದಕ್ಕೂ ಸಿದ್ಧವಾ ಗಿದೆ. ಸಾವಿರಾರು ಜನರು ಮಾಡುವ ಕೆಲಸವನ್ನು ಅತಿ ಸ್ವಲ್ಪ ವೇಳೆಯಲ್ಲಿ ವಿದ್ಯುತ್ತು ಮಾಡಬಲ್ಲದು.

ವಿಜ್ಞಾನದಿಂದ ಜೀವನವನ್ನು ಸುಖಮಯವನ್ನಾಗಿ ಮಾಡಿಕೊಳ್ಳು ವದು ಮಾನವನನ್ನೇ ಅವಲಂಬಿಸಿರುವದು. ಅದರ ಗುಲಾಮನಾಗದೆ ಅವನು ಅದರ ಒಡೆಯನಾಗಬೇಕು.

## ೩. ಗ್ರಾಮ ಸುಧಾರಣೆ

ಹಿಂದುಸ್ತಾನವು ಹಳ್ಳಿಗಳ ದೇಶವು. ಹಳ್ಳಿಯ ಉದ್ಧಾರವಾದರೆ ಮಾತ್ರ ನಮ್ಮ ದೇಶವು ಊರ್ಜಿತ ಸ್ಥಿತಿಯನ್ನು ಹೊಂದಬಲ್ಲದು. ಒಂದಾ ನೊಂದು ಕಾಲದಲ್ಲಿ ಹಳ್ಳಿಗಳು ಎಲ್ಲ ದೃಷ್ಟಿಯಿಂದಲೂ ಸ್ವಯಂಪೂರ್ಣವಾಗಿ ದ್ದವು. ಆರ್ಥಿಕ ದೃಷ್ಟಿಯಿಂದ ಅವುಗಳ ಪರಿಸ್ಥಿತಿಯು ಚೆನ್ನಾಗಿತ್ತು.

ತಮ್ಮ ತಮ್ಮಲ್ಲಿಯ ನ್ಯಾಯಗಳನ್ನು ಹಳ್ಳಿಯವರೇ ತೀರಿಸಿಕೊಳ್ಳುತ್ತಿದ್ದರು. ಈಗಿನಂತೆ ಅವರು ಪಟ್ಟಣಗಳನ್ನು ಅನುಸರಿಸುತ್ತಿದ್ದಿಲ್ಲ. ಈಗ ಹಳ್ಳಿಯಲ್ಲಿ ಜೀವನ ಸೌಕರ್ಯಗಳು ಕಡಿಮೆಯಾಗಿರುವದರಿಂದ ಜನರು ಪಟ್ಟಣಗಳನ್ನು ಸೇರುತ್ತಿರುವರು. ಇದರಿಂದ ಹಳ್ಳಿಗಳು ಭರದಿಂದ ಇಲ್ಲದಂತಾಗುತ್ತಿರುವವು. ಈ ಸ್ಥಿತಿಯು ಹೀಗೆಯೇ ಉಳಿದರೆ ನಮ್ಮ ಅಳಿಗಾಲವು ಸಮೀಪಿಸಿದಂತೆಯೇ.

ಹಳ್ಳಿಗಳಲ್ಲಿಯ ಮನೆಗಳು ಅನಾರೋಗ್ಯದ ತವರು ಮನೆಗಳಾಗಿವೆ. ಮನೆಯ ಸುತ್ತುಮುತ್ತಲೂ ಹೊಲಸು ಬಿದ್ದಿರುವದು. ರಸ್ತೆಗಳು ಸರಿಯಾಗಿ ಇರುವದಿಲ್ಲ. ನೀರು ಹರಿದು ಹೋಗುವದಕ್ಕೆ ವ್ಯವಸ್ಥೆಯಿರುವದಿಲ್ಲ. ದನಗಳ ಮಲವನ್ನು ಮನೆಯ ಹತ್ತರ ಕೂಡಹಾಕುವದರಿಂದ ಅನೇಕ ರೋಗ ಜಂತುಗಳು ಬೆಳೆಯುವವು. ಮನೆಗಳಲ್ಲಿ ಪ್ರಕಾಶ ಕಡಿಮೆಯಿರುವದು. ಸ್ವಚ್ಛತೆಯ ಮಹತ್ವವನ್ನು ನಾವು ಹಳ್ಳಿಗರಿಗೆ ತಿಳಿಸಿಕೊಡಬೇಕು. ರಸ್ತೆಗಳನ್ನು ಸ್ವಚ್ಛವಾಗಿಡಲು ಹೇಳಬೇಕು.

ಹಳ್ಳಿಗಳು ನಿರಕ್ಷರತೆಯ ಕೇಂದ್ರಗಳಾಗಿರುವವು. ಮೊದಲು ನಾವು ಅವರನ್ನು ಅಕ್ಷರಸ್ಥರನ್ನಾಗಿ ಮಾಡಬೇಕು. ಒತ್ತಾಯದಿಂದ ಅವರನ್ನು ಸುಶಿಕ್ಷಿತರನ್ನಾಗಿ ಮಾಡುವದು ಸಾಧ್ಯವಿಲ್ಲ. ಶಿಕ್ಷಣದ ಮಹತ್ವವನ್ನು ತಿಳಿಸಿ ಅವರು ಕಲಿಯುವಂತೆ ಮಾಡಬೇಕು. ಹಗಲು ಹೊತ್ತಿನಲ್ಲಿ ಅವರು ಹೊಲದಲ್ಲಿ ಕೆಲಸ ಮಾಡುವರು. ಆದ್ದರಿಂದ ಅವರಿಗಾಗಿ ನಾವು ರಾತ್ರಿ ವೇಳೆಯಲ್ಲಿ ಶಾಲೆಗಳನ್ನು ಹಾಕಬೇಕು. ಅವರಿಗೆ ಓದುವದಕ್ಕೂ ಬರೆಯುವದಕ್ಕೂ ಬಂದರೆ ನಮ್ಮ ಕೆಲಸತೀರಲಿಲ್ಲ. ವಾಚನಾಭಿರುಚಿಯನ್ನು ಉಂಟುಮಾಡಬೇಕು. ಬೇರೆ ಬೇರೆ ದೇಶಗಳಲ್ಲಿ ಜನರು ಹ್ಯಾಗೆ ಒಕ್ಕಲತನವನ್ನು ಮಾಡುವರು ಎಂಬುದನ್ನು ತಿಳಿಸಿಕೊಡಬೇಕು. ಒಕ್ಕಲತನದಲ್ಲಿ ಸುಧಾರಣೆಯಾದರೆ ನಮ್ಮ ದೇಶದ ಹುಟ್ಟುವಳಿಯೂ ಹೆಚ್ಚಾಗುವದು. ಹಳ್ಳಿಗರು ಸುಶಿಕ್ಷಿತರಾಗುವದರಿಂದ ಬಡಿದಾಟ, ಕೊಲೆ ಸುಲಿಗೆಗಳೂ ಕಡಿಮೆಯಾಗಬಹುದು. ನ್ಯಾಯಾಲಯಕ್ಕೆ ಹೋಗುವದರಿಂದ ಏನೂ ಲಾಭವಿಲ್ಲವೆಂಬುದನ್ನು ಅರಿತುಕೊಳ್ಳಬಹುದು.

ಆರ್ಥಿಕ ದೃಷ್ಟಿಯಿಂದ ಹಳ್ಳಿಗಳ ಸ್ಥಿತಿಯು ಬಹಳ ಶೋಚನೀಯವಾಗಿರುವದು. ವರ್ಷದಲ್ಲಿ ಒಂಬತ್ತು ತಿಂಗಳು ಒಕ್ಕಲಿಗನು ಹೊಲದಲ್ಲಿ

ಕೆಲಸ ಮಾಡುವನು. ಮೂರು ತಿಂಗಳು ಅವನಿಗೆ ಉದ್ಯೋಗವೇ ಇರುವದಿಲ್ಲ. ಒಕ್ಕಲತನದ ಜೊತೆಗೆ ಒಂದುಉಪಉದ್ಯೋಗವನ್ನು ಅವನು ಮಾಡಬೇಕಾಗಿರುವದು. ಇದರಿಂದ ಅವನ ಸಾಂಪತ್ತಿಕ ಸ್ಥಿತಿಯು ಸುಧಾರಿಸುವದಲ್ಲದೆ ವೇಳೆಯ ಸದುಪಯೋಗವೂ ಆಗುವದು. ಗಾಂಧೀಜಿಯವರು ಹಳ್ಳಿಗಳ ಸುಧಾರಣೆಗೆ ಬಹಳ ಮಹತ್ವ ಕೊಟ್ಟಿದ್ದರು. ತಾವು ಸ್ವತಃ ಹಳ್ಳಿಯಲ್ಲಿದ್ದುಕೊಂಡು ಹಳ್ಳಿಗಳ ಸುಧಾರಣೆಯನ್ನು ಹ್ಯಾಗೆ ಮಾಡಬೇಕೆಂಬದನ್ನು ತೋರಿಸಿಕೊಟ್ಟರು. ಪ್ರತಿಯೊಬ್ಬ ಭಾರತೀಯನೂ ತನಗೆ ಬೇಕಾಗುವ ಬಟ್ಟೆಗಳನ್ನು ಸಿದ್ಧಪಡಿಸಿಕೊಳ್ಳುವದಕ್ಕಾಗಿ ನೂಲಬೇಕೆಂದು ಹೇಳಿದರು. ನಾವು ಬಟ್ಟೆಗಳ ಸಲುವಾಗಿ ಕೋಟ್ಯಾವಧಿ ರೂ. ಗಳನ್ನು ಪರದೇಶದವರಿಗೆ ಕೊಡುತ್ತೇವೆ. ಜೇನು ಸಾಕುವದು, ನೇಯುವದು, ನೂಲುವದು ಮುಂತಾದ ಗ್ರಾಮೋದ್ಯೋಗಗಳನ್ನು ಪುನರುಜ್ಜೀವನಗೊಳಿಸಬೇಕಾಗಿರುವದು. ಇದರಿಂದ ನಿರುದ್ಯೋಗ ಸಮಸ್ಯೆಯೂ ಪರಿಹಾರವಾಗುವದು.

ಒಕ್ಕಲತನದಲ್ಲಿ ಬಹಳ ಸುಧಾರಣೆಯಾಗಬೇಕಾಗಿದೆ. ವಿಜ್ಞಾನದ ಸಹಾಯದಿಂದ ನಮ್ಮ ಹುಟ್ಟುವಳಿಯನ್ನು ಹೆಚ್ಚಿಸಬಹುದು. ಹಳ್ಳಿಗಳಿಗೆ ವಿದ್ಯುತ್ತನ್ನು ಪೂರೈಸಿದರೆ ಸಣ್ಣ ಸಣ್ಣ ಕೈಗಾರಿಕೆಗಳನ್ನು ನಡಿಸಲು ಸಹಾಯವಾಗುವದು. ಒಕ್ಕಲತನವನ್ನು ಅಭಿವೃದ್ಧಿಪಡಿಸುವದಕ್ಕಾಗಿ ಹಳ್ಳಿಗಳಲ್ಲಿ ಬ್ಯಾಂಕುಗಳನ್ನು ಸ್ಥಾಪಿಸಬೇಕು. ಈ ಬ್ಯಾಂಕುಗಳಿಂದ ರೈತರಿಗೆ ಕಡಿಮೆ ಬಡ್ಡಿಯ ದರದಿಂದ ಹಣವನ್ನು ಸಾಲವಾಗಿ ಕೊಡಬೇಕು. ಗ್ರಾಮಗಳಲ್ಲಿ ವಾಚನಾಲಯಗಳನ್ನು ತೆರೆಯಬೇಕು. ಪುಕ್ಕಟೆಯಾಗಿ ಔಷಧೋಪಚಾರ ಮಾಡುವದಕ್ಕಾಗಿ ದವಾಖಾನೆಗಳನ್ನು ಸ್ಥಾಪಿಸಬೇಕು. ಹಳ್ಳಿಗರ ಸಲುವಾಗಿ ಬಾನುಲಿಯಲ್ಲಿ ಕೆಲವುಕಾರ್ಯಕ್ರಮಗಳಿರಬೇಕು. ಜಗತ್ತಿನಲ್ಲಿಯ ಸುದ್ದಿಗಳನ್ನು ತಿಳಿದುಕೊಳ್ಳಲು ಬಾನುಲಿಯಿಂದ ಅವರಿಗೆ ಸಾಧ್ಯವಾಗುವದು. ಹಳ್ಳಿಯ ಜನರು ಬಡವರಾಗಿರುವದರಿಂದ ಅವರಿಗೆ ಬಾನುಲಿಯನ್ನು ಕೊಳ್ಳುವದು ಸಾಧ್ಯವಾಗುವದಿಲ್ಲ. ಗ್ರಾಮಪಂಚಾಯತಿಗಳಿಗೆ ಬಾನುಲಿಗಳನ್ನು ಪುಕ್ಕಟೆಯಾಗಿ ಸರಕಾರವು ಕೊಡಬೇಕು. ಊರಿನಮಧ್ಯದಲ್ಲಿ ಬಾನುಲಿಯನ್ನು ಇಟ್ಟು ಎಲ್ಲರಿಗೂ ಕೇಳಿಸುವಂತೆ ಮಾಡಿದರೆ, ಹಳ್ಳಿಗರಿಗೆ ಮನೋರಂಜನೆಯಾಗುವದಲ್ಲದೆ ಅನೇಕ ವಿಷಯಗಳನ್ನೂ ಅವರು ತಿಳಿದುಕೊಳ್ಳಬಲ್ಲರು.

ವಿಶ್ವವಿದ್ಯಾನಿಲಯಗಳು ಹಳ್ಳಿಯಲ್ಲಿಯ ಜನರ ಜ್ಞಾನದ ಮಟ್ಟವನ್ನು ಹೆಚ್ಚಿಸಲು ಸಹಾಯ ಮಾಡಬಲ್ಲವು. ಆಯಾ ವಿಷಯಗಳಲ್ಲಿ ತಜ್ಞರಾದವರಿಂದ ಗ್ರಾಮಾಂತರಗಳಲ್ಲಿ ಉಪನ್ಯಾಸಗಳನ್ನು ಏರ್ಪಡಿಸಬೇಕು. ನಮ್ಮ ಜನರಲ್ಲಿ ಜ್ಞಾನಲಾಲಸೆಯೇ ಇಲ್ಲದಂತಾಗಿದೆ. ಇದರಿಂದ ಅವರ ಜೀವನದಲ್ಲಿ ಆನಂದವೇ ಇಲ್ಲದಂತಾಗಿರುವದು. ಸುಶಿಕ್ಷಿತರಾದವರು ಹಳ್ಳಿಗಳಲ್ಲಿ ಹೋಗಿ ಹಳ್ಳಿಯಲ್ಲಿಯ ಅಜ್ಞಾನವನ್ನು ದೂರ ಮಾಡಬೇಕು. ಇಂಗ್ಲಿಷ ಶಿಕ್ಷಣದಿಂದ ಹಳ್ಳಿಗಳ ಬಗ್ಗೆ ನಮ್ಮಲ್ಲಿ ತಿರಸ್ಕಾರವುಂಟಾಗಿದೆ. ಕಲಿತವರು, ಕಲಿಯದವರು ಎಂಬ ಎರಡು ಪಂಗಡಗಳಾಗಿರುವವು. ಕಲಿತವರು ಜನಸಾಮಾನ್ಯರೊಡನೆ ಹೆಚ್ಚಾಗಿ ಸಂಪರ್ಕವನ್ನು ಬೆಳೆಸಬೇಕು. ಶಿಕ್ಷಣ ಪಡೆದವರು ಹಳ್ಳಿಗಳ ವಿಷಯದಲ್ಲಿ ಮಾಡಬೇಕಾದ ಕರ್ತವ್ಯವನ್ನು ಮರೆಯಬಾರದು. ಸಮಾಜ ಮತ್ತು ವ್ಯಕ್ತಿಗಳಲ್ಲಿ ನಿಕಟವಾದ ಸಂಬಂಧವಿರುವದು, ವ್ಯಕ್ತಿಯು ಸಮಾಜದ ಹಿತಕ್ಕೂ, ಸಮಾಜವು ವ್ಯಕ್ತಿಯ ವಿಕಾಸಕ್ಕೂ ಲಕ್ಷ್ಯ ಕೊಡಬೇಕು. ಸುಶಿಕ್ಷಿತರಾದವರು ಯಾರ ಹಣದಿಂದ ಶಿಕ್ಷಣವನ್ನು ಪಡೆದಿರುವರು ಎಂಬುದನ್ನು ಮರೆಯಬಾರದು. ದಾರಿದ್ರ್ಯ, ಅಜ್ಞಾನ, ರೋಗಗಳಿಂದ ಬಳಲುತ್ತಿರುವ ಹಳ್ಳಿಗರನ್ನು ಉದ್ಧರಿಸುವದಕ್ಕಾಗಿ ಪ್ರತಿಯೊಬ್ಬನೂ ಪ್ರಯತ್ನಿಸುವದು ಅವಶ್ಯವಾಗಿದೆ. ಭಾರತವು ರಾಮರಾಜ್ಯವಾಗಬೇಕಾದರೆ ಹಳ್ಳಿಗಳು ಉದ್ಧಾರವಾಗಬೇಕು. ಯಾಕಂದರೆ ಹಳ್ಳಿಗಳೇ ಹಿಂದುಸ್ತಾನದ ಬೆನ್ನೆಲುಬುಗಳು.

## ೪. ಹಳ್ಳಿಯವಾಸ ಮತ್ತು ಪಟ್ಟಣದ ವಾಸ

ಪಟ್ಟಣಗಳು ಭರದಿಂದ ಬೆಳೆಯತೊಡಗಿವೆ. ಜನರು ಹಳ್ಳಿಯನ್ನು ತೊರೆದು ಪಟ್ಟಣವನ್ನು ಸೇರತೊಡಗಿರುವರು. ಇದರಿಂದ ನಮಗೆ ಯಾವ ಲಾಭವೂ ಆಗಲಾರದು. ಯಾಕಂದರೆ ಹಿಂದುಸ್ತಾನದಲ್ಲಿ ೧೦೦ ಕ್ಕೆ ೮೦ ರಷ್ಟು ಜನರು ಒಕ್ಕಲತನವನ್ನೇ ಅವಲಂಬಿಸಿರುವರು. ಪಟ್ಟಣಗಳನ್ನು ಸೇರುವದರಿಂದ ನಮ್ಮ ಒಕ್ಕಲತನವು ಹಾಳಾಗುವದು. ಒಕ್ಕಲತನವು ಊರ್ಜಿತಸ್ಥಿತಿಯನ್ನು ಹೊಂದಬೇಕಾದರೆ ಹಳ್ಳಿಗಳ ಉದ್ಧಾರವಾಗಬೇಕು. ಜನರು ಹಳ್ಳಿಯಲ್ಲಿ ವಾಸಿಸಿ ಭೂಮಿಯನ್ನು ಚನ್ನಾಗಿ ಊಳಬೇಕು, ಹೆಚ್ಚು

ಬೆಳೆಯನ್ನು ತೆಗೆದುಕೊಳ್ಳಬೇಕು. ಹಿಂದುಸ್ತಾನದಲ್ಲಿ ನೈಸರ್ಗಿಕ ಸಂಪತ್ತು ಬೇಕಾದಷ್ಟಿರುವದು. ಆದರೆ ಅದರ ಪ್ರಯೋಜನವನ್ನು ನಾವು ಮಾಡಿಕೊಂಡಿಲ್ಲ. ಒಕ್ಕಲತನದ ಕಡೆಗೆ ನಾವು ಹೆಚ್ಚು ಲಕ್ಷ್ಯಹಾಕಿಲ್ಲ. ಸುಶಿಕ್ಷಿತರಾದವರು ಒಕ್ಕಲತನಮಾಡುವದೆಂದರೆ ತಮ್ಮ ಯೋಗ್ಯತೆಗೆ ಕುಂದು ಬರುವದೆಂದು ಭಾವಿಸುತ್ತಾರೆ. ಈ ಭಾವನೆಯು ಸಮೂಲವಾಗಿ ನಾಶವಾಗಬೇಕು. ಸುಶಿಕ್ಷಿತರಾದವರು ಒಕ್ಕಲತನದಲ್ಲಿ ಮನಸ್ಸು ಹಾಕಬೇಕು. ಅಂದರೆ ನಮ್ಮ ಹಳ್ಳಿಗಳ ಪರಿಸ್ಥಿತಿಯು ಸುಧಾರಿಸುವದು. ಹಳ್ಳಿಯ ಜೀವನವು ನಿರಾಡಂಬರದ ಜೀವನವು. ಶಾಂತಮಯವಾದ ವಾತಾವರಣವನ್ನು ನಾವು ಇಲ್ಲಿ ಕಾಣಬಹುದು.

ಹಿಂದಿನ ಕಾಲದ ಋಷಿಗಳು ಮತ್ತು ತಪಸ್ವಿಗಳು ತಮಗೆ ಅರಣ್ಯವೇ ಅನುಕೂಲವಾದ ಸ್ಥಳವೆಂದು ಭಾವಿಸಿದ್ದರು. ಅದರಂತೆ ಅವರು ನಿರ್ಜನವಾದ ಅಡವಿಗಳಲ್ಲಿ ತಮ್ಮ ಆಶ್ರಮಗಳನ್ನು ಸ್ಥಾಪಿಸುತ್ತಿದ್ದರು. ಏಕಾಂತವಾದ ಸ್ಥಳದಲ್ಲಿದ್ದುಕೊಂಡು ತಪಸ್ಸು ಮಾಡುತ್ತಿದ್ದರು. ಅವರು ಯಾವಾಗಲೂ ಸೃಷ್ಟಿಯ ಸಾನ್ನಿಧ್ಯದಲ್ಲಿರುತ್ತಿದ್ದರು. ಭೂದೇವಿಯು ಕೊಡುವ ಗಡ್ಡೆ–ಗೆಣಸುಗಳನ್ನು ಸೇವಿಸುತ್ತಿದ್ದರು. ಅವರ ಜೀವನವು ಸ್ವಾಭಾವಿಕವಾಗಿತ್ತು. ಮೋಕ್ಷವನ್ನು ಗಳಿಸುವದೇ ಮಾನವನ ಗುರಿಯಲ್ಲವೇ? ಅದಕ್ಕಾಗಿ ಅವರು ತಮ್ಮ ಲಕ್ಷ್ಯವೆಲ್ಲವನ್ನು ಆಧ್ಯಾತ್ಮದ ಕಡೆಗೆ ಮೀಸಲಾಗಿಟ್ಟಿದ್ದರು. ಯಾಂತ್ರಿಕ ಜೀವನವನ್ನು ಅವರು ನಡಿಸುತ್ತಿರಲಿಲ್ಲ. ಅದಕ್ಕಾಗಿಯೇ ಈ ಶತಮಾನದಲ್ಲಿ ರವೀಂದ್ರನಾಥ ಠಾಕೂರರು ತಮ್ಮ ವಿಶ್ವವಿದ್ಯಾಲಯವನ್ನು ಕಲಕತ್ತೆಯಲ್ಲಿ ಸ್ಥಾಪಿಸದೆ, ನಯನ ಮನೋಹರವೂ ಏಕಾಂತ ಸ್ಥಳವೂ ಆದ ಬೋಲಪುರದಲ್ಲಿ ಸ್ಥಾಪಿಸಿದರು. ಮನುಷ್ಯನು ಪುಸ್ತಕಗಳಿಗಿಂತಲೂ ಹೆಚ್ಚಿಗೆ ಸೃಷ್ಟಿಯಿಂದ ಕಲಿಯುತ್ತಾನೆ ಎಂದು ವರ್ಡ್ಸ್‌ವರ್ಥನು ಹೇಳಿದ್ದಾನೆ. ಇಂಥ ಸೃಷ್ಟಿಸೌಂದರ್ಯವನ್ನು ನಾವು ಹಳ್ಳಿಯಲ್ಲಿ ಕಾಣಬಹುದು.

ಪ್ರೇಮ, ಸರಲತೆ, ಸೌಹಾರ್ದಮಯ ವಾತಾವರಣವನ್ನು ಹಳ್ಳಿಯಲ್ಲಿ ಕಾಣಬಹುದಾಗಿದೆ. ಆದರೆ ಹಳ್ಳಿಯಲ್ಲಿ ದಾರಿದ್ರ್ಯತೆ, ಅಜ್ಞಾನಗಳು ತಾಂಡವವಾಡುತ್ತಿರುವವು. ಹಳ್ಳಿಯಲ್ಲಿಯ ಅಜ್ಞಾನವನ್ನು ಹೋಗಲಾಡಿ

ಸಲು ಸರಕಾರವು ಪ್ರಯತ್ನಿಸಬೇಕು. ಅದರ ಅಜ್ಞಾನವನ್ನು ಹೊಡೆದೋಡಿ ಸದೆ ಅವುಗಳ ಉದ್ಧಾರವಿಲ್ಲ. ಪಟ್ಟಣಗಳಲ್ಲಿ ಎಲ್ಲ ತರದ ಶಿಕ್ಷಣ ಸೌಕರ್ಯ ಗಳಿರುವದರಿಂದ ಅವು ಶಿಕ್ಷಣ ದೃಷ್ಟಿಯಿಂದ ಮುಂದುವರಿದಿರುವವು.

ವಾಚನಾಲಯಗಳು, ಶಾಲೆ ಕಾಲೇಜುಗಳು ದೊಡ್ಡ ದೊಡ್ಡ ಪಟ್ಟಣ ಗಳಲ್ಲಿರುವವು. ಇದರಿಂದ ಸಂಶೋಧಕರಿಗೂ, ಸಾಹಿತಿಗಳಿಗೂ ಪಟ್ಟಣದ ಲ್ಲಿಯ ಅನುಕೂಲತೆಗಳು ಹಳ್ಳಿಯಲ್ಲಿ ದೊರೆಯಲಾರವು. ವಿದ್ವಜ್ಜನರ ಸಂಪರ್ಕವೂ ನಮಗೆ ಪಟ್ಟಣದಲ್ಲಿಯೇ ದೊರೆಯುವವು. ಆಧುನಿಕ ಸುಖ ಸೌಕರ್ಯಗಳಾದರೂ ಪಟ್ಟಣದಲ್ಲಿಯೇ ಇರುವವು. ಪಟ್ಟಣಗಳು ಆಧುನಿಕ ಸಂಸ್ಕೃತಿಯ ಕೇಂದ್ರಗಳಾಗಿರುವವು. ಪಾಶ್ಚಾತ್ಯ ದೇಶಗಳಲ್ಲಿ ಕಾರಖಾನೆ ಗಳು ಅತಿಯಾಗಿ ಬೆಳೆದಿರುವದರಿಂದ ಪಟ್ಟಣಗಳು ಭರದಿಂದ ಬೆಳೆಯ ತೊಡ ಗಿರುವವು. ಆದರೆ ಹಿಂದುಸ್ತಾನದಲ್ಲಿ ಕಾರಖಾನೆಗಳು ಬೆಳೆಯುವವಕ್ಕೆ ಅವ ಕಾಶಗಳು ಕಡಿಮೆ. ನಮ್ಮ ದೇಶವು ಕೃಷಿ ಪ್ರಧಾನ ದೇಶವಾಗಿರುವದು. ೧೦೦ಕ್ಕೆ ೭೫ರಷ್ಟು ಜನರು ಒಕ್ಕಲತನವನ್ನೇ ಅವಲಂಬಿಸಿರುವರು. ಒಕ್ಕಲ ತನದಲ್ಲಿ ಸುಧಾರಣೆಯನ್ನು ಮಾಡಿದರೆ ನಮ್ಮ ಹುಟ್ಟುವಳಿಯು ಹೆಚ್ಚಾಗು ವದು. ಇದರಿಂದ ಆಹಾರದ ಸಲುವಾಗಿ ಬೇರೆ ದೇಶದವರ ಮೇಲೆ ಅವ ಲಂಬಿಸುವ ಪರಿಸ್ಥಿತಿಯು ಇಲ್ಲದಂತಾಗುವದು. ಯಂತ್ರಗಳಿಂದ ನಾವು ಒಕ್ಕಲತನವನ್ನು ನಡಿಸಲಾರೆವು. ಭಾರತೀಯ ರೈತರು ಬಡವರಾಗಿರುವದ ರಿಂದ ಯಂತ್ರಗಳನ್ನು ಕೊಳ್ಳುವದು ಸಾಧ್ಯವಿಲ್ಲ. ಇದಲ್ಲದೆ ಯಂತ್ರ ಗಳಿಂದಲೇ ನಾವು ಒಕ್ಕಲತನವನ್ನು ಮಾಡಿದರೆ ನಮ್ಮ ದನಗಳ ಗತಿಯೇನು? ಎತ್ತುಗಳನ್ನು ಯಾವದಕ್ಕೆ ಉಪಯೋಗಿಸಬೇಕು? ಯಂತ್ರಗಳಿಂದ ಒಕ್ಕಲ ತನ ಮಾಡಬೇಕಾದರೆ ಭೂಮಿಯು ಬಹಳಬೇಕು. ಆದರೆ ಹಿಂದುಸ್ತಾನ ದಲ್ಲಿ ಪ್ರತಿಯೊಬ್ಬ ಒಕ್ಕಲಿಗನ ಹತ್ತರ ನಾಲ್ಕು ಅಥವಾ ಐದು ಎಕರೆ ಭೂಮಿ ಯಿರುವದು. ಇದರಿಂದ ಅವನು ಪಾಶ್ಚಾತ್ಯ ದೇಶಗಳಲ್ಲಿಯಂತೆ ಒಕ್ಕಲತನ ವನ್ನು ಮಾಡಲಾರನು. ಹಳ್ಳಿಗಳು ನಾಶವಾಗುವದರಿಂದ ನಮ್ಮ ಒಕ್ಕಲ ತನವೇ ನಾಶವಾಗುವದು ಹಳ್ಳಿಗಳಲ್ಲಿ ಸುಖಸೌಕರ್ಯಗಳ ಅನುಕೂಲತೆ ಯಿರದ್ದರಿಂದ ಜನರ ಲಕ್ಷ್ಯವು ಪಟ್ಟಣದ ಕಡೆಗೆ ಹೋಗಿರುವದು. ಗ್ರಾಮೋ

ದ್ಯೋಗಗಳು ಊರ್ಜಿತ ಸ್ಥಿತಿಯನ್ನು ಹೊಂದಿದರೆ ಹಳ್ಳಿಯ ಆರ್ಥಿಕ ಪರಿಸ್ಥಿತಿಯು ಸುಧಾರಿಸುವದು.

ಹಳ್ಳಿಗಳಲ್ಲಿ ನಿರುದ್ಯೋಗವು ಹೆಚ್ಚಾಗಿರುವದು. ಸುಶಿಕ್ಷಿತರಾದವರು ಒಕ್ಕಲತನ ಮಾಡಲು ಮುಂದೆ ಬರುವದಿಲ್ಲ. ಒಕ್ಕಲತನವನ್ನು ಬಿಟ್ಟರೆ ಮತ್ತೆ ಬೇರೆ ಉದ್ಯೋಗಗಳನ್ನು ಮಾಡಲು ಹಳ್ಳಿಯಲ್ಲಿ ಅನುಕೂಲತೆಗಳಿಲ್ಲ. ಆದ್ದರಿಂದ ನಿರುದ್ಯೋಗಿಗಳಾದವರು ಪಟ್ಟಣದ ಕಡೆಗೆ ಹೋಗುತ್ತಿರುವರು. ಪಟ್ಟಣಗಳಲ್ಲಿ ಕಾರಖಾನೆಗಳು ಬೆಳೆಯುತ್ತಿರುವವು. ಕಾರಖಾನೆಗಳಲ್ಲಿ ದುಡಿಯುವದರಿಂದ ಉದ್ಯೋಗವನ್ನು ದೊರಕಿಸಬಹುದಾದರೂ ಹಳ್ಳಿಯಲ್ಲಿಯ ಆನಂದವು ಅಲ್ಲಿ ದೊರೆಯಲಾರದು. ನಿರುದ್ಯೋಗಿಗಳಾಗಿ ಹಳ್ಳಿಯಲ್ಲಿ ಕೂಡ್ರಬೇಕು ಎಂದು ನನ್ನ ಅಭಿಪ್ರಾಯವಲ್ಲ. ಸುಶಿಕ್ಷಿತರಾದವರು ಒಕ್ಕಲತನ ಮಾಡಿದರೆ ಅವರ ಯೋಗ್ಯತೆಗೆ ಯಾವ ರೀತಿಯಿಂದಲೂ ಕುಂದು ಬರಲಾರದು. ಹಳ್ಳಿಯಲ್ಲಿ ಸುಶಿಕ್ಷಿತರಾದವರು ಅನೇಕ ಸುಧಾರಣೆಗಳನ್ನು ಮಾಡಬಹುದು. ಪಟ್ಟಣದ ಜೀವನವು ಯಾಂತ್ರಿಕ ಜೀವನವಾಗಿದೆ. ಪಟ್ಟಣದಲ್ಲಿ ಶುದ್ಧ ಹವೆಯಾಗಲೀ, ತಾಜಾ ಕಾಯಿಪಲ್ಯೆಗಳಾಗಲೀ ದೊರೆಯ್ರಲಾರವು. ಅಲ್ಲಿಯ ಜೀವನ ಮಟ್ಟವು ಏರಿರುವದರಿಂದ ಕೂಲಿಕಾರರಿಗೆ ಪಟ್ಟಣದ ಜೀವನವು ಸುಖಮಯವಾಗಲಾರದು

ನಿಸರ್ಗದೊಡನೆ ನಮ್ಮ ಸಂಬಂಧವು ಕಡಿಮೆಯಾಗಿರುವದು. ಸೂರ್ಯೋದಯ, ಸೂರ್ಯಾಸ್ತ, ತಾರೆಗಳು, ವೃಕ್ಷಗಳು ಇವುಗಳನ್ನು ಕಂಡು ಆನಂದಪಡುವದಿಲ್ಲ. ಯಾಕಂದರೆ ಇಂದು ಜೀವನವು ಯಂತ್ರಗಳಿಂದ ಶುಷ್ಕವಾಗಿರುವದು. ಪಟ್ಟಣದ ಜನರು ನಿಸರ್ಗವನ್ನು ಮರೆತು ಯಂತ್ರಗಳಿಂದಲೇ ಆನಂದ ಪಡೆಯಲು ಪ್ರಯತ್ನಿಸುತ್ತಿರುವರು. ನಮ್ಮ ಸುತ್ತಲೂ ಇರುವ ಸೃಷ್ಟಿ ಸೌಂದರ್ಯವನ್ನು ನಾವು ನೋಡಲು ಇಚ್ಛಿಸುವದಿಲ್ಲ, ಆದರೆ ಅದೇ ಸೃಷ್ಟಿಸೌಂದರ್ಯದ ಚಿತ್ರವನ್ನು ನೋಡಿ ಆನಂದ ಪಡೆಯಲು ಆತುರರಾಗಿರುವೆವು. ಹಳ್ಳಿಯಲ್ಲಿ ಸೃಷ್ಟಿದೇವಿಯ ರಮ್ಯವಾದ ವಾತಾವರಣವನ್ನು ಕಾಣಬಹುದು.

ಶಿಕ್ಷಣ ದೃಷ್ಟಿಯಿಂದ ಮಾತ್ರ ಹಳ್ಳಿಗಳು ಬಹಳ ಹಿಂದುಳಿದಿರುವವು. ವಾಚನಾಲಯ, ಶಾಲೆ,ಕಾಲೇಜುಗಳು ಹಳ್ಳಿಯಲ್ಲಿ ಇರುವದಿಲ್ಲ. ಆದ್ದರಿಂದ

ಜ್ಞಾನವಿಕಾಸಕ್ಕೆ ತಡೆಯಾಗಿರುವದು. ವಿದ್ಯುತ್ತು, ಬಾನುಲಿ ಮುಂತಾದ ಆಧುನಿಕ ಸುಖಸೌಕರ್ಯಗಳ ಕೊರತೆಯೂ ಇಲ್ಲಿರುವದು. ಪಂಚವಾರ್ಷಿಕ ಯೋಜನೆಯಲ್ಲಿ ಹಳ್ಳಿಗಳಿಗೂ ವಿದ್ಯುತ್ತು ಪೂರೈಸುವ ಯೋಜನೆಯನ್ನು ಮಾಡಿರುವರು. ವಿದ್ಯುತ್ತು ಬಾನುಲಿಗಳು ಹಳ್ಳಿಯಲ್ಲಿ ಪ್ರಚಾರವಾದರೆ ಹಳ್ಳಿಯ ಜೀವನವು ಆಕರ್ಷಕವಾಗುವದರಲ್ಲಿ ಸಂದೇಹವಿಲ್ಲ. ಶಾಂತವಾದ ವಾತಾವರಣದಲ್ಲಿದ್ದುಕೊಂಡು ಜ್ಞಾನಾಭಿವೃದ್ಧಿಯನ್ನು ಮಾಡಿಕೊಳ್ಳಲು ಇಚ್ಛಿಸುವವರಿಗೆ ಹಳ್ಳಿಯು ಬಹಳ ಅನುಕೂಲವಾದ ಸ್ಥಳವು. ಆದರೆ ಸಂಶೋಧನೆ ಮತ್ತು ವಿಜ್ಞಾನದಲ್ಲಿ ಪ್ರಯೋಗಮಾಡಬೇಕೆಂದು ಇಚ್ಛಿಸು ವವರಿಗೆ ಹಳ್ಳಿಯಲ್ಲಿ ತಕ್ಕ ಅನುಕೂಲಗಳು ಇರುವದಿಲ್ಲ. ಮಹತ್ವಾಕಾಂಕ್ಷಿ ಗಳಿಗೆ ಹಳ್ಳಿಯಲ್ಲಿ ವಾಸಿಸಲು ಮನಸ್ಸಾಗುವದಿಲ್ಲ. ಯಾಕಂದರೆ ಅವರ ಆಶೆಗಳನ್ನು ಈಡೇರಿಸಿಕೊಳ್ಳಲು ತಕ್ಕ ವಾತಾವರಣವು ಅಲ್ಲಿರುವದಿಲ್ಲ. ಆದ್ದ ರಿಂದ ಮಹತ್ವಾಕಾಂಕ್ಷಿಗಳಾದವರು ಪಟ್ಟಣದಲ್ಲಿ ವಾಸಿಸಲು ಆತುರರಾಗಿರು ವರು. ಸರಕಾರವು ಹಳ್ಳಿಗಳ ಉದ್ಧಾರಕ್ಕಾಗಿ ಪ್ರಯತ್ನಿಸಿದರೆ ಹಳ್ಳಿಯ ವಾತಾವರಣವು ನಿಸ್ಸಂದೇಹವಾಗಿಯೂ ಜ್ಞಾನಾರ್ಜನೆ ಮಾಡುವದಕ್ಕೆ ತಕ್ಕ ಸ್ಥಳವಾಗಬಹುದು. ಇದಕ್ಕೆ ಜನರ ಸಹಕಾರವೂ ಅವಶ್ಯಕವಾದದ್ದು. ಸರಕಾರ ಮತ್ತು ಜನರ ಪ್ರಯತ್ನದಿಂದಲೇ ಹಳ್ಳಿಯು ಉದ್ಧಾರವಾಗಬಲ್ಲದು; ಹಳ್ಳಿಯ ಜೀವನವು ಆಕರ್ಷಕವಾಗಬಲ್ಲದು.

## ೫. ಪ್ರವಾಸ

ರಶಿಯದ ಸುಪ್ರಸಿದ್ಧ ಕಾದಂಬರಿಕಾರನಾದ ಗಾರ್ಕಿಯು ವಿಶ್ವವಿದ್ಯಾ ಲಯದ ಶಿಕ್ಷಣಕ್ಕಿಂತಲೂ ಪ್ರವಾಸದಿಂದ ದೊರೆಯುವ ಶಿಕ್ಷಣವೇ ಮಹತ್ವ ದ್ದೆಂದು ಹೇಳಿರುವನು. ಪ್ರವಾಸಮಾಡಲು ಈಗ ಬಹಳ ಅನುಕೂಲತೆಗಳಿ ರುವವು. ಪ್ರಾಚೀನ ಭಾರತದಲ್ಲಿ ಕಾಲುನಡಿಗೆಯಿಂದಲೇ ಪ್ರವಾಸ ಮಾಡ ಬೇಕಾಗುತ್ತಿತ್ತು. ಈಗಿನಂತೆ ಮಾರ್ಗಗಳೂ ಇರಲಿಲ್ಲ. ಪ್ರವಾಸ ಮಾಡಲು ಹೋದವನು ತಿರುಗಿ ಬರುವನೆಂಬ ನಿಯಮವೂ ಇರಲಿಲ್ಲ. ಆದರೂ ಅವರು ತೀರ್ಥಯಾತ್ರೆಗಳನ್ನು ಮಾಡುತ್ತಿದ್ದರು. ಇದರಿಂದ ಅವರು ಪ್ರವಾಸಕ್ಕೆ ಎಷ್ಟು ಮಹತ್ವಕೊಟ್ಟಿದ್ದರೆಂಬುದು ಗೊತ್ತಾಗುವದು. ಪ್ರವಾಸವಿಲ್ಲದೆ ನಮ್ಮ

ಶಿಕ್ಷಣವು ಪೂರ್ಣವಾಗಲಾರದು. ಅದೇಕೆ? ನಮ್ಮ ಜೀವನವೇ ಸಾರ್ಥಕ ವಾಗಲಾರದು.

ಪ್ರವಾಸವು ಶಿಕ್ಷಣದ ಒಂದು ಅಂಗವಾಗಿದೆ. ಫ್ರಾನ್ಸದ ಸಂಸ್ಕೃತಿಯನ್ನು ಅರಿತುಕೊಳ್ಳಬೇಕಾದರೆ ನಾವು ಫ್ರಾನ್ಸ ದೇಶದಲ್ಲಿ ಸಂಚಾರ ಮಾಡಬೇಕು. ಎಷ್ಟು ಪುಸ್ತಕಗಳನ್ನು ಓದಿದರೂ ಫ್ರೆಂಚ ಜನರ ರೀತಿ ನೀತಿಗಳನ್ನು ತಿಳಿದು ಕೊಳ್ಳುವದು ಸಾಧ್ಯವಾಗುವದಿಲ್ಲ. ಪ್ರವಾಸದಿಂದ ಅನೇಕ ರಮಣೀಯ ಸ್ಥಳ ಗಳನ್ನು ನೋಡಲು ಸಾಧ್ಯವಾಗುವದು. ಹಿಮಾಲಯ ಪರ್ವತ, ಕಾಶ್ಮೀರದ ಸೃಷ್ಟಿ ಸೌಂದರ್ಯ, ಆಲ್ಪ್ಸ ಪರ್ವತಗಳ ಸೌಂದರ್ಯವನ್ನು ಪುಸ್ತಕಗಳಿಂದ ಅರಿತುಕೊಳ್ಳಬಹುದೇ? ಪುಸ್ತಕಗಳು ನಿರ್ಜೀವ ವಸ್ತುಗಳು. ಕಾಶ್ಮೀರದ ಸೃಷ್ಟಿ ಸೌಂದರ್ಯವನ್ನು ಅನುಭವಿಸಬೇಕಾದರೆ ನಾವು ಅದನ್ನು ಪ್ರತ್ಯಕ್ಷವಾಗಿ ನೋಡಬೇಕು. ಪ್ರತ್ಯಕ್ಷ ನೋಡುವದರಿಂದ ದೊರೆಯುವ ಜ್ಞಾನವು ಪುಸ್ತಕ ಜ್ಞಾನಕ್ಕಿಂತ ಯಾವಾಗಲೂ ಶ್ರೇಷ್ಠವಾದದ್ದು. ಬೇರೆ ದೇಶಗಳ ಸಂಸ್ಕೃತಿ ಯನ್ನು ಅರಿತುಕೊಳ್ಳಬೇಕಾದರೆ ನಾವು ಪ್ರವಾಸ ಮಾಡಬೇಕು. ಯುರೋ ಪದಲ್ಲಿ ಮಹಾಯುದ್ಧಗಳಾಗುವದಕ್ಕೆ ಬೇರೆ ಬೇರೆ ರಾಷ್ಟ್ರಗಳ ಬಗ್ಗೆ ಸರಿ ಯಾದ ಜ್ಞಾನವಿಲ್ಲದ್ದೇ ಮುಖ್ಯ ಕಾರಣವು. ಬೇರೆ ದೇಶಗಳಲ್ಲಿ ಸಂಚಾರ ಮಾಡುವದರಿಂದ ಅವರ ಸಂಸ್ಕೃತಿಯನ್ನು, ಅಲ್ಲಿಯ ಜನರ ರೀತಿನೀತಿಗಳನ್ನು ನಾವು ಚೆನ್ನಾಗಿ ತಿಳಿದುಕೊಳ್ಳುವೆವು. ಇದರಿಂದ ಪರಸ್ಪರರಲ್ಲಿ ಸಹಕಾರ ಭಾವನೆಯುಂಟಾಗುವದು.

ಪ್ರವಾಸದಿಂದ ನಮ್ಮ ದೃಷ್ಟಿಯು ವಿಶಾಲವಾಗುವದು. ಅನೇಕ ಸಂಸ್ಥೆ ಗಳನ್ನು ನಾವು ಪ್ರತ್ಯಕ್ಷವಾಗಿ ನೋಡುವದರಿಂದ ಶಿಕ್ಷಣದ ಬಗ್ಗೆ ಹೊಸ ಸಂಗತಿಗಳನ್ನು ಅರಿತುಕೊಳ್ಳುವೆವು. ಶಾಂತಿನಿಕೇತನ, ಕಾಂಗ್ರಿಯ, ಗುರುಕುಲ ಮುಂತಾದ ಆದರ್ಶ ಶಿಕ್ಷಣ ಸಂಸ್ಥೆಗಳನ್ನು ಪ್ರತ್ಯಕ್ಷವಾಗಿ ನೋಡುವದರಿಂದ ಹೊಸ ಹೊಸ ಬಗೆಯ ಶಿಕ್ಷಣ ವಿಧಾನಗಳನ್ನು ಅರಿತುಕೊಳ್ಳಬಹುದು. ಮಹಾ ಶಿಕ್ಷಣ ತಜ್ಞರನ್ನು ನಾವು ಭೆಟ್ಟಿಯಾಗುವದರಿಂದ ಹೊಸ ವಿಷಯ ಗಳು ಗೊತ್ತಾಗುವವು. ಮಹಾ ಪುರುಷರ ದರ್ಶನದಿಂದಲೇ ಎಷ್ಟೋ ಪಾಪ ಗಳು ನಾಶವಾಗುತ್ತವೆಂದು ನಮ್ಮ ಧರ್ಮ ಗ್ರಂಥಗಳಲ್ಲಿ ಹೇಳಲಾಗಿದೆ. ಇದ ರಲ್ಲಿ ಬಹಳ ಅರ್ಥವಿರುವದು. 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ'

ಎಂದು ಸರ್ವಜ್ಞನು ಹೇಳಿದುದು ಇದಕ್ಕಾಗಿಯೇ ವಿದ್ವಾಂಸರ ಸಂಪರ್ಕ ದಲ್ಲಿದ್ದುಕೊಂಡೇ ನಾವು ಅನೇಕ ವಿಷಯಗಳನ್ನು ಚೆನ್ನಾಗಿ ಕಲಿಯಬಲ್ಲೆವು. ಗುರು–ಶಿಷ್ಯರಲ್ಲಿಯ ಸಂಪರ್ಕವು ಈಗ ಕಡಿಮೆಯಾಗಿದೆ. ಶಿಕ್ಷಣವೆಂದರೆ ಕೇವಲ ವ್ಯಾಪಾರವೆಂದು ಜನರು ತಿಳಿದಿರುವಂತೆ ತೋರುತ್ತದೆ. ಕೇವಲ ಹಣವನ್ನು ಕೊಟ್ಟು ಜ್ಞಾನವನ್ನು ಕೊಂಡುಕೊಳ್ಳಲು ಬರಲಾರದು. ಪ್ರವಾ ಸದಲ್ಲಿ ನಾವು ಅನೇಕ ಬಗೆಯ ಜನರನ್ನು ಕಾಣುವೆವು. ಪ್ರತ್ಯಕ್ಷವಾಗಿ ಜಗತ್ತಿ ನೊಡನೆ ನಮ್ಮ ಸಂಬಂಧ ಬರುವದು. ವಿಜ್ಞಾನಿಗಳನ್ನೂ, ಶಿಕ್ಷಣ ಶಾಸ್ತ್ರಜ್ಞ ರನ್ನೂ, ಸಾಹಿತಿಗಳನ್ನೂ, ರಾಜಕಾರಣಿಗಳನ್ನೂ, ಭೆಟ್ಟಿಯಾಗಿ ಅವರಿಂದ ಎಷ್ಟೋ ವಿಷಯಗಳನ್ನು ಅರಿತುಕೊಳ್ಳಬಹುದಾಗಿದೆ. ನಮಗಿಂತಲೂ ಜಾಣ ರಾದವರನ್ನು ನಾವು ಕಾಣುವದರಿಂದ ನಮ್ಮಲ್ಲಿಯ ಸಂಕುಚಿತ ಬುದ್ಧಿಯು ಮಾಯವಾಗುವದು. ಬೇರೆ ಜನರ ಕಲಾಕುಶಲತೆಯನ್ನು ಅರಿತುಕೊಳ್ಳಲು ಸಾಧ್ಯವಾಗುವದು.

ಪ್ರವಾಸದಿಂದ ಮನೋರಂಜನೆಯೂ ಆಗುವದು. ರಮಣೀಯ ಸ್ಥಳ ಗಳನ್ನು ನೋಡುವಾಗ ನಾವು ನಮ್ಮ ದುಃಖಗಳನ್ನು ಮರೆಯುವೆವು. ಈ ಆನಂದವು ನಮ್ಮನ್ನು ಎಂದಿಗೂ ಬಿಟ್ಟುಹೋಗಲಾರದು. ಪ್ರವಾಸವನ್ನು ನೆನಿಸಿಕೊಂಡರೂ, ನಾವು ಮಾಡಿದ ಪ್ರವಾಸವನ್ನು ಎರಡನೇಯವರಿಗೆ ಹೇಳಿ ದರೂ ಅದೇ ಆನಂದವನ್ನು ಪಡೆಯುವೆವು. ದುಃಖವನ್ನು ಮರೆಯಲು ಪ್ರವಾ ಸದಂಥ ಬೇರೊಂದು ಸಾಧನವಿಲ್ಲ.

ವ್ಯಾಪಾರಸ್ಥರಿಗೂ ಪ್ರವಾಸದಿಂದ ಲಾಭವಿರುವದು. ಬೇರೆ ಸ್ಥಳಗಳಲ್ಲಿ ಯಾವ ಸಾಮಾನು ಅಗ್ಗವಾಗಿ ದೊರೆಯುವದು ಎಂಬುದು ಅವರಿಗೆ ಗೊತ್ತಾ ಗುವದು. ಹಿಂದುಸ್ತಾನದಲ್ಲಿ ದೊಡ್ಡ ದೊಡ್ಡ ಕಾರಖಾನೆಗಳು ಅತಿ ಕಡಿಮೆ ಯಿರುವವು. ನಮ್ಮ ಕಾರಖಾನೆಗಳು ಅಭಿವೃದ್ಧಿ ಹೊಂದಬೇಕಾದರೆ ಔದ್ಯೋ ಗಿಕ ದೃಷ್ಟಿಯಿಂದ ಮುಂದುವರಿದಿರುವ ಬೇರೆ ದೇಶಗಳಲ್ಲಿ ಯಾವ ರೀತಿ ಕೆಲಸ ಮಾಡುತ್ತಾರೆ ಎಂಬುದನ್ನು ಅರಿತುಕೊಳ್ಳಬೇಕು. ಬೇರೆ ದೇಶಗಳಲ್ಲಿ ನಡೆದಿರುವ ಕಾರಖಾನೆಗಳನ್ನು ನೋಡಿ ಸ್ಫೂರ್ತಿಯನ್ನು ಪಡೆಯಬಹುದು. ಕಾರಖಾನೆಗಳಒಡೆಯರು ಬೇರೆದೇಶಗಳಲ್ಲಿ ಸಂಚರಿಸಿ ಅಲ್ಲಿಯಅನುಭವದಿಂದ ತಮ್ಮ ಕಾರಖಾನೆಗಳಲ್ಲಿ ಸುಧಾರಣೆಗಳನ್ನು ಮಾಡಿ ಕೊಳ್ಳುವರು. ಬಿರ್ಲಾ

ಟಾಟಾ ಮುಂತಾದವರು ತಮ್ಮ ಕಾರಖಾನೆಗಳಲ್ಲಿ ಸುಧಾರಣೆ ಮಾಡುವದ ಕ್ಕಾಗಿ ವಿದ್ಯಾರ್ಥಿಗಳನ್ನು ಪರದೇಶಕ್ಕೆ ಕಳಿಸಿ ಅಲ್ಲಿಯ ಸುಧಾರಣೆಗಳನ್ನು ತಮ್ಮ ಕಾರಖಾನೆಯಲ್ಲಿ ಮಾಡಿಕೊಳ್ಳುವರು. ಬೇರೆ ಬೇರೆ ವ್ಯವಸಾಯ ಗಳನ್ನು ಕಲಿಯುವದಕ್ಕಾಗಿ ನೂರಾರು ಭಾರತೀಯ ತರುಣರು ಪರದೇಶ ಗಳಿಗೆ ಹೋಗುವರು.

ಪ್ರವಾಸದಿಂದ ನಮ್ಮ ಶರೀರ ಸಂಪತ್ತು ಬಲಗೊಳ್ಳುವದು. ಬೇರೆ ಬೇರೆ ಪ್ರಕಾರದ ಹವಾಮಾನಗಳಲ್ಲಿ ಸಂಚಾರ ಮಾಡುವದರಿಂದ ಅತಿ ಉಷ್ಣ ತೆಯ ಪರಿಣಾಮವಾಗಲಿ, ಅತಿ ಚಳಿಯ ಪರಿಣಾಮವಾಗಲಿ ನಮ್ಮ ಮೇಲೆ ಆಗುವದಿಲ್ಲ. ವೈದ್ಯರು ರೋಗಿಗಳಾದವರಿಗೆ ಹವೆಯನ್ನು ಬದಲಿಸಲು ಹೇಳು ವರು· ಔಷಧವನ್ನು ತೆಗೆದುಕೊಳ್ಳದಿದ್ದರೂ ಉತ್ತಮವಾದ ಹವೆಯ ಪ್ರದೇಶ ದಲ್ಲಿ ಇರುವದರಿಂದ ನಮ್ಮ ಆರೋಗ್ಯದಲ್ಲಿ ಸುಧಾರಣೆಯಾಗುವದು. ಬಿಸಿಲು ಕಾಲದಲ್ಲಿ ಶ್ರೀಮಂತರಾದವರು ಹವೆಯನ್ನು ಬದಲಿಸುವದಕ್ಕಾಗಿ ತಂಪು ಪ್ರದೇಶಗಳಿಗೆ ಹೋಗುವರು.

ಒಂದೇ ಪ್ರದೇಶದಲ್ಲಿ ಇರುವದರಿಂದ ಜೀವನದಲ್ಲಿ ವಿವಿಧತೆಯಿಲ್ಲದಂತಾ ಗುವದು. ಆದ್ದರಿಂದ ಸಾಹಸಿಗಳಾದವರು ಯಾವಾಗಲೂ ಸಂಚಾರ ಮಾಡು ತ್ತಲೇ ಇರುವರು. ಹೊಸ ಹೊಸ ದೇಶಗಳನ್ನು ಕಂಡು ಹಿಡಿಯುವದು ಪ್ರವಾಸದಿಂದಲೇ ಸಾಧ್ಯವು. ನಮ್ಮ ಜೀವನವು ಸಾಹಸಮಯವಾಗಬೇಕು. ಬೇರೆ ಭಾಷೆಗಳನ್ನು ಕಲಿಯುವದು ಪ್ರವಾಸದಿಂದಲೇ ಸಾಧ್ಯವು. ಮನುಷ್ಯನು ಯಾವಾಗಲೂ ಬೇರೆ ವಿಷಯಗಳನ್ನು ತಿಳಿದುಕೊಳ್ಳಬೇಕು. ರಮಣೀಯ ಸ್ಥಾನಗಳನ್ನು ನೋಡಬೇಕು. ಸಂಚಾರ ಮಾಡಬೇಕು ಎಂದು ಇಚ್ಛಿಸುವದ ರಿಂದ ಮನುಷ್ಯನ ಪ್ರಗತಿಗೆ ಪ್ರವಾಸವು ಅತ್ಯಗತ್ಯವಾಗಿರುವದು.

## ೬. ವೃತ್ತಪತ್ರಿಕೆಗಳು

ಆಧುನಿಕ ಇತಿಹಾಸವನ್ನು ತಿಳಿಸಿಕೊಡತಕ್ಕ ಸಾಧನಗಳೇ ವೃತ್ತಪತ್ರಿಕೆ ಗಳು. ವೃತ್ತ ಪತ್ರಿಕೆಗಳಿಂದ ಬೇರೆ ಬೇರೆ ದೇಶಗಳಲ್ಲಿಯ ಸಂಗತಿಗಳನ್ನು ತಿಳಿದುಕೊಳ್ಳುತ್ತೇವೆ. ಪಂಡಿತ ಜವಾಹರಲಾಲ ನೆಹರು, ಚರ್ಚಿಲ್ ಮುಂತಾದ ರಾಜಕಾರಣಿಗಳ ಭಾಷಣವನ್ನು ಮರುದಿವಸವೇ ವೃತ್ತ ಪತ್ರಿಕೆ ಯಲ್ಲಿ ಓದುವೆವು. ವೃತ್ತಪತ್ರಿಕೆಗಳ ಹೊಣೆಯು ಅತ್ಯಂತ ಗುರುತರವಾದುದು.

ಬೇರೆ ಬೇರೆ ಸಮಾಜಗಳಲ್ಲಿ ಸೌಹಾರ್ದಮಯ ವಾತಾವರಣವನ್ನು ಅವು ನಿರ್ಮಾಣ ಮಾಡಬಲ್ಲವು, ಇಲ್ಲವೆ ಎರಡು ಸಮಾಜಗಳಲ್ಲಿ ಬಡಿದಾಟವನ್ನು ಹುಟ್ಟಿಸಬಲ್ಲವು. ಜನರಿಗೆ ಮಾರ್ಗದರ್ಶನವನ್ನು ಮಾಡುವ ಕೆಲಸವು ವೃತ್ತಪತ್ರಿಕೆಗಳದು. ವೃತ್ತಪತ್ರಿಕೆಗಳು ಯಾವದೊಂದು ಪಕ್ಷವನ್ನು ಹಿಡಿಯದೆ ಜನರ ಹಿತದ ಕಡೆಗೆ ಹೆಚ್ಚು ಲಕ್ಷ ಕೊಡಬೇಕು. ಜನರಲ್ಲಿದ್ದ ಮೂಢ ಭಾವನೆಗಳನ್ನು ನಾಶಗೊಳಿಸಬೇಕು. ಅವು ಸುದ್ದಿಯನ್ನು ಒದಗಿಸಿಕೊಡುವದಲ್ಲದೆ, ಜ್ಞಾನಾಭಿವೃದ್ಧಿಯನ್ನು ಮಾಡಬಲ್ಲವು.

ಮಹಾತ್ಮಾಗಾಂಧಿ, ಲೋಕಮಾನ್ಯ ಟಿಳಕರು ಜನಜಾಗ್ರತಿಯನ್ನು ಮಾಡುವದಕ್ಕಾಗಿ ವೃತ್ತಪತ್ರಿಕೆಯನ್ನು ಉಪಯೋಗಿಸಿದರು. ಗಾಂಧೀಜಿಯವರ 'ಹರಿಜನ' ವು ಗಾಂಧೀಜಿಯವರ ಮುಖಪತ್ರವಾಗಿತ್ತು. ಈ ವೃತ್ತಪತ್ರಿಕೆಯ ಮುಖಾಂತರವಾಗಿಯೇ ಅವರು ತಮ್ಮ ಅಭಿಪ್ರಾಯವನ್ನು ಜನರಿಗೆ ತಿಳಿಸುತ್ತಿದ್ದರು. ಯಾರಿಗೂ ಅಂಜದೆ ತಮ್ಮ ಅಭಿಪ್ರಾಯಗಳನ್ನು ಅವರು ಮಂಡಿಸುತ್ತಿದ್ದರು.

ಜನರ ಅಭಿಪ್ರಾಯವನ್ನು ಬದಲಿಸುವದಕ್ಕೂ ವೃತ್ತಪತ್ರಿಕೆಗಳು ಬಹಳ ಸಹಾಯಕಾರಿಯಾಗಿವೆ. ಲೋಕಮಾನ್ಯರ ಕಾಲದಲ್ಲಿ ಅನೇಕ ತರುಣರು ಅಧಿಕಾರದಾಸೆಗಾಗಿ ಬ್ರಿಟಿಷ್ ಸರಕಾರದ ನೌಕರಿಯನ್ನು ಸ್ವೀಕರಿಸುತ್ತಿದ್ದರು. ತಮ್ಮ ಜೀವನದ ಧ್ಯೇಯವು ಹಣಗಳಿಸುವದೆಂದು ಅವರು ನಂಬಿದ್ದರು. ಬ್ರಿಟಿಶರ ರಾಜಕಾರಣವನ್ನು ಅರಿಯದೆ ಭಾರತೀಯ ತರುಣರು ಭಾರತದಲ್ಲಿಯ ಬ್ರಿಟಿಷ ಸರಕಾರವನ್ನು ಹೊಗಳುತ್ತಿದ್ದರು. ಸರಕಾರವು ಮಾಡುವ ಅನ್ಯಾಯದ ಕೃತ್ಯಗಳ ಕಡೆಗೆ ಅವರು ಲಕ್ಷ ಕೊಡುತ್ತಿರಲಿಲ್ಲ. ಟಿಳಕರು ತಮ್ಮ ಪತ್ರಿಕೆಯಲ್ಲಿ ಉಗ್ರವಾದ ಲೇಖನಗಳನ್ನು ಬರೆದು, ಬ್ರಿಟಿಷ ಸರಕಾರದ ದಬ್ಬಾಳಿಕೆಯನ್ನು ಖಂಡಿಸಿದರು. ಆಗ ನಮ್ಮ ದೇಶದಲ್ಲಿಯ ತರುಣರು ಜಾಗೃತರಾದರು. ಗುಲಾಮಗಿರಿಯಲ್ಲಿದ್ದ ರಾಷ್ಟ್ರವನ್ನು ಬಡಿದೆಬ್ಬಿಸುವ ಕೆಲಸವನ್ನು ವೃತ್ತಪತ್ರಿಕೆಗಳು ಮಾಡಿರುವವು.

ನಮ್ಮ ದೇಶದಲ್ಲಿಯ ವೃತ್ತಪತ್ರಿಕೆಗಳು ಇನ್ನೂ ಬಾಲ್ಯಾವಸ್ಥೆಯಲ್ಲಿರುವವು. ಮುಖ್ಯವಾಗಿ ದಿನಪತ್ರಿಕೆಗಳನ್ನು ನಡಿಸುವದಕ್ಕೆ ಬಹಳ ಹಣ ಬೇಕು. ಎಲ್ಲ ಸುದ್ದಿಯನ್ನೂ ಮೊದಲು ಇಂಗ್ಲಿಷಿನಲ್ಲಿ ಸಂಗ್ರಹಿಸಿ ಆ ಮೇಲೆ ನಮ್ಮ

ಭಾಷೆಗೆ ಭಾಷಾಂತರಿಸಬೇಕಾಗುತ್ತದೆ. ಭಾಷಾಂತರ ಕಲೆಯು ಸುಲಭ ವಾದದ್ದಲ್ಲ. ಅವನು ಎರಡು ಭಾಷೆಗಳನ್ನೂ ಚೆನ್ನಾಗಿ ಅರಿತವನಾಗಿರಬೇಕು. ಎರಡು ಭಾಷೆಯಲ್ಲಿ ಪಂಡಿತರಾಗದವರು ವೃತ್ತಪತ್ರ ವ್ಯವಸಾಯದಲ್ಲಿ ಕಾಲಿ ಡಲು ಮುಂದೆ ಬರುವದಿಲ್ಲ. ಯಾಕಂದರೆ ಆರ್ಥಿಕ ದೃಷ್ಟಿಯಿಂದ ಇದು ಲಾಭ ದಾಯಕವಾದ ಉದ್ಯೋಗವಲ್ಲ. ವೃತ್ತಪತ್ರ ವ್ಯವಸಾಯ ಮಾಡುವವನು 'ಜನತಾಸೇವೆಯೇ ಜನಾರ್ದನ ಸೇವೆ' ಎಂಬ ಭಾವನೆಯಿಂದ ಈ ಕೆಲಸದಲ್ಲಿ ಕೈಹಾಕಬೇಕು. ದೇಶೀ ಪತ್ರಿಕೆಗಳನ್ನು ಕೊಂಡು ಓದುವವರ ಸಂಖ್ಯೆಯು ಕಡಿಮೆ. ಇದರಿಂದ ಇವುಗಳ ಆರ್ಥಿಕ ಪರಿಸ್ಥಿತಿಯು ಸರಿಯಾಗಿಲ್ಲ. ಆರ್ಥಿಕ ಪರಿಸ್ಥಿತಿಯು ಸರಿಯಾಗಿರದಿದ್ದರೆ ದಿನಪತ್ರಿಕೆಯನ್ನು ನಡಿಸುವದು ಸಾಧ್ಯ ವಾಗಲಾರದು. ಪತ್ರಿಕೆಗಳಲ್ಲಿ ಇಂಗ್ಲಿಷಿನಲ್ಲಿ ಪ್ರಕಟವಾಗುವ ಅನೇಕ ಪತ್ರಿಕೆಗಳ ಸಾಂಪತ್ತಿಕ ಸ್ಥಿತಿಯು ಸಮಾಧಾನಕರವಾಗಿರುವದರಿಂದ ಅವು ಎಲ್ಲ ದೃಷ್ಟಿಯಿಂದಲೂ ದೇಶೀಯ ಭಾಷೆಯಲ್ಲಿ ಪ್ರಕಟವಾಗುವ ವೃತ್ತಪತ್ರಿಕೆ ಗಳಿಗಿಂತ ಮೇಲ್ಮಟ್ಟದವುಗಳಿರುವವು. ದಿನಪತ್ರಿಕೆಗಳಿಗೆಮಾತ್ರ ಈ ಮಾತು ಅನ್ವಯಿಸುತ್ತದೆ. ಹಣವಿಲ್ಲದೆ ಬೇಕಾದಷ್ಟು ಯೋಗ್ಯತೆಯುಳ್ಳವನಾದರೂ ದಿನಪತ್ರಿಕೆಯನ್ನು ನಡಿಸುವದು ಸಾಹಸದ ಮಾತು.

ವಾರಪತ್ರಿಕೆಗಳ ರೀತಿಯೇ ಬೇರೆ. ಇವುಗಳನ್ನು ನಡಿಸುವದಕ್ಕೆ ದಿನ ಪತ್ರಿಕೆಗಳಷ್ಟು ವೆಚ್ಚ ತಗಲುವದಿಲ್ಲ. ಇವುಗಳ ಸಮಸ್ಯೆಯು ಬೇರೆ ರೀತಿ ಯಾದದ್ದು. ವಾರಪತ್ರಿಕೆಗಳಲ್ಲಿ ಇಡೀವಾರದ ಮಹತ್ವದ ಸುದ್ದಿಯನ್ನು ಬರೆ ಯುವರು. ಬೇರೆ ಬೇರೆ ವಿಷಯಗಳಿಗಾಗಿ ಬೇರೆ ಬೇರೆ ವಾರಪತ್ರಿಕೆಗಳಿರು ವವು. ಇಂಗ್ಲಂಡ, ಅಮೇರಿಕಾ ಮುಂತಾದ ದೇಶಗಳಲ್ಲಿ ರಾಜಕಾರಣ, ಅರ್ಥ ಶಾಸ್ತ್ರ, ತತ್ವಜ್ಞಾನ ಮುಂತಾದ ವಿಷಯಗಳಿಗಾಗಿ ಮೀಸಲಾದ ವಾರಪತ್ರಿಕೆ ಗಳಿರುವವು. ಕರ್ನಾಟಕದಲ್ಲಿ ಒಂದು ವಿಷಯಕ್ಕಾಗಿ ಮೀಸಲಾಗಿಟ್ಟ ವೃತ್ತ ಪತ್ರಿಕೆಗಳು ತೀರ ಕಡಿಮೆಯಿರುವವು.

ಕೆಲವು ಪತ್ರಿಕೆಗಳು ತಿಂಗಳಿಗೊಮ್ಮೆ ಕೆಲವು ಮೂರುತಿಂಗಳಿಗೊಮ್ಮೆ ಪ್ರಕಟವಾಗುವವು. ಇವುಗಳಲ್ಲಿ ಮಾಸ ಪತ್ರಿಕೆಗಳಲ್ಲಿ ಕೇವಲ ಚಿಕ್ಕಕತೆಗಳೇ ತುಂಬಿರುವವು. ವಿಚಾರ ಪ್ರಧಾನವಾದ ರಾಜಕೀಯ, ಸಾಮಾಜಿಕ, ಆರ್ಥಿಕ ಸಮಸ್ಯೆಗಳನ್ನು ಕುರಿತು ಬರೆದ ಪ್ರಬಂಧಗಳ ಸಂಖ್ಯೆಯು ತೀರ

ಕಡಿಮೆಯಾಗಿರುವದು. ವಿಜ್ಞಾನದ ಬಗ್ಗೆ ಬರೆದ ಲೇಖಗಳ ಸಂಖ್ಯೆಯೂ ಅತಿ ಕಡಿಮೆಯಾಗಿರುವದು. ನಮ್ಮ ಜನರ ಜ್ಞಾನವನ್ನು ಹೆಚ್ಚಿಸುವದಕ್ಕೆ ಇಂಥ ಲೇಖಗಳ ಅವಶ್ಯಕತೆಯು ಹೆಚ್ಚಾಗಿರುವದು. ವಿದ್ವಾಂಸರಾದವರಿಂದ ಈ ವಿಷಯಗಳ ಬಗ್ಗೆ ಲೇಖನಗಳನ್ನು ದೊರಕಿಸಿ ವೃತ್ತಪತ್ರಿಕೆಗಳು ಪ್ರಕಟಿಸ ಬೇಕು. ಕೇವಲ ಮನೋರಂಜನೆಯೇ ವೃತ್ತಪತ್ರಿಕೆಗಳ ಗುರಿಯಲ್ಲ. ಸಾಹಿತ್ಯ ಮತ್ತು ಸಮಾಜ ಸೇವೆಯು ಅವುಗಳ ಹಿರಿದಾದ ಉದ್ದೇಶ ಗಳಾಗಿವೆ. ಜನರ ಜ್ಞಾನಾಭಿವೃದ್ಧಿಯನ್ನು ಮಾಡದಿದ್ದರೆ ವೃತ್ತಪತ್ರಿಕೆ ಗಳಿಂದ ನಮ್ಮ ದೇಶಕ್ಕೆ ಯಾವ ಕಲ್ಯಾಣವೂ ಆಗಲಾರದು.

ಕೆಲವು ವೃತ್ತಪತ್ರಿಕೆಗಳಲ್ಲಿ ವಾರದ ಭವಿಷ್ಯ, ಸಿನೇಮಾ ತಾರೆಯರ ಜೀವನ-ಚಿತ್ರಗಳು ಇವುಗಳ ಹೊರತಾಗಿ ಬೇರೆ ವಿಷಯವೇ ಇರುವದಿಲ್ಲ! ಇವುಗಳಿಂದ ಯಾವ ಪ್ರಯೋಜನವೋ ನಾನರಿಯೆ! ಜನರ ಅಜ್ಞಾನದ ದುರ್ಲಾಭ ಪಡೆದು ಈ ಪತ್ರಿಕೆಗಳು ಹಣಗಳಿಸಬಹುದು. ಆದರೆ ಆ ಕಾಲವು ಬಹಳ ದಿವಸ ನಡೆಯಲಾರದು. ವೃತ್ತಪತ್ರಿಕೆಗಳು ನಾಡಿನ ನಾಡಿಯಿದ್ದಂತೆ. ಅವು ನಮಗೆ ಕೈದೀವಿಗೆಯಂತೆ ಮಾರ್ಗದರ್ಶನ ಮಾಡಬೇಕು. ಜನರ ಅಭಿಪ್ರಾಯವನ್ನು ತಿಳಿಸುವ ಕನ್ನಡಿಗಳಾಗಬೇಕು. ನಮ್ಮ ಭಾವನೆಗಳನ್ನು ವಿಶಾಲಗೊಳಿಸಬೇಕು. ಇದೀಗ ವೃತ್ತಪತ್ರಿಕೆಗಳ ಕರ್ತವ್ಯವಲ್ಲವೇ?

## ೭. ವಾಚನಾಲಯಗಳು

ಆಧುನಿಕಕಾಲದಲ್ಲಿ ವಾಚನಾಲಯಗಳೇ ವಿಶ್ವವಿದ್ಯಾನಿಲಯಗಳಾಗಿವೆ. ಸಂಶೋಧಕರಿಗೂ, ಲೇಖಕರಿಗೂ ವಾಚನಾಲಯಗಳಿಲ್ಲದೆ ನಡೆಯುವಂತಿಲ್ಲ. ಸರಕಾರದವರು ಜನರ ಜ್ಞಾನದ ಮಟ್ಟವನ್ನು ಹೆಚ್ಚಿಸುವದಕ್ಕಾಗಿ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ವಾಚನಾಲಯಗಳನ್ನು ಸ್ಥಾಪಿಸಿರುವರು. ಆದರೆ ಈ ವಾಚನಾಲಯಗಳು ಸಂಶೋಧಕರಿಗೆ ಬೇಕಾಗುವ ಪುಸ್ತಕಗಳನ್ನು ಒದಗಿಸ ಲಾರವು. ಯಾಕಂದರೆ ಸರಕಾರೀ ಗ್ರಂಥಸಂಗ್ರಹಾಲಯದಲ್ಲಿ ಸಂಶೋಧಕರಿಗೆ ಬೇಕಾಗುವ ಎಲ್ಲ ತರದ ಸಂದರ್ಭ ಗ್ರಂಥಗಳು ಇರುವದಿಲ್ಲ. ನಮ್ಮ ಶಾಲೆ ಕಾಲೇಜುಗಳ ವಾಚನಾಲಯಗಳು ತೀರ ಚಿಕ್ಕವಾಗಿರುವವು. ಇದರಿಂದ ವಿದ್ವಾಂಸರಾದವರಿಗೆ ತಕ್ಕ ವಾಚನಾಲಯಗಳು ಇಲ್ಲದಂತಾಗಿವೆ. ನಮ್ಮ

ದೇಶವು ಇಂದು ಸ್ವತಂತ್ರವಾಗಿದೆ. ನಮ್ಮ ಸರಕಾರವು ವಾಚನಾಲಯುಗಳ ಕಡೆಗೆ ಸಾಕಷ್ಟು ಲಕ್ಷವನ್ನು ಇನ್ನೂ ಕೊಡಬೇಕಾಗಿದೆ.

ನಾವು ಎಷ್ಟೇ ಶ್ರೀಮಂತರಾಗಿದ್ದರೂ, ನಮಗೆ ಜೇಕಾಗುವ ಎಲ್ಲ ಪುಸ್ತಕಗಳನ್ನು ನಾವು ಕೊಳ್ಳಲಾರೆವು. ಅತಿ ಕಡಿಮೆ ವೆಚ್ಚದಲ್ಲಿ ಸಾಹಿತ್ಯಾಭಿಮಾನಿಗಳು ತಮಗೆ ಬೇಕಾದ ಪುಸ್ತಕಗಳನ್ನು ವಾಚನಾಲಯುದಲ್ಲಿ ಪಡೆಯು ಬಹುದು. ಜನರಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸಿ ಅನೇಕ ವಿಷಯದ ಜ್ಞಾನವನ್ನು ಅವು ಮಾಡಿಕೊಡುವವು. ಬೇಕಾದ ವಿಷಯುಗಳ ಬಗ್ಗೆ ಇಂಗ್ಲಿಷ ಭಾಷೆಯಲ್ಲಿ ಪುಸ್ತಕಗಳನ್ನು ದೊರಕಿಸಬಹುದು. ದಿನದಿನಕ್ಕೆ ಇಂಗ್ಲಿಷ ಭಾಷಯು ಬೆಳೆಯುತ್ತಿರುವದು. ಆಧುನಿಕ ವಿಜ್ಞಾನವನ್ನು ಅರಿತುಕೊಳ್ಳುವದಕ್ಕೆ ನಾವು ಇಂಗ್ಲಿಷ ಭಾಷೆಗೆ ಶರಣುಹೋಗಲೇಬೇಕು. ಆದ್ದರಿಂದ ವಾಚನಾಲಯದಲ್ಲಿ ಎಲ್ಲ ಭಾಷೆಗಳ ಗ್ರಂಥಗಳಿಗೂ ಪ್ರವೇಶವಿರಬೇಕು. ಇಂಗ್ಲಿಷ, ಸಂಸ್ಕೃತ ಮತ್ತು ಪ್ರಾಂತೀಯ ಭಾಷೆಯ ಎಲ್ಲ ಪುಸ್ತಕಗಳೂ ನಮಗೆ ಒಂದೇ ಕಡೆಗೆ ದೊರೆಯುವಂತಿರಬೇಕು. ಇಂಗ್ಲಿಷ ಮತ್ತು ಸಂಸ್ಕೃತ ಪುಸ್ತಕಗಳಿರದ ಗ್ರಂಥಾಲಯುವು ಗ್ರಂಥಾಲಯುವೇ ಆಗಲಾರದು.

ವಾಚನಾಲಯವೆಂದರೆ ಕೇವಲ ವೃತ್ತಪತ್ರಿಕೆಗಳಿರುವ ಮನೆಯಲ್ಲ; ವಾಚನಾಲಯದಲ್ಲಿ ವೃತ್ತಪತ್ರಿಕೆಗಳೂ, ಗ್ರಂಥಗಳೂ ವಿಶೇಷವಾಗಿ ಸಂಗ್ರಹಿಸಲ್ಪಟ್ಟಿರಬೇಕು. ವಾಚನಾಲಯದಲ್ಲಿರುವ ಭಂಡಾರಿಗನು ವಾಚನಾಲಯದ ತಂತ್ರವನ್ನು ಪೂರ್ಣವಾಗಿ ಅರಿತಿರಬೇಕು. ವಾಚಕರಿಗೆ ಅವನು ಮಾರ್ಗದರ್ಶನ ಮಾಡಬೇಕು. ವಾಚನಾಲಯದಲ್ಲಿರುವ ಎಲ್ಲ ಗ್ರಂಥಗಳ ಪೂರ್ಣ ಜ್ಞಾನವು ಅವನಿಗಿರಬೇಕು. ಅಮೇರಿಕಾ ದೇಶದಲ್ಲಿ ಗ್ರಂಥ ವಿಜ್ಞಾನವು ಬಹಳ ಬೆಳೆದಿರುವದು. ಗ್ರಂಥ ವಿಜ್ಞಾನವನ್ನು ಕಲಿಸುವದಕ್ಕಾಗಿ ಕಾಲೇಜುಗಳು ಇರುವವು. ಹಿಂದುಸ್ಥಾನದಲ್ಲಿಯೂ ಮುಂಬಯಿ, ಮದ್ರಾಸ, ಬನಾರಸ ವಿಶ್ವವಿದ್ಯಾನಿಲಯುಗಳಲ್ಲಿ ಗ್ರಂಥ ವಿಜ್ಞಾನವನ್ನು ಕಲಿಸುವರು. ಭಂಡಾರಿಗನು ಈ ಶಾಸ್ತ್ರದಲ್ಲಿ ಪಾರಂಗತನಾಗಿದ್ದರೆ ನಮಗೆ ಬೇಕಾದ ಪುಸ್ತಕವನ್ನು ಅಲ್ಪ ವೇಳೆಯಲ್ಲಿಯೇ ಹುಡುಕಿ ಕೊಡಬಲ್ಲನು.

ವಾಚನಾಲಯುಗಳಿಂದ ಜ್ಞಾನಾಭಿವೃದ್ಧಿಯನ್ನು ಬೆಳೆಸಿಕೊಳ್ಳುವದಕ್ಕೆ ಸಾಧ್ಯವಾಗುವದಲ್ಲದೆ ಅದರಿಂದ ಮನೋರಂಜನೆಯೂ ಆಗುವದು.

ಜಗತ್ತಿನಲ್ಲಿ ನಡೆಯುತ್ತಿರುವ ಸುದ್ದಿಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವು ಎಲ್ಲರಲ್ಲಿಯೂ ಇರುವದು. ಆದ್ದರಿಂದ ಪ್ರತಿಯೊಬ್ಬರೂ ವೃತ್ತಪತ್ರಗಳನ್ನು ಓದುವದಕ್ಕಾಗಿ ವಾಚನಾಲಯಗಳಿಗೆ ಬರುವರು. ವೃತ್ತಪತ್ರಿಕೆಗಳಲ್ಲಿ ತಮಗೆ ಬೇಕಾದ ಕತೆಗಳನ್ನು ಓದುವರು. ಇದರಿಂದ ಮನೋರಂಜನೆಯೂ ಆಗುವದು. ವಾಚನಾಲಯಕ್ಕೆ ಹೋಗುವದರಿಂದ ಓದಲು ಮನಸ್ಸಿರದಿದ್ದರೂ ಅಲ್ಲಿಯ ವಾತಾವರಣವು ನಮ್ಮನ್ನು ಓದುವಂತೆ ಮಾಡುವದು

ಪ್ರತಿಯೊಂದು ಶಾಲೆಯಲ್ಲಿಯೂ, ಕಾಲೇಜಿನಲ್ಲಿಯೂ ಈಗ ವಾಚನಾಲಯಗಳಿರುವವು. ಪಟ್ಟಣಗಳಲ್ಲಿ ವಾಚನಾಲಯಗಳು ಭರದಿಂದ ಬೆಳೆಯುತ್ತಿರುವವು. ಆದರೆ ಗ್ರಾಮಗಳಲ್ಲಿಮಾತ್ರ ವಾಚನಾಲಯಗಳು ಇರುವದಿಲ್ಲ. ವಾಚನಾಲಯವು ಜನರ ಜ್ಞಾನವನ್ನು ವಿಕಾಸ ಮಾಡುವದರಿಂದ ಅವು ಪ್ರತಿಯೊಂದು ಹಳ್ಳಿಯಲ್ಲಿಯೂ ಸ್ಥಾಪಿಸಲ್ಪಡಬೇಕು. ನಮ್ಮ ಜನರಿಗೆ ಜ್ಞಾನ ಲಾಲಸೆಯೇ ಇಲ್ಲದಂತಾಗಿದೆ. ಗ್ರಾಮಪಂಚಾಯತಿಗಳು ವಾಚನಾಲಯವನ್ನು ತೆರೆಯುವದು ಅವಶ್ಯಕರ್ತವ್ಯವೆಂದು ಭಾವಿಸಬೇಕು. ಪ್ರತಿಯೊಂದು ಹಳ್ಳಿಯಲ್ಲಿಯೂ ಸಂಚಾರೀವಾಚನಾಲಯವನ್ನುತೆರೆಯಬೇಕು. ಅಂದರೆಪ್ರತಿವರುಷಕ್ಕೊಮ್ಮೆ ಪುಸ್ತಕಗಳನ್ನು ಬದಲು ಮಾಡಲು ಸಾಧ್ಯವಾಗುವದು. ಸಂಚಾರೀವಾಚನಾಲಯವೆಂದರೆ ಪ್ರತಿಯೊಂದುಹ ಳ್ಳಿಯಲ್ಲಿಯೂ ವಾಚನಾಲಯವನ್ನು ಸ್ಥಾಪಿಸಿ ವರ್ಷಕ್ಕೊಮ್ಮೆ ಅಲ್ಲಿಯ ಪುಸ್ತಕಗಳನ್ನು ಬೇರೆ ಹಳ್ಳಿಗೆ ಕಳಿಸಿ ಅಲ್ಲಿಯ ಪುಸ್ತಕಗಳನ್ನುತರುವದು. ಈರೀತಿ ಅದಲುಬದಲುಮಾಡುವದರಿಂದ ವಾಚನಾಲಯದಲ್ಲಿ ನವೀನತೆಯುಂಟಾಗುವದು. ಜ್ಞಾನಮಟ್ಟವನ್ನು ಹೆಚ್ಚಿಸುವದಕ್ಕಾಗಿ ವಾಚನಾಲಯಗಳು ಅವಶ್ಯಕವಾದವುಗಳು. ಗ್ರಾಮಪಂಚಾಯತಿಯು ವಾಚನಾಲಯವನ್ನು ಸ್ಥಾಪಿಸುವದು ತನ್ನ ಅವಶ್ಯವಾದ ಕರ್ತವ್ಯವೆಂದುಭಾವಿಸಬೇಕು. ಮನುಷ್ಯನಿಗೆ ಕೇವಲ ಆಹಾರ ದೊರೆತರೆ ಅವನ ಸಮಸ್ಯೆ ಮುಗಿಯಲಿಲ್ಲ. ಪಶು-ಪಕ್ಷಿಗಳಂತೆ ಕೇವಲ ತಿನ್ನುವದು; ನಿದ್ದೆಮಾಡುವದು ಇವಿಷ್ಟೇ ತನ್ನ ಕಾರ್ಯಗಳೆಂದು;ಅವನು ತಿಳಿದರೆ ಅವನಿಗೂ ಪ್ರಾಣಿಗಳಿಗೂ ಭೇದವೇನು? ಪ್ರಾಣಿಗಳಿಗೆ ಬುದ್ಧಿ ಕಡಿಮೆ. ಮನುಷ್ಯ ಮತ್ತು ಪಶು ಪಕ್ಷಿಗಳಲ್ಲಿ ಭೇದಮಾಡುವಾಗ ನಾವು ಮನುಷ್ಯನು ಉಳಿದ ಎಲ್ಲ ಪ್ರಾಣಿಗಳಿಗಿಂತಲೂ ಬುದ್ಧಿವಂತನಾದವನೆಂದು ಹೇಳುತ್ತೇವೆ. ಒಂದುವೇಳೆ ಅವನು ತನ್ನ

ಬುದ್ಧಿಯನ್ನು ಬೆಳೆಯಿಸಿಕೊಳ್ಳದಿದ್ದರೆ ಅವನ ಬಾಳು ಪಶುಗಳಿಗಿಂತಲೂ ಹೀನವಾದದ್ದು. ಬುದ್ಧಿಸಾಮರ್ಥ್ಯದಿಂದಲೇ ಮನುಷ್ಯನು ಎಲ್ಲ ಪ್ರಾಣಿಗಳನ್ನು ತನ್ನ ವಶದಲ್ಲಿಟ್ಟುಕೊಂಡಿರುವನು. ಬುದ್ಧಿ ಸಾಮರ್ಥ್ಯವನ್ನು ಬೆಳಸಿಕೊಳ್ಳುವದಕ್ಕೆ ವಾಚನಾಲಯಗಳು ಸಹಾಯ ಮಾಡುತ್ತಲಿವೆ.

## ೮. ಪೂರ್ವಜರಿಗಿಂತ ನಾವು ಸುಖಿಗಳಾಗಿರುವೆವೋ?

ಈ ಯುಗದಲ್ಲಿ ಮನುಷ್ಯನ ಜೀವನವನ್ನು ಸುಖಮಯ ಮಾಡುವದಕ್ಕಾಗಿ ಅನೇಕ ಶೋಧಗಳಾಗಿವೆ. ನಾವು ಒಂದು ದೇಶದಿಂದ ಮತ್ತೊಂದು ದೇಶಕ್ಕೆ ವಿಮಾನಗಳಲ್ಲಿ ಕುಳಿತು ಸ್ವಲ್ಪ ವೇಳೆಯಲ್ಲಿ ಹೋಗಬಹುದು. ಇಲ್ಲಿಯೇ ಕುಳಿತು ಬೇರೆ ದೇಶಗಳಲ್ಲಿ ನಡೆಯುವ ಸಂಗೀತವನ್ನು ಕೇಳಬಹುದು. ಬೇರೆ ಊರಲ್ಲಿರುವ ನಮ್ಮ ಬಂಧು ಬಳಗದವರಿಗೆ ತಾರಾಯಂತ್ರದಿಂದ ಸುದ್ದಿಯನ್ನು ಮುಟ್ಟಿಸಬಹುದು. ಪ್ರವಾಸ ಮಾಡುವದು ಅತಿ ಸುಲಭವಾಗಿದೆ.

ಪ್ರಾಚೀನ ಕಾಲದಲ್ಲಿ ದೇಶ ದೇಶಗಳಲ್ಲಿ ಇಷ್ಟು ಸಂಪರ್ಕವು ಇರಲಿಲ್ಲ. ವ್ಯಾಪಾರ ಮಾಡುವದು ಕಠಿಣವಾಗಿತ್ತು. ಈಗ ಜಪಾನದಿಂದ ಆಟಿಗೆ ಸಾಮಾನುಗಳು, ಜರ್ಮನಿಯಿಂದ ಯಂತ್ರದ ಸಾಮಾನುಗಳನ್ನು, ಫ್ರಾನ್ಸ ಮುಂತಾದ ದೇಶಗಳಿಂದ ಹಣ್ಣುಹಂಪಲುಗಳು ನಮ್ಮ ದೇಶಕ್ಕೆ ಬರುತ್ತವೆ. ಆಗಿನ ಕಾಲದಲ್ಲಿ ರಾಜರಿಗೆ ದೊರೆಯುತ್ತಿದ್ದ ಸುಖಸೌಕರ್ಯಗಳು ಸ್ವಲ್ಪ ಖರ್ಚಿನಲ್ಲಿಯೇ ಸಾಮಾನ್ಯ ಪ್ರಜೆಗೆ ಈ ಹೊತ್ತು ದೊರೆಯುತ್ತವೆ.

ಪ್ರಾಚೀನ ಕಾಲದಲ್ಲಿ ವಿದ್ಯಾಭ್ಯಾಸ ಮಾಡುವದು ಬಹಳ ಕಠಿಣವಾಗಿತ್ತು. ಪುಸ್ತಕಗಳು ಇರಲೇ ಇಲ್ಲ. ಮುದ್ರಣಯಂತ್ರವೇ ಆಗ ಇರದ್ದರಿಂದ ಕೇವಲ ಹಸ್ತ ಪ್ರತಿಗಳನ್ನು ತಯಾರಿಸುತ್ತಿದ್ದರು. ಈಗ ತೀರ ಅಗ್ಗ ಬೆಲೆಗೆ ಬೇಕಾದ ಪುಸ್ತಕಗಳನ್ನು ಕೊಳ್ಳುತ್ತೇವೆ. ಬೇರೆ ಬೇರೆ ದೇಶದ ಸುದ್ದಿಗಳನ್ನು ತಿಳಿದುಕೊಳ್ಳುವದಕ್ಕಾಗಿ ವೃತ್ತಪತ್ರಿಕೆಗಳನ್ನು ಓದುವೆವು. ಯುರೋಪ ಅಮೇರಿಕಾ ಖಂಡದಲ್ಲಿ ನಡೆದ ಸಂಗತಿಗಳನ್ನು ಮರು ದಿವಸವೇ ವೃತ್ತಪತ್ರಿಕೆಗಳಲ್ಲಿ ಓದುತ್ತೇವೆ. ರಾಜಕಾರಣ, ಅರ್ಥಶಾಸ್ತ್ರ, ಧರ್ಮ, ನೀತಿ, ಇತಿಹಾಸ ಮುಂತಾದ ವಿಷಯಗಳ ಬಗ್ಗೆ ಅನೇಕ ಲೇಖಗಳನ್ನು ವೃತ್ತಪತ್ರಿಕೆಯಲ್ಲಿ ಓದಬಹುದು.

ಮನುಷ್ಯನು ವಿದ್ಯುತ್ತಿನ ಸಹಾಯದಿಂದ ಹೊಲಗಳಿಗೆ ನೀರು ಹಾಯಿಸಬಹುದು. ಪ್ರಕಾಶವನ್ನು ಪಡೆಯಬಹುದು, ಅಡಿಗೆಮಾಡಬಹುದು, ಯಂತ್ರಗಳನ್ನು ನಡಿಸಬಹುದು, ಬಂಡಿಗಳನ್ನು ಓಡಿಸಬಹುದು. ಯಾವ ಕೆಲಸ ವಿದ್ಯುತ್ತಿನಿಂದ ಅಸಾಧ್ಯವಾದದ್ದು! ಸಾವಿರಾರು ಜನರು ಮಾಡುವ ಕೆಲಸವನ್ನು ವಿದ್ಯುತ್ತಿನ ಶಕ್ತಿಯಿಂದ ಅಲ್ಪ ವೇಳೆಯಲ್ಲಿ ಮಾಡಬಹುಹುದು, ಅತಿ ನಯವಾದ ಬಟ್ಟೆಗಳನ್ನು ತಯಾರಿಸಬಹುದು.

ಕಾಡು ಜನರು ಗುಡಿಸಲುಗಳಲ್ಲಿ ವಾಸವಾಗಿರುತ್ತಿದ್ದರು. ಮಳೆ ಬಂದರೆ ಒಮ್ಮೊಮ್ಮೆ ಗುಡಿಸಲು ಬಿದ್ದು ಜೀವಕ್ಕೆ ಅಪಾಯ ಒದಗುತ್ತಿತ್ತು. ಹಿಂಸ್ರ ಪಶುಗಳಿಂದ ರಕ್ಷಣೆ ಮಾಡಿಕೊಳ್ಳುವದಕ್ಕೆ ಶಸ್ತ್ರಾಸ್ತ್ರಗಳಿರಲಿಲ್ಲ. ಆ ಕಾಲದ ಮಾನವನು ಈಗ ಕಟ್ಟಿದ ಮನೋಹರವಾದ ಕಟ್ಟಡಗಳನ್ನು ನೋಡಿದರೆ ಆಶ್ಚರ್ಯಪಡದೆ ಇರಲಾರನು.

ಇಷ್ಟೆಲ್ಲ ಅನುಕೂಲತೆಗಳಿದ್ದರೂ, ಸುಖಸೌಕರ್ಯಗಳಿದ್ದರೂ ಇಂದು ಮಾನವನು ಸುಖಿಯಾಗಿಲ್ಲ. ಕೇವಲ ಭೌತಿಕ ವಸ್ತುಗಳಿಂದ ನಾವು ಸುಖಿಯಾಗಲಾರೆವು. ಎಷ್ಟು ಸಂಪತ್ತನ್ನು ಗಳಿಸಿದರೂ ಮನಸ್ಸಿಗೆ ತೃಪ್ತಿಯಾಗಲಾರದು. ವಿಷಯಸುಖದ ಬೆನ್ನು ಹತ್ತಿ ನಾವು ಸುಖಿಯಾಗಬಹುದೆ? ನಾವು ಸುಖಿಯಾಗಬೇಕಾದರೆ ಮನಸ್ಸನ್ನು ಬಿಗಿಹಿಡಿಯಬೇಕು. ಮನಸ್ಸು ನಮ್ಮ ಅಧೀನದಲ್ಲಿದ್ದರೆ ಅಲ್ಪದರಲ್ಲಿಯೇ ನಾವು ಸುಖಿಯಾಗಬಹುದು. ಇಲ್ಲವಾದರೆ ಮಿಡಾಸನಂತೆ ಎಷ್ಟು ಬಂಗಾರ ದೊರೆತರೂ, ಐಶ್ವರ್ಯ ದೊರೆತರೂ ದುಃಖ ಪಡಬೇಕಾಗುವದು. ಮನುಷ್ಯನೆಂದರೆ ಯಂತ್ರವಲ್ಲ. ಅವನಲ್ಲಿ ಅಮರವಾದ ಆತ್ಮವಿದೆ. ಅವನು ಪರೋಪಕಾರ ಮಾಡುವದರಲ್ಲಿಯೇ ತನ್ನ ಕಲ್ಯಾಣವಿದೆಯೆಂದು ಅರಿತುಕೊಳ್ಳಬೇಕು.

ಗಾಂಧೀಜಿಯವರು ಇಚ್ಛೆ ಮಾಡಿದ್ದರೆ ಎಲ್ಲ ಐಹಿಕ ಭೋಗಗಳನ್ನೂ ಅನುಭವಿಸಬಹುದಾಗಿತ್ತು. ಅವರು ಎಲ್ಲವನ್ನು ತೊರೆದರು. ಮಾನವನ ಉದ್ಧಾರಕ್ಕಾಗಿ ತ್ಯಾಗ ಮಾಡಿದರು. ಸತ್ಯ ಮತ್ತು ಅಹಿಂಸೆಗಳ ಪೂಜಾರಿಗಳಾದರು. ಸರಳ ಜೀವನವನ್ನು ನಡಿಸಿ ಜಗತ್ತಿಗೆ ಮಾರ್ಗದರ್ಶಕರಾದರು. ಮಾನವನು ಕೇವಲ ಸಖದ ಸಾಧನಗಳನ್ನು ನಿರ್ಮಿಸುವದರಿಂದ ಸುಖಿಯಾಗಲಾರನು. ಎಲ್ಲ ಸುಖಕ್ಕೂ ದುಃಖಕ್ಕೂ ಮನಸ್ಸೇ ಕಾರಣವು. ಜೇಲಿನಲ್ಲಿದ್ದ

ವನು ಸ್ವತಂತ್ರನಾಗಿರಬಹುದು. ಹೊರಗಿದ್ದವನು ಗುಲಾಮನಾಗಿರಬಹುದು. ಮನಸ್ಸನ್ನು ಗೆದೆಯದೆ ನಾವು ಸುಖಿಯಾಗಲಾರೆವು. ಎಷ್ಟು ಐಶ್ವರ್ಯವನ್ನು ಉಪಭೋಗಿಸಿದರೂ ನಾವು ತೃಪ್ತಿಯನ್ನು ಹೊಂದಲಾರೆವು.

ಇಂದು ಎಲ್ಲ ಕಡೆಗೂ ದ್ವೇಷ, ಅಸೂಯೆ, ಮತ್ಸರಗಳೇ ಕಂಡು ಬರುತ್ತಿರುವವು. ಸತ್ಯವೆನ್ನುವದು ಮಾಯವಾಗಿದೆ. ಧನವನ್ನು ಗಳಿಸುವದೇ ತನ್ನ ಜೀವನದ ಗುರಿಯೆಂದು ಮನುಷ್ಯನು ತಿಳಿದಿರುವನು. ನಿಜವಾದ ಪ್ರೇಮ, ಗೆಳೆತನ, ಗುರುಭಕ್ತಿ, ದೇವರಲ್ಲಿ ನಂಬಿಗೆ. ಇಂದು ಎಲ್ಲಿವೆ? ಪ್ರೇಮ, ವಿಶ್ವಾಸಗಳಿಲ್ಲದೆ ನಾವುಸುಖಿಯಾಗುವದೆಂತು? ನಮ್ಮಕರ್ತವ್ಯವನ್ನು ನಾವು ಅರಿಯದ ಹೊರತು ಸುಖಿಯಾಗಲಾರೆವು. ಅನೇಕ ಸುಧಾರಣೆಗಳಾದರೂ ನಮ್ಮ ಜೀವನವು ಸತ್ವಯುತವಾಗಬೇಕಾದರೆ, ನಾವು ಸುಖಿಯಾಗಬೇಕಾದರೆ, ನಮ್ಮ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಳ್ಳಬೇಕು.

## ೯. ನಾನು ನೋಡಿದ ಸೃಷ್ಟಿಸೌಂದರ್ಯ

ಈ ಜಗತ್ತಿನಲ್ಲಿ ಭಗವಂತನು ಅನೇಕ ಮನೋಹರವಾಧ ದೃಶ್ಯಗಳನ್ನು ನಿರ್ಮಿಸಿರುವನು. ಆಕಾಶದಲ್ಲಿ ತಾರೆಗಳು, ಮೋಡಗಳು, ಸೂರ್ಯೋದಯ ಮತ್ತು ಸೂರ್ಯಾಸ್ತ ಇವು ಎಷ್ಟು ಮನೋಹರವಾದವುಗಳು. ಆದರೆ ಸೂರ್ಯೋದಯ ಸೂರ್ಯಾಸ್ತಗಳು ದಿನಾಲು ಆಗುವದರಿಂದ ಅವುಗಳ ಮಹತ್ವವೇ ನಮಗೆ ತಿಳಿಯದಂತಾಗಿದೆ.

ನಾನು ಮುಂಜಾನೆ ಬೇಗನೆ ಎದ್ದು ಸೃಷ್ಟಿಸೌಂದರ್ಯವನ್ನು ನೋಡುವದರ ಸಲುವಾಗಿ ಹೊರಗೆ ಹೊರಟೆನು. ಊರ ಸುತ್ತ ಮುತ್ತಲೂ ಗಿಡಗಳು ಹೂಗಳಿಂದ ನಯನಮನೋಹರವಾಗಿದ್ದವು. ಗಾಳಿಯು ಸಾವಕಾಶವಾಗಿ ಬೀಸುತ್ತಿತ್ತು. ಹೂಗಳವಾಸನೆಯು ಇಡೀ ಪ್ರದೇಶವನ್ನೆಲ್ಲ ಸುಗಂಧಮಯವನ್ನಾಗಿ ಮಾಡಿತ್ತು. ಹೂಗಳಲ್ಲಿ ಎಷ್ಟು ಬಣ್ಣದವು! ಎಲ್ಲ ಹೂಗಳ ವಾಸನೆಯೂ ಬೇರೆ ಬೇರೆ !!

ಹಾಗೆಯೇ ಮುಂದೆ ಸಾಗಿದೆನು. ಭತ್ತದ ಗದ್ದೆಗಳು ಭೂದೇವಿಗೆ ನಮಸ್ಕಾರ ಮಾಡುತ್ತವೆಯೋ ಏನೋ ಎಂಬಂತೆ ತೋರುತ್ತಿದ್ದವು. ಎಲ್ಲ ಕಡೆಗೂ ಹಸಿರೇ ಹಸಿರು. ಗಾಳಿಯು ಬೀಸಿದ ಕೂಡಲೇ ಅವೆಲ್ಲವೂ ಮಣಿ

ಯುತ್ತಿದ್ದವು. ಸಮುದ್ರದ ತೆರೆಗಳಂತೆ ಒಂದು ತರದ ಸಪ್ಪಳವು ಒಂದೇ ಷವನೆ ಕೇಳ ಬರುತ್ತಿತ್ತು. ಮತ್ತೊಂದು ಕಡೆಗೆ ಕಬ್ಬಿನ ತೋಟಗಳು ಶೋಭಿಸುತ್ತಿದ್ದವು. ಒಂದು ಕಡೆಗೆ ಜೋಳ, ಒಂದು ಕಡೆಗೆ ಕಬ್ಬು, ಮತ್ತೊಂದು ಕಡೆಗೆ ಭತ್ತ ಇವು ನೃತ್ಯ ಮಾಡುವಂತೆ ತೋರುತ್ತಿತ್ತು. ಕಬ್ಬಿನ ತೋಟವನ್ನು ನೋಡಿದರೆ ಸೃಷ್ಟಿದೇವಿಯು ಹಳದೀಬಣ್ಣದ ಸೀರೆಯನ್ನುಟ್ಟು ಕೊಂಡು, ತಾಳ ವಾದ್ಯಗಳಿಂದ ಸಮೇತಳಾಗಿ ನೃತ್ಯ ಮಾಡುವಂತೆ ತೋರುತ್ತಿತ್ತು !

ಹಾದಿಯಲ್ಲಿ ಒಂದು ಹಳ್ಳವು ಹತ್ತಿತು. ಹಳ್ಳದ ದಂಡೆಯಗುಂಟ, ಅನೇಕಗಿಡಗಳು ಬೆಳೆದಿದ್ದವು. ಹಳ್ಳವು ಮಹಾಕವಿ ಟೆನ್ನಿಸನ್ನನು ಹೇಳಿದಂತೆ

Men may come, men may go
But I go on for ever

ಎಂದು ಬಹಳ ಆಡಂಬರದಿಂದ ಹರಿಯುತ್ತಿತ್ತು. ಚಿರಜೀವಿಯಾದ ಹಳ್ಳವು ಅಲ್ಪಾಯುಷಿಗಳಾದ ಮನುಷ್ಯನಿಗೆ ಮಹತ್ವಕೊಡುವದೇ ?

ಹೊಲದಲ್ಲಿ ಹಳ್ಳದ ದಂಡೆಗೆ ಒಕ್ಕಲಿಗನು ತನ್ನ ಗುಡಿಸಲನ್ನು ಕಟ್ಟಿದ್ದನು. ಗುಡಿಸಲಿಗೆ ಆಸರವಾಗಿ ಮೇಲೆ ಒಂದು ಮಾವಿನ ಮರವಿತ್ತು. ಗುಡಿಸಲಿನ ಮೇಲೆ ಅನೇಕ ತರದ ಬಳ್ಳಿಗಳು ಹಬ್ಬಿದ್ದವು. ಸೃಷ್ಟಿದೇವಿಯ ತವರುಮನೆಯಾದ ಈ ಭೂಮಿಯಲ್ಲಿ ಒಕ್ಕಲಿಗನು ಇರುವನು. ಅವನ ಗುಡಿಸಲಿನಲ್ಲಿಯೂ ಬಳ್ಳಿಗಳು ಹಬ್ಬಿದ್ದವು. ಅವನು ಯಾವಾಗಲೂ ಸೃಷ್ಟಿದೇವಿಯ ಸಂಗಡ ವಾಸಿಸುವನು. ಎತ್ತ ನೋಡಿದರೂ ಭೂಮಿಯು ಹಸಿರು ಸೀರೆ ಉಟ್ಟಂತೆ ತೋರುತ್ತಿತ್ತು. ಗಾಳಿಯು ಮೇಲಿಂದ ಮೇಲೆ ಬೀಸುತ್ತಿದ್ದುದರಿಂದ ಒಂದು ತರದ ಸಪ್ಪಳವು ಗಿಡಗಳೊಳಗಿಂದ ಬಂದು ಬೇರೆ ಕಡೆಗೆ ಹೋಗುತ್ತಿತ್ತು. ಅಲ್ಲಿ ಕ್ಷಣಕಾಲ ನೋಡಿದರೆ ಸೃಷ್ಟಿಯೆಲ್ಲವೂ ನಾಟ್ಯವಾಡುವಂತೆ ತೋರುತ್ತಿತ್ತು. ಕೆಲವು ನಿಮಿಷಗಳ ವರೆಗೆ ನಾನು ಸೃಷ್ಟಿದೇವಿಯ ಸೌಂದರ್ಯ ನೋಡುವದರಲ್ಲಿ ತಲ್ಲೀನನಾಗಿದ್ದೆನು. ಪೃಥ್ವಿಯ ಮೇಲೆ ಇದಕ್ಕಿಂತಲೂ ಸುಖದ ಕ್ಷಣವು ಯಾವದಿರುವದು ?

ಆಗ ಇನ್ನೂ ಸೂರ್ಯನು ಮೂಡಿರಲಿಲ್ಲ. ಮೂಡುವ ಸೂರ್ಯನನ್ನು ನೋಡಬೇಕೆಂಬ ಇಚ್ಛೆಯಿಂದ ಒಂದು ಗುಡ್ಡದ ಮೇಲೆ ಏರಿ ನಿಂತು ಕೊಂಡೆನು. ಅಲ್ಲಿ ನಿಂತರೆ ನಮ್ಮ ಊರು, ಕೆರೆ, ಭೂಮಿಯಲ್ಲಿಯ ಬೆಳೆ ಗಳು ಎಲ್ಲವೂ ಕಾಣುತ್ತಿದ್ದವು. ಪೂರ್ವ ದಿಕ್ಕು ಇದ್ದಕ್ಕಿದ್ದಂತೆ ಕೆಂಪಾ ಯಿತು. ಕೆಂಪಾದ ಕೆಂಡದಂತೆ ಹೊಳೆಯುತ್ತ ಸೂರ್ಯನು ಹೊರಬಿದ್ದನು. ಬಹಳ ಹೊತ್ತಿನವರೆಗೆ ಸೂರ್ಯನನ್ನೂ ಪ್ರಕೃತಿ ಸೌಂದರ್ಯವನ್ನೂ ನೋಡುತ್ತ ಕುಳಿತುಕೊಂಡೆನು. ಆ ಸ್ಥಳವು ತಪಸ್ಸು ಮಾಡುವದಕ್ಕೆ ಯೋಗ್ಯವಾದ ಸ್ಥಾನವೆಂದು ನನಗೆ ತೋರಿತು. ಅಷ್ಟರಲ್ಲಿ ಪಕ್ಷಿಗಳ ಸಂಗೀ ತವು ಎಲ್ಲ ಕಡೆಗೂ ಪಸರಿಸಿತು. ಮನಸ್ಸಿಲ್ಲದೆ ನಾನು ಮನೆಗೆ ಬಂದೆನು. ಆ ದಿವಸವನ್ನು ಮಾತ್ರ ಎಂದೂ ಮರೆಯಲಾರೆನು. 'A thing of beauty is a joy for ever' ಎಂದು ಕವಿಯು ಹಾಡಿಲ್ಲವೇ?

## ೧೦. ಶಾರೀರಿಕ ಶಿಕ್ಷಣದ ಮಹತ್ವ

ನಾವು ಸುಖಿಗಳಾಗಬೇಕಾದರೆ ನಮ್ಮ ಶರೀರವನ್ನು ಬಲಪಡಿಸಬೇಕು. ನಮ್ಮ ಶರೀರ ಸಂಪತ್ತು ಕೆಟ್ಟರೆ ಜಗತ್ತಿನಲ್ಲಿಯ ಯಾವ ಸುಖವನ್ನೂ ಅನು ಭೋಗಿಸಲಾರೆವು; ದೇಶ ಸೇವೆಯನ್ನಾಗಲಿ, ಪರಮಾತ್ಮನ ಸೇವೆಯನ್ನಾ ಗಲಿ ಮಾಡಲಾರೆವು. ನಾವು ದೀರ್ಘಾಯುಗಳಾಗಬೇಕಾದರೆ ಶರೀರವನ್ನು ಸರಿಯಾದ ಸ್ಥಿತಿಯಲ್ಲಿಡಬೇಕು. ಆರೋಗ್ಯವನ್ನು ಕಾಪಾಡಿಕೊಳ್ಳುವದು ನಮ್ಮ ಮೊದಲನೇ ಗುರಿ. ಗೀತೆಯಲ್ಲಿ ಕೃಷ್ಣನು ಬಲಹೀನನಾದವನು ಆತ್ಮೋದ್ಧಾರ ಮಾಡಿಕೊಳ್ಳಲಾರನು ಎಂದು ಹೇಳಿರುವನು. ಆದಕ್ಕಾ ಗಿಯೇ ನಮ್ಮ ಪೂರ್ವಜರು "ಶರೀರ ಮಾದ್ಯಂ ಖಲು ಧರ್ಮ ಸಾಧನಂ" ಎಂದು ಹೇಳಿರುವರು.

ಮಹಾಭಾರತದಲ್ಲಿ ಭೀಮನ ಸಾಮರ್ಥ್ಯವನ್ನು ವರ್ಣಿಸಲಾಗಿದೆ. ಅವನು ಮಹಾಬಲಶಾಲಿಯಾದ್ದರಿಂದ ಪಾಂಡವರಿಗೆ ಬಂದ ಎಲ್ಲ ಗಂಡಾಂತರ ಗಳನ್ನೂ ದೂರು ಮಾಡಿದನು. ಯಾವ ಕಷ್ಟ ಬಂದರೂ ಅವನು ಧೈರ್ಯ ಗುಂದುತ್ತಿರಲಿಲ್ಲ. ಕೀಚಕನು ದ್ರೌಪದಿಯ ಮೇಲೆ ಕೈ ಮಾಡಿದಾಗ ಭೀಮ ನಿಲ್ಲದಿದ್ದರೆ ಅವಳ ಗತಿಯು ಏನಾಗುತ್ತಿತ್ತು. ಭರತಖಂಡದಲ್ಲಿ ಪೂರ್ವಕಾಲ

ದಿಂದಲೂ ಮನಸ್ಸಿನಷ್ಟೇಶರೀರಕ್ಕೂಮಹತ್ವ ಕೊಡಲಾಗಿದೆ. ಮನಸ್ಸು ನಮ್ಮ ಶರೀರದಲ್ಲಿ ವಾಸವಾಗಿರುವದು. ಮನಸ್ಸಿನ ವಾಸಸ್ಥಾನವಾದ ಶರೀರವು ಗಟ್ಟಿ ಮುಟ್ಟಾಗಿರದಿದ್ದರೆ ನಾವು ನಮ್ಮ ರಕ್ಷಣೆಯನ್ನು ಮಾಡಿಕೊಳ್ಳಲಾರೆವು. ತಮ್ಮ ರಕ್ಷಣೆಯನ್ನು ಮಾಡಿಕೊಳ್ಳಲಾರದವರು ದೇಶಸೇವೆಯನ್ನೂ ಸಮಾಜ ಸೇವೆಯನ್ನೂ ಎಂತು ಮಾಡುವರು?

ಶರೀರ ಸಂಪತ್ತನ್ನು ಗಳಿಸಬೇಕಾದರೆ, ಮೊದಲನೆಯದಾಗಿ ನಾವು ದಿನಾಲು ವ್ಯಾಯಾಮ ಮಾಡಬೇಕು. ವ್ಯಾಯಾಮ ಮಾಡದಿದ್ದರೆ ನಮ್ಮ ಶರೀರವು ಬಲಗುಂದುವದು. ಆದಕ್ಕಾಗಿಯೇ ಮಹಾತ್ಮಾಜಿಯವರು ಪ್ರತಿಯೊಬ್ಬನು ದಿನಾಲು ಒಂದುಗಂಟೆಯಾದರೂ ಶಾರೀರಿಕ ಶ್ರಮ ಮಾಡಬೇಕೆಂದು ಹೇಳಿರುವರು. ಇದರಿಂದ ನಾವು ಧೃಡಕಾಯರೂ, ದೀರ್ಘಾಯುಗಳೂ ಆಗುವೆವು.

ಹೊಲದಲ್ಲಿ ಕೆಲಸ ಮಾಡುವ ಒಕ್ಕಲಿಗರು ಯಾವಾಗಲೂ ಶುದ್ಧ ಹವೆಯಲ್ಲಿ ಕೆಲಸ ಮಾಡುವದರಿಂದ ಅವರು ಸ್ವಾಭಾವಿಕವಾಗಿಯೇ ಗಟ್ಟಿಗ ರಾಗಿರುವರು. ಆದರೆ ಬೌದ್ಧಿಕ ಶ್ರಮಮಾಡುವವರಿಗೆ ಯಾವ ರೀತಿಯಿಂದಲೂ ಶರೀರಕ್ಕೆ ವ್ಯಾಯಾಮವಾಗುವದಿಲ್ಲ. ಶಾಲೆಯಲ್ಲಿ ಕಲಿಯುವ ವಿದ್ಯಾರ್ಥಿ ಗಳಿಗೆ ಕೇವಲ ಬೌದ್ಧಿಕ ಶ್ರಮವೇ ಹೆಚ್ಚಾಗುತ್ತದೆ. ಎಳೆವಯಸ್ಸಿನಲ್ಲಿ ವಿದ್ಯಾರ್ಥಿಗಳು ವ್ಯಾಯಾಮ ಮಾಡದಿದ್ದರೆ ಬೇಗನೆ ಅವರು ಬಲಹೀನರಾಗು ವರು. ಆದ್ದರಿಂದ ಎಲ್ಲಶಾಲೆಗಳಲ್ಲಿಯೂಈಗಶಾರೀರಿಕ ಶಿಕ್ಷಣವನ್ನು ಕಡ್ಡಾಯ ವಾಗಿ ಮಾಡಲಾಗಿದೆ. ವಿದ್ಯಾರ್ಥಿಗಳು ಕೇವಲ ವಿದ್ಯೆಕಲಿತರೆ ಪ್ರಯೋಜನ ವಿಲ್ಲ. ಅವರು ಧೃಡಕಾಯರೂ ಆಗಬೇಕು. ಇಲ್ಲದಿದ್ದರೆ ಅವರ ವಿದ್ಯೆಯು ನಿಷ್ಪ್ರಯೋಜಕವಾಗುವದು. 'A Sound mind in a sound body' ಎಂದು ಆಂಗ್ಲ ನಾಣ್ಣುಡಿಯು ಸಾರುವದು. ಬಲವಂತನಾದವನೇ ಬಲ್ಲಿದ ನಾಗುವನು.

ಇಂದು ಭಾರತದಲ್ಲಿ ಆಯುಷ್ಯಮಾನವು ಸರಾಸರಿ ೨೭ ಇರುತ್ತದೆ! ಹುಟ್ಟಿದಕೂಡಲೇಸತ್ತುಹೋಗುವಕೂಸುಗಳಸಂಖ್ಯೆಗೆಮಿತಿಯಿಲ್ಲ!! ಫ್ರಾನ್ಸದಲ್ಲಿ ಸರಾಸರಿ ಆಯುಷ್ಯವು ೬೦, ಇಂಗ್ಲಂಡದಲ್ಲಿ ೬೨ ನ್ಯೂಝಿಲಂಡದಲ್ಲಿ ೭೦ ಇರ್ರು ವದು. ಇದರಮೇಲಿಂದ ನಾವು ನಮ್ಮ ಆರೋಗ್ಯವನ್ನು ಎಷ್ಟು ದುರ್ಲಕ್ಷ್ಯ

ಮಾಡಿರುವೆವೆಂಬುದು ಗೊತ್ತಾಗುತ್ತದೆ. ಪ್ರಜೆಗಳು ಬಲಹೀನರಾದರೆ ದೇಶವು ಮುಂದಾಗುವದೇ? ಶರೀರ ಸಂಪತ್ತು ಎಲ್ಲ ಸಂಪತ್ತುಗಳಲ್ಲಿ ಮುಖ್ಯ ವಾದುದರಿಂದ ಅದನ್ನು ಕಾಯ್ದುಕೊಳ್ಳುವದು ನಮ್ಮೆಲ್ಲರ ಕರ್ತವ್ಯವಾಗಿದೆ.

## ೧೧. ಚರ್ಚಾಕೂಟಗಳು

ಮಾತೇ ಜ್ಯೋತಿರ್ಲಿಂಗವೆಂದು ಅಲ್ಲಮ್ಮ ಪ್ರಭುಗಳು ಒಂದೆಡೆಗೆ ಹೇಳಿರುವರು. ಮಾತಿನಿಂದಲೇ ನಾವು ವೈರತ್ವವನ್ನಾಗಲಿ ಮಿತ್ರತ್ವವನ್ನಾ ಗಲಿ ಬೆಳೆಯಿಸಿಕೊಳ್ಳುವೆವು. ಆದರಲ್ಲಿಯೂ ಸಭೆಯಲ್ಲಿ ಮಾತನಾಡುವದು ಸುಲಭವಾದುದಲ್ಲ. ಮಾತುಗಾರಿಕೆಯೂ ಒಂದು ಶ್ರೇಷ್ಠ ಕಲೆಯು. ಈ ಕಲೆ ಯನ್ನು ಬೆಳೆಯಿಸುವದಕ್ಕಾಗಿ ನಮಗೆ ಚರ್ಚಾಕೂಟಗಳು ಅವಶ್ಯವಾಗಿ ಬೇಕು.

ಜಗತ್ತಿನಲ್ಲಿ ಎಲ್ಲ ಕಡೆಗೂ ಪ್ರಜಾಪ್ರಭುತ್ವ ರಾಜ್ಯಪದ್ಧತಿಯು ಪ್ರಸಾರ ವಾಗಿದೆ. ಪ್ರಜಾಪ್ರಭುತ್ವದ ಯಶಸ್ಸಿಗೆ ಒಳ್ಳೇ ಭಾಷಣಕಾರರ ಅವಶ್ಯಕತೆ ಯಿದೆ ಯಾಕಂದರೆ ಪ್ರಜೆಗಳ ಬೆಂಬಲವನ್ನು ಪಡೆಯಬೇಕಾದವನು ಜನರು ತನಗೆ ಯಾಕೆ ಮತಕೊಡಬೇಕು ಎಂಬುದನ್ನು ತಿಳಿಸಿ ಹೇಳಬೇಕಾಗುವದು. ಇದಲ್ಲದೆ ರಾಜಕಾರಭಾರವನ್ನು ನಡಿಸತಕ್ಕವನು ಶಾಸನ ಸಭೆಯಲ್ಲಿ ಭಾಷಣ ಮಾಡಬೇಕಾಗುವದು. ಆದ್ದರಿಂದ ರಾಜಕಾರಣದಲ್ಲಿ ಪ್ರವೇಶ ಮಾಡತಕ್ಕವ ನಿಗೆ ಭಾಷಣಕಲೆಯು ಗೊತ್ತಿರಲಿಕ್ಕೇಬೇಕು. ಈ ಕಲೆಯನ್ನು ಒಮ್ಮೆಲೇ ಕಲಿಯಲಾಗುವದಿಲ್ಲ. ಅನೇಕ ಸಾರೆ ಭಾಷಣ ಮಾಡಿ ಈ ಕಲೆಯಲ್ಲಿ ಪ್ರವೀಣನಾಗಬೇಕಾಗುವದು.

ಶಾಲೆಗಳೇ ವಿದ್ಯಾರ್ಥಿಗಳಿಗೆ ಈ ಕಲೆಯನ್ನು ಕಲಿಸಬಲ್ಲವು. ತನ್ನ ಗೆಳೆಯರ ಮಧ್ಯದಲ್ಲಿ ಭಾಷಣ ಮಾಡುವದಕ್ಕೆ ವಿದ್ಯಾರ್ಥಿಯು ಹೆದರಬೇಕಾದ ಕಾರಣವಿಲ್ಲ. ಇದಲ್ಲದೆ ತನ್ನ ತಪ್ಪುಗಳನ್ನು ತಿದ್ದಿಕೊಳ್ಳುವದಕ್ಕೆ ಅವನಿಗೆ ಅವಕಾಶವೂ ಇರುವದು. ಎರಡನೆಯವರ ವಿಚಾರಗಳನ್ನು ಕೇಳುವಷ್ಟು ತಾಳ್ಮೆಯೂ ಅವನಲ್ಲಿ ಬರುವದು. ಚರ್ಚಾಕೂಟದಲ್ಲಿ ಭಾಗವಹಿಸುವವನು ಮೊದಲೇ ಸಿದ್ಧತೆಯನ್ನು ಮಾಡಿಕೊಳ್ಳಬೇಕಾಗುವದು. ಇದರಿಂದ ಅವನ ಜ್ಞಾನವಮಟ್ಟವೂ ಹೆಚ್ಚಾಗುವದು. ನಮ್ಮ ಸರಕಾರವು ಹೇಗೆ ಕೆಲಸಮಾಡುವದು ಎಂಬುದರ ಪ್ರತ್ಯಕ್ಷ ಜ್ಞಾನವು ಚರ್ಚಾಕೂಟದಿಂದ ಗೊತ್ತಾಗುವದು.

ಇಂದಿನ ವಿದ್ಯಾರ್ಥಿಗಳೇ ನಾಳೆ ನಾಡಿನ ಸೂತ್ರಧಾರರಾಗುವರು. ಆದ್ದರಿಂದ ಸಾಲೆಯಲ್ಲಿ ಚರ್ಚಾಕೂಟಗಳನ್ನು ಮೇಲಿಂದಮೇಲೆ ಏರ್ಪಡಿಸಬೇಕು. ಇದರಲ್ಲಿ ಭಾಗ ತೆಗೆದುಕೊಳ್ಳುವಂತೆ ವಿದ್ಯಾರ್ಥಿಗಳಿಗೆ ಉತ್ತೇಜನ ಕೊಡಬೇಕು, ಚರ್ಚಾಕೂಟಗಳನ್ನು ಅವರು ನಡಿಸುವಂತಾಗಬೇಕು. ಯಾರಾದರೂ ಪ್ರಶ್ನೆಕೇಳಿದರೆ ಅದಕ್ಕೆ ಯಾವ ರೀತಿಯಿಂದ ಉತ್ತರಕೊಡಬೇಕು ಎಂಬುದನ್ನು ಅವರು ಅರಿತುಕೊಳ್ಳುವರು.

ಗ್ರೀಸ ದೇಶದಲ್ಲಿ ದೇಮಾಸ್ಥನೀಸ ಎಂಬವನು ಬಹಳ ಶ್ರಮಪಟ್ಟು ಈ ಕಲೆಯಲ್ಲಿ ಪಾರಂಗತನಾದನು. ಮಹಾತ್ಮಾಗಾಂಧೀಜಿಯವರು ಮೊದಲನೇ ಸಾರೆ ಲಂಡನದಲ್ಲಿ ಭಾಷಣಮಾಡುವದಕ್ಕೆ ಎದ್ದುನಿಂತರು. ಆದರೆ ಅವರಿಗೆ ಭಾಷಣಮಾಡುವದು ಸಾಧ್ಯವಾಗಲಿಲ್ಲ. ಯಾಕಂದರೆ ಅವರು ವಿದ್ಯಾರ್ಥಿಗಳಿದ್ದಾಗ ಎಂದೂ ಚರ್ಚಾಕೂಟಗಳಲ್ಲಿ ಭಾಗವಹಿಸಿರಲಿಲ್ಲ. ಆಗ ಅವರಿಗೆ ಭಾಷಣ ಕಲೆಯ ಮಹತ್ವವು ಗೊತ್ತಾಯಿತು. ಮುಂದೆ ಗಾಂಧೀಜಿಯವರು ನಿರ್ಭಯದಿಂದ ಸಭೆಗಳಲ್ಲಿ ಭಾಷಣ ಮಾಡುವದನ್ನು ಕಲಿತುಕೊಂಡರು. ಅದಕ್ಕಾಗಿ ಭಾಷಣಮಾಡುವದನ್ನು ಮೊದಲಿನಿಂದಲೇ ರೂಢಿ ಮಾಡಿಕೊಳ್ಳಬೇಕು.

## ೧೨. ಖಡ್ಗಕ್ಕಿಂತ ಬರಹವೇ ಲೇಸು

ಚಕ್ರವರ್ತಿಯಾದ ಅಶೋಕನು ಕಳಿಂಗ ದೇಶದ ಮೇಲೆ ಯುದ್ಧಕ್ಕೆ ಹೋದನು. ಕಳಿಂಗ ದೇಶದವರು ಸ್ವಾತಂತ್ರ್ಯ ಪ್ರಿಯರು. ತಮ್ಮ ದೇಶವನ್ನು ರಕ್ಷಿಸುವದಕ್ಕಾಗಿ ಅವರು ಜೀವದ ಹಂಗು ತೊರೆದು ಕಾದಿದರು. ಆದರೆ ಅಶೋಕನ ಸೈನ್ಯವು ಬಹಳ ಪ್ರಬಲವಾಗಿದ್ದರಿಂದ ಅವರ ಆಟವು ಅವನ ಮುಂದೆ ನಡೆಯಲಿಲ್ಲ. ಯುದ್ಧ ಮಾಡುತ್ತ ಸಾವಿರಾರು ಸೈನಿಕರು ರಣಾಂಗಣದಲ್ಲಿ ಮಡಿದರು. ಲಕ್ಷಾಂತರ ಸೈನಿಕರು ಯುದ್ಧದಲ್ಲಿ ಮಡಿದ ಬಳಿಕ ಕಳಿಂಗ ದೇಶವು ಅಶೋಕನ ವಶವಾಯಿತು. ಅಶೋಕನು ಸ್ವಾತಂತ್ರ್ಯ ಪ್ರಿಯನಾದ್ದರಿಂದ ಅವನು ಕಳಿಂಗರ ದೇಶಪ್ರೇಮವನ್ನು ಕಂಡು ಆಶ್ಚರ್ಯಪಟ್ಟನು. ಕಳಿಂಗ ದೇಶವನ್ನು ಗೆದ್ದರೂ ಅವನಿಗೆ ಸಮಾಧಾನವಾಗಲಿಲ್ಲ. ಕಳಿಂಗದೇಶವನ್ನು ಗೆಲಿಯುವದಕ್ಕಾಗಿ ಲಕ್ಷಾಂತರ ಜನರನ್ನು ಕೊಲೆ ಮಾಡ

ಬೇಕಾಯಿತಲ್ಲ ಎಂದು ಅವನಿಗೆ ದುಃಖವಾಯಿತು. ಅಂದಿನಿಂದ ಅವನು ಯುದ್ಧ ಮಾಡುವದನ್ನೇ ಬಿಟ್ಟುಬಿಟ್ಟನು. ಮುಂದೆ ತನ್ನ ಜೀವಮಾನದಲ್ಲಿ ಅವನೆಂದೂ ಶಸ್ತ್ರವನ್ನು ಹಿಡಿಯಲಿಲ್ಲ. ಶಸ್ತ್ರಾಸ್ತ್ರಗಳಿಂದ ನಾವು ಬೇರೆಯವ ರನ್ನು ವಶಪಡಿಸಿಕೊಳ್ಳಲಾರೆವು. ಪ್ರೀತಿಯಿಂದ ಬೇರೆಯವರನ್ನು ವಶಪಡಿಸಿ ಕೊಳ್ಳಬಹುದು. ಅಶೋಕನು ತನ್ನ ಜೀವನವೆಲ್ಲವನ್ನೂ ಧರ್ಮ ಪ್ರಸಾರ ಮಾಡುವದರಲ್ಲಿಯೇ ಕಳೆದನು. ಹಿಂದುಸ್ಥಾನದಲ್ಲಿ ಮೂಲೆ ಮೂಲೆಗೂ ಅವನ ಶಿಲಾಲೇಖಗಳನ್ನು ಕಾಣಬಹುದು. ಅಶೋಕನ ಪ್ರಯತ್ನದಿಂದಲೇ ಬೌದ್ಧ ಧರ್ಮವು ಏಶಿಯಾಖಂಡದಲ್ಲಿ ಹಬ್ಬಿತು. ಇಂದಿಗೂ ಅಶೋಕನು ಅಜರಾಮರ ನಾಗಿರುವದಕ್ಕೆ ಅವನು ಮಾಡಿದ ಧರ್ಮ ಪ್ರಸಾರವೇ ಕಾರಣವು. ಅವನು ಯಾವ ಧರ್ಮವನ್ನೂ ದ್ವೇಷಮಾಡದೆ ಜನರು ಸತ್ಯಮಾರ್ಗದಂತೆ ನಡೆಯ ಬೇಕೆಂದು ಉಪದೇಶ ಮಾಡಿದನು. ಕತ್ತಿಯ ಬಲದಿಂದ ಉಪದೇಶ ಮಾಡಿ ದ್ದರೆ ಬೌದ್ಧ ಧರ್ಮವು ಪ್ರಸಾರವಾಗುತ್ತಿರಲಿಲ್ಲ. ಅವನ ಶಿಲಾಶಾಸನಗಳಲ್ಲಿ ಸಾಹಿತ್ಯದ ಅಂಶಗಳು ಕಂಡುಬರುತ್ತವೆ. ಇದರಿಂದ ಅವುಗಳಿಗೆ ಮತ್ತಿಷ್ಟು ಮಹತ್ವವು ಪ್ರಾಪ್ತವಾಗಿರುವದು.

೧೯೧೪ರಲ್ಲಿ ಯುರೋಪದಲ್ಲಿ ಮಹಾ ಯುದ್ಧವು ಪ್ರಾರಂಭವಾಯಿತು. ಈ ಯುದ್ಧವು ಇಡೀ ಜಗತ್ತನ್ನೇ ವ್ಯಾಪಿಸಿತು. ಜರ್ಮನಿಯನ್ನು ಪೂರ್ಣ ವಾಗಿ ನಾಶಮಾಡಬೇಕೆಂದು ಮಿತ್ರರಾಷ್ಟ್ರಗಳು ತಮ್ಮ ಎಲ್ಲ ಆಸುರೀ ಶಕ್ತಿ ಯನ್ನು ಉಪಯೋಗಿಸಿದರು. ಯುದ್ಧದಲ್ಲಿ ಮಿತ್ರ ರಾಷ್ಟ್ರಗಳು ಜಯಶಾಲಿ ಗಳಾದರು. ಆದರೆ ಜರ್ಮನಿಗಿಂತಲೂ ಮಿತ್ರರಾಷ್ಟ್ರಗಳಿಗೆ ಯುದ್ಧದಲ್ಲಿ ಹೆಚ್ಚು ಹಾನಿಯಾಯಿತು. ಅನೇಕ ನಿರಪರಾಧಿಗಳು ಕೊಲೆಮಾಡಲ್ಪಟ್ಟರು. ನೂರಾರು ಪಟ್ಟಣಗಳು ನಾಶವಾದವು. ಈ ಯುದ್ಧದಿಂದ ಯಾರಿಗೂ ಹಿತವಾಗಲಿಲ್ಲ. ಜರ್ಮನಿಯನ್ನು ಯುದ್ಧದಲ್ಲಿ ಸೋಲಿಸಿದರೂ ಅವರನ್ನು ವಶಪಡಿಸಿಕೊಂಡಂತಾ ಗಲಿಲ್ಲ. ಮಿತ್ರರಾಷ್ಟ್ರಗಳ ವಿರುದ್ಧವಾಗಿ ೧೯೩೯ರಲ್ಲಿ ಜರ್ಮನಿಯು ಮತ್ತೆಯುದ್ಧ ವನ್ನು ಸಾರಿತು. ಎರಡನೇ ಮಹಾಯುದ್ಧದಿಂದ ಆದ ಅನಾಹುತಗಳನ್ನು ನಾವೆಲ್ಲ ನೋಡಿದ್ದೇವೆ. ಯುದ್ಧದಿಂದ ನಾವು ಶಾಂತಿಯನ್ನುಸ್ಥಾಪಿಸಲಾರೆವು. ಇನ್ನೊಂದು ಯುದ್ಧವಾದರೆ ಜಗತ್ತುನಾಶವಾಗುವದು ಖಂಡಿತವು. ಜಗತ್ತನ್ನು ಒಳ್ಳೇ ದಾರಿಗೆ ಒಯ್ಯುತಕ್ಕಂಥ ಕೆಲಸವನ್ನು ಸಾಹಿತ್ಯವು ಮಾಡಬಲ್ಲದು.

ಸಾಹಿತಿಗಳು ಉದಾರಾಂತಃಕಾರಣಿಗಳು. ಅವರು ಇಡೀ ಜಗತ್ತನ್ನೇ ಪ್ರೀತಿಸುವರು. ಜಾತಿ ಜಾತಿಗಳಲ್ಲಿ ಭೇದವನ್ನು ಎಣಿಸುವದಿಲ್ಲ. ಜಗತ್ತನ್ನು ಒಂದು ಗೂಡಿಸುವ ಕೆಲಸವನ್ನು ಸಾಹಿತ್ಯವೇ ಮಾಡಬಲ್ಲದು. ಬಾಯಬಲ್, ಕುರಾನ, ಗೀತೆ, ರಾಮಾಯಣ, ಮಹಾಭಾರತ ಇವು ಜಗತ್ ಪೂಜ್ಯವಾದ ಗ್ರಂಥಗಳು. ಉಪನಿಷತ್ತುಗಳಿಂದ ತನಗೆ ಜೀವನದಲ್ಲಿ ಶಾಂತಿದೊರೆಯಿತೆಂದು ಸುಪ್ರಸಿದ್ಧ ತತ್ವಜ್ಞಾನಿಯಾದ ಸಾಪನ್‌ಹೋಅರ ಹೇಳಿದ್ದಾನೆ. ಚಿರಂತನ ವಾದ ಶಾಂತಿಯನ್ನು ಕೊಡುವಂಥಹ ಕೆಲಸವನ್ನು ಈ ಗ್ರಂಥಗಳು ಮಾಡ ಬಲ್ಲವು. ಶಸ್ತ್ರಗಳ ಪರಿಣಾಮವು ಕ್ಷಣ ಬಂಗುರವಾದುದು. ಸಾಹಿತ್ಯದ ಪರಿಣಾಮವು ಚಿರಂತನವಾದುದು.

ಸಮಾಜವನ್ನು ಸುಧಾರಿಸುವದಕ್ಕೆ ಬಸವಣ್ಣ, ಬುದ್ಧ, ಮಹಾತ್ಮಾ ಗಾಂಧೀಜಿಯಂಥವರು ಬೇಕಲ್ಲದೆ ಶಸ್ತ್ರಾಸ್ತ್ರಗಳಿಂದ ಸಾಧ್ಯವಿಲ್ಲ. ಕ್ರಿಸ್ತ ಧರ್ಮವು ಪ್ರಸಾರವಾಗುವದಕ್ಕೆ ಮುಖ್ಯ ಕಾರಣವು ಕ್ರಿಸ್ತನ ಆಚರಣೆಯು. 'ನಿಮ್ಮ ಎಡಗಡೆಯ ಗಲ್ಲದ ಮೇಲೆ ಯಾರಾದರೂ ಹೊಡೆದರೆ, ಬಲಗಡೆಯ ಗಲ್ಲವನ್ನು ಮುಂದೆ ಮಾಡಿ' ಎಂದು ಕ್ರಿಸ್ತನು ಹೇಳಿರುವನು. ತಾನು ಹೇಳಿ ದಂತೆ ಅವನು ಆಚರಿಸಿ ತೋರಿಸಿದನು. ಆದ್ದರಿಂದಲೇ ಆ ಧರ್ಮವು ಹಬ್ಬಿತು. ಗೌತಮ ಬುದ್ಧ, ಮಹಾತ್ಮಾ ಗಾಂಧಿ ಮುಂತಾದವರ ಜೀವನ ಪ್ರಭಾವವು ಸಾವಿರಾರು ವರ್ಷಗಳ ವರೆಗೆ ಜನಾಂಗದ ಮೇಲಾಗುವದು. ಸಾಮಾನ್ಯ ಜನರು ಮಹಾಪುರುಷರ ಅನುಕರಣ ಮಾಡಲು ಪ್ರಯತ್ನಿಸು ವರು. ಧರ್ಮ, ಸತ್ಯ, ನೀತಿಗಳನ್ನು ಪ್ರಸಾರಮಾಡಲು ಸಾಹಿತ್ಯವು ಸಹಾಯ ಮಾಡುವದು. ಉಪದೇಶ ಮಾಡುವದು ಸಾಹಿತ್ಯದ ಮುಖ್ಯ ಗುರಿಯಾಗಿರ ದಿದ್ದರೂ, ಅಪರೋಕ್ಷವಾಗಿ ಸಾಹಿತ್ಯವು ಉಪದೇಶ ಮಾಡಬಲ್ಲದು. ಮಮ್ಮ ಟನು ತನ್ನ ಕಾವ್ಯ ಪ್ರಕಾಶವೆಂಬ ಗ್ರಂಥದಲ್ಲಿ ಕಾವ್ಯವು ಹೆಂಡತಿಯಂತೆ ಪ್ರಿಯವಾದ ಮಾತುಗಳಿಂದ ನಮಗೆ ಉಪದೇಶ ಮಾಡುವದೆಂದು ಹೇಳಿರು ವನು. ಕಾವ್ಯ ಗ್ರಂಥಗಳಲ್ಲಿ ದುಷ್ಟರಾದವರು ನಾಶ ಹೊಂದುವದನ್ನು ಓದು ತ್ತೇವೆ. ಧರ್ಮದಿಂದ ನಡೆಯತಕ್ಕವರು ಸುಖಿಯಾಗುವದನ್ನೂ ಓದುವೆವು. ಇವುಗಳಿಂದ ನಮ್ಮ ಮನಸ್ಸಿನ ಮೇಲೆ ಒಳ್ಳೇ ಪರಿಣಾಮವಾಗುತ್ತದೆ. ಕತ್ತಿಯ ಬಲದಿಂದ ಬೇಗನೆ ಜಯವನ್ನು ಸಂಪಾದಿಸಬಹುದು. ಆದರೆ

ತನು ಒಹಳೆ ದಿವಸ ನಿಲ್ಲಲಾರದು. ಚೀನ ಮತ್ತು ಹಿಂದುಸ್ತಾನಗಳಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಸಾಂಸ್ಕೃತಿಕ ಸಂಬಂಧವಿತ್ತು. ಆದ್ದರಿಂದಲೇ ನಮ್ಮಿಬ್ಬರಲ್ಲಿ ಗಾಢವಾದ ಮಿತ್ರತ್ವವಿದೆ. ಕತ್ತಿಯ ಬಲದಿಂದ ಇಂಥ ಸ್ನೇಹ ವನ್ನು ಗಳಿಸುವದು ಅಸಾಧ್ಯವು. ಅದೇಕೆ? ಕತ್ತಿಯ ಬಲದಿಂದ ಸ್ನೇಹವನ್ನು ಗಳಿಸಲಾರೆವು; ಸ್ನೇಹವನ್ನು ಗಳಿಸಿದರೂ ಅದು ಕೃತ್ರಿಮವಾಗುವದು.

ಜಗತ್ತಿನ ಇತಿಹಾಸವನ್ನು ಅವಲೋಕಿಸಿದರೆ ಕತ್ತಿಗಿಂತಲೂ ಬರಹವೇ ಶ್ರೇಷ್ಠವಾಗಿದೆಯೆಂದು ನಮಗೆ ಕಂಡು ಬರುವದು. ಭಾರತೀಯ ತತ್ವಜ್ಞಾನಿ ಗಳು ಯಾವಾಗಲೂ ಶಸ್ತ್ರಾಸ್ತ್ರಗಳಿಗಿಂತಲೂ ಜ್ಞಾನಕ್ಕೆ ಹೆಚ್ಚು ಮಹತ್ವ ಕೊಟ್ಟಿರುವರು. ರಾಜರಿಗಿಂತಲೂ ಋಷಿಗಳಿಗೆ ಹೆಚ್ಚು ಮಾನಮರ್ಯಾದೆ ಗಳು ಸಲ್ಲುತ್ತಿರಲಿಲ್ಲವೇ?

## ೧೩. ಜೀವನದಲ್ಲಿ ನನ್ನ ಗುರಿ

ಎಲ್ಲ ಯೋಗಗಳಲ್ಲಿ ಜ್ಞಾನಯೋಗವೇ ಶ್ರೇಷ್ಠವಾದದ್ದು. ಆದ್ದ ರಿಂದಲೇ ಭಗವಾನ್ ಕೃಷ್ಣನು ಗೀತೆಯಲ್ಲಿ "ನಹಿ ಜ್ಞಾನೇನ ಸದೃಶಂ ಪವಿತ್ರ ಮಿಹ ವಿದ್ಯತೆ" ಎಂದು ಹೇಳಿರುವನು. ಜ್ಞಾನವಿಲ್ಲದೆ ಮುಕ್ತಿಯಿಲ್ಲ. ನಾನು ಎಲ್ಲಕ್ಕಿಂತಲೂ ಹೆಚ್ಚಾಗಿ ಜ್ಞಾನವನ್ನೇ ಪ್ರೀತಿಸುವೆನು. ಬಹುತರ ಬಹಳ ವೇಳೆಯನ್ನು ಓದುವದರಲ್ಲಿಯೇ ಕಳೆಯುವೆನು. ಓದುವದರಿಂದ ದೊರೆಯುವ ಆನಂದಕ್ಕೆ ಸರಿಯಾದ ಆನಂದವು ಜಗತ್ತಿನಲ್ಲಿ ಬೇರೊಂದಿಲ್ಲ. ಆದಕಾರಣವೇ ಸಾಹಿತ್ಯದಿಂದ ದೊರೆಯುವ ಆನಂದವನ್ನು ಬ್ರಹ್ಮಾನಂದಕ್ಕೆಹೋಲಿಸಿರುವರು. ಈ ಆನಂದವನ್ನು ನಾನೊಬ್ಬನೇ ಪಡೆದರೆ ತೀರಲಿಲ್ಲ. ಉಳಿದವರೂ ಈ ಆನಂದವನ್ನು ಪಡೆಯಬೇಕೆಂದು ನಾನು ಇಚ್ಛಿಸುವೆನು. ತನಗೆ ದೊರೆತ ಆನಂದವನ್ನು ಪರರಿಗೂ ಉಂಟುಮಾಡುವದು ಮನುಷ್ಯನ ಧರ್ಮವಲ್ಲವೇ? ನನಗೆ ದೊರೆತ ಆನಂದವನ್ನು ಬೇರೆಯವರಿಗೆ ಹೇಗೆ ಹಂಚಲಿ ಎಂದು ನಾನು ಯಾವಾಗಲೂ ಯೋಚಿಸುವೆನು. ನನಗೆ ಸಾಹಿತ್ಯಗ್ರಂಥಗಳನ್ನು ಓದುವದರಲ್ಲಿ ತುಂಬಾ ಪ್ರೀತಿ. ಅವುಗಳನ್ನು ಓದಿ ಆನಂದಪಡೆದು, ಬೇರೆಯವರಿಗೆ ಓದಿ ತೋರಿಸುವೆನು. ಅದರಿಂದ ಅವರಿಗೆ ಆನಂದವಾದರೆ ನನ್ನ ಶ್ರಮವು ಸಾರ್ಥಕ ವಾದಂತೆ. ಈ ರೀತಿಯಾಗಿಯೇ ನಾನು ದಿನಗಳನ್ನು ಕಳೆಯಬೇಕೆಂದು

ಇಚ್ಛಿಸುವೆನು. ಹೀಗೆ ನನ್ನ ಜೀವನ ನಡಿಸಿಕೊಂಡು ಹೋಗಲು ಶಿಕ್ಷಕನಾದರೆ ಮಾತ್ರ ಸಾಧ್ಯ. ಆದ್ದರಿಂದ ನಾನು ಶಿಕ್ಷಕ ವೃತ್ತಿಯನ್ನು ಕೈಕೊಂಡಿರುವೆನು. ಇದರಿಂದ ನಾನೂ ಆನಂದಪಡುವೆನು, ಉಳಿದವರಿಗೂ ಆನಂದ ದೊರೆಯು ವಂತೆ ಮಾಡುವೆನು.

ಹಲವರು ಇದನ್ನು ಕಂಡು ನಾನು ಮಹತ್ವಾಕಾಂಕ್ಷೆಯಿಲ್ಲದವನೆಂದು ದೂರಬಹುದು. ಆದರೆ ಶಿಕ್ಷಕನಾಗುವದಕ್ಕಿಂತಲೂ ಹೆಚ್ಚಿನ ಮಹತ್ವಾ ಕಾಂಕ್ಷೆಜಗತ್ತಿನಲ್ಲಿಯೇ ಇಲ್ಲವೆಂದು ನಾನು ಧೈರ್ಯವಾಗಿ ಹೇಳುವೆನು. ಈ ಹೊತ್ತು ಶಿಕ್ಷಕರಾದವರಿಗೆ ಸಮಾಜದಲ್ಲಿ ಯೋಗ್ಯ ಮರ್ಯಾದೆಯು ಇಲ್ಲದೆ ಇರಬಹುದು. ಅವನಿಗೆ ಹಣದ ದೃಷ್ಟಿಯಿಂದ ಯಾವ ಲಾಭವೂ ಇಲ್ಲ. ಆದರೆ ಶಿಕ್ಷಕನಾದವನ ಹೊಣೆಯು ಮಾತ್ರ ಅತ್ಯಂತ ಮಹತ್ವದ್ದಾಗಿದೆ. ನಾಳಿನ ಜನಾಂಗವನ್ನು ನಿರ್ಮಿಸುವವನೇ ಶಿಕ್ಷಕನು. ಅವನು ಸ್ವತಃ ಸತ್ಯವಂತನೂ, ಧರ್ಮದಿಂದ ನಡೆಯತಕ್ಕವನೂ, ಸದಾಚಾರಿಯೂ ಆಗಿರಬೇಕು. ಆದರ್ಶ ಶಿಕ್ಷಕನಾಗುವದು ಬಹು ಪ್ರಯಾಸದ ಸಂಗತಿಯು.

ಇಂದಿನ ಮಹಾಯುದ್ಧಗಳಿಗೆ ಶಿಕ್ಷಕನೇ ಕಾರಣನು. ವಿದ್ಯಾರ್ಥಿಗಳಲ್ಲಿ ವಿಶ್ವಬಾಂಧವ್ಯವು ನೆಲೆಸುವಂತೆ ಅವನು ಪ್ರಯತ್ನಿಸಿದ್ದರೆ ಜಗತ್ತಿನಲ್ಲಿ ಯುದ್ಧಗಳೇ ಆಗುತ್ತಿರಲಿಲ್ಲ. ಜಗತ್ತಿನಲ್ಲಿ ಶಾಂತಿಯು ನೆಲೆಸಬೇಕಾದರೆ ನಮಗೆ ಆದರ್ಶ ಶಿಕ್ಷಕರು ಬೇಕು. ಕ್ರಿಸ್ತ, ಗಾಂಧೀಜಿಯವರಂತಹ ಶಿಕ್ಷಕ ರಿಂದಲೇ ಜಗತ್ತಿನಲ್ಲಿ ಶಾಂತಿಯು ನೆಲೆಸಬಲ್ಲದು. ವಿದ್ಯಾರ್ಥಿಗಳ ಮನಸ್ಸು ಬೆಣ್ಣೆಯಂತೆ ಮೃದುವಾದದ್ದು. ಅದಕ್ಕೆ ನಾವು ಯಾವ ರೂಪ ಕೊಡುವೆವೋ ಅದೇ ರೂಪವನ್ನು ಅದು ಧರಿಸುವದು. ಎಲ್ಲ ಧರ್ಮಗಳು ಒಂದೇ; ಜಗತ್ತಿನಲ್ಲಿ ಒಬ್ಬನೇ ದೇವನಿರುವನು; ನಾವೆಲ್ಲರೂ ಒಬ್ಬನೇ ದೇವರ ಮಕ್ಕಳು; ಧರ್ಮ ದಿಂದಲೇ ಜಯವು ಎಂಬ ತತ್ವವನ್ನು ಬಾಲಕರ ಮನಸ್ಸಿನ ಮೇಲೆ ಬಿಂಬಿಸಿ ದರೆ ಜಗತ್ತು ಎಷ್ಟು ಒಳ್ಳೆಯದಾಗುವದು!

ವಿದ್ಯಾರ್ಥಿಗಳಲ್ಲಿ ಸತ್ಯಪ್ರೀತಿಯನ್ನು ಹರಡಬೇಕಾದರೆ ಮೊದಲು ಶಿಕ್ಷಕನು ಸತ್ಯವಂತನಾಗಿರಬೇಕು. ವಿದ್ಯಾರ್ಥಿಗಳಿಗೆ ಜ್ಞಾನಬೋಧೆ ಮಾಡ ಬೇಕಾದರೆ ಅವನು ಜ್ಞಾನಿಯಾಗಿರಬೇಕು. ಶಿಕ್ಷಕನು ತಾನು ಅಧರ್ಮದಿಂದ ನಡೆಯುತ್ತ, ವಿದ್ಯಾರ್ಥಿಗಳಿಗೆ ಧರ್ಮದಿಂದ ನಡೆಯಿರೆಂದು ಹೇಳಿದರೆ ಅದರಿಂದ

ಏನೂ ಪ್ರಯೋಜನವಾಗಲಾರದು. ಯಾಕಂದರೆ ವಿದ್ಯಾರ್ಥಿಗಳು ಯಾವಾಗಲೂ ಅನುಕರಣಪ್ರಿಯರು. ಇದರ ಮೇಲಿಂದ ಯೋಗ್ಯ ಶಿಕ್ಷಕನಾಗುವದು ಎಷ್ಟು ಕಠಿಣವಿರುತ್ತದೆ ಯೆಂದು ಗೊತ್ತಾಗುತ್ತದೆ.

ಕೇವಲ ಜ್ಞಾನವನ್ನುಗಳಿಸಿದರೆ ಪ್ರಯೋಜನವಿಲ್ಲ. ಮನುಷ್ಯನು ಶೀಲವಂತನಾಗಬೇಕು. ಶಾಲೆಯಲ್ಲಿವಿದ್ಯಾರ್ಥಿಗಳು ಶಿಸ್ತಿನಿಂದ ವರ್ತಿಸಬೇಕು. ಶಿಸ್ತುಇಲ್ಲದ ಜೀವನವು ವ್ಯರ್ಥವಾದದ್ದು. ಆದ್ದರಿಂದ ಅಭ್ಯಾಸಕ್ಕಿಂತಲೂ ಶಿಸ್ತು ಮತ್ತು ಶೀಲಕ್ಕೆ ನಾನು ಹೆಚ್ಚುಮಹತ್ವಕೊಡುವೆನು. ಕೇವಲ ಪರೀಕ್ಷೆಗಳನ್ನು ಪಾಸಾದರೆ ಜೀವನವು ಸಾರ್ಥಕವಾಗುವದಿಲ್ಲ. ಪರೀಕ್ಷೆಗಳನ್ನು ಪಾಸಾದ ಬಳಿಕ ನಿಜವಾದ ಪರೀಕ್ಷೆಯಾಗುತ್ತದೆ. ವಿಶ್ವವಿದ್ಯಾಲಯದ ಪರೀಕ್ಷೆಗಳಲ್ಲಿ ಚೆನ್ನಾಗಿಪಾಸಾದವರು ಜೀವನದಲ್ಲಿ ಯಶಸ್ಸುಹೊಂದದೆ ಇರಬಹುದು. ಶೀಲವಂತನಾದ ಮನುಷ್ಯನು ಮಾತ್ರ ಜೀವನದಲ್ಲಿ ಯಶಸ್ವಿಯಾಗುವನು. ವಿದ್ಯಾರ್ಥಿಗಳು ಸತ್ಯಪ್ರಿಯರೂ, ಒಳ್ಳೇ ಶೀಲವುಳ್ಳವರೂ ಆಗುವಂತೆ ನಮ್ಮ ಶಿಕ್ಷಣವು ಪ್ರಯತ್ನಿಸಬೇಕು. ಅದಕ್ಕೆ ತಕ್ಕ ಸನ್ನಿವೇಶವನ್ನು ಶಾಲೆಯಲ್ಲಿ ನಿರ್ಮಿಸಬೇಕು.

ಶಾಲೆಯೆಂದರೆ ವಿದ್ಯಾರ್ಥಿಗಳಿಗೆ ಬೇಸರ ಬರುವಂತಾಗಿದೆ. ಯಾಕಂದರೆ ಶಾಲೆಯಲ್ಲಿ ಕೇವಲ ಓದುವದಕ್ಕೆ ಮಾತ್ರ ಪ್ರಾಧಾನ್ಯ ಕೊಡಲಾಗಿದೆ. ವಿದ್ಯಾರ್ಥಿಗಳು ಬಾಯಿಪಾಠ ಮಾಡಿ ಪರೀಕ್ಷೆಯಲ್ಲಿ ಅದನ್ನು ಉಗುಳಿದರೆ ತೀರಿತೆಂದು ತಿಳಿದಿರುವರು. ಯಾಕಂದರೆ ನಮ್ಮ ಅಭ್ಯಾಸ ಕ್ರಮದಲ್ಲಿ ಕಲೆಗೆ ಸ್ಥಾನವೇ ಇಲ್ಲ. ವಿದ್ಯಾರ್ಥಿಗಳ ಅಭಿರುಚಿಗಳನ್ನು ನಾವು ಗಮನಿಸುವದೇ ಇಲ್ಲ. ಪರೀಕ್ಷೆ ಪಾಸಾಗುವದೇ ಅವರ ಗುರಿಯಾಗಿರುವದರಿಂದ ಅವರು ಜ್ಞಾನದ ಕಡೆಗೆ ಲಕ್ಷ ಕೊಡುವದಿಲ್ಲ. ಶಿಕ್ಷಕರಾದವರು ವಿದ್ಯಾರ್ಥಿಗಳಿಗೆ ಸಾಹಿತ್ಯ, ಸಂಗೀತಗಳಲ್ಲಿ ಅಭಿರುಚಿಯುಂಟಾಗುವಂತೆ ಕಲಿಸುವದಿಲ್ಲ. ಅವರು ಹಾಗೆ ಕಲಿಸಲು ಪ್ರಯತ್ನಿಸಿದರೆ ಅದಕ್ಕೆ ಪ್ರೋತ್ಸಾಹವೂ ಸಿಗುವದಿಲ್ಲ. ನಮ್ಮ ಶಿಕ್ಷಣವೆಲ್ಲವೂ ಕಲಾವಿಹೀನವಾಗಿದೆ. ಮಕ್ಕಳ ಚಿತ್ರಕಲೆ, ಸಾಹಿತ್ಯ ಪ್ರೀತಿ ಇವುಗಳನ್ನುಬೆಳೆಸುವದಕ್ಕಾಗಿ ನಾನು ಪ್ರಯತ್ನಿಸುವೆನು. ಅನ್ವಯಾರ್ಥ ಶಬ್ದಾರ್ಥ ತಿಳಿದುಕೊಳ್ಳುವದಕ್ಕಾಗಿ ನಾವು ಕಾವ್ಯ ಓದಬೇಕಾಗಿಲ್ಲ.

ವಾಚನಾಲಯವಿಲ್ಲದ ಶಾಲೆಯು ದೇವರಿಲ್ಲದ ದೇಗುಲವಿದ್ದಂತೆ. ಪಠ್ಯ ಪುಸ್ತಕಗಳಿಗಿಂತಲೂ ಬೇರೆ ಪುಸ್ತಕಗಳನ್ನು ಓದುವದಕ್ಕೆ ಹೆಚ್ಚು ಮಹತ್ವ

ಕೊಡಬೇಕು. ವಿದ್ಯಾರ್ಥಿಗಳಲ್ಲಿ ವಾಚನಾಭಿರುಚಿಯನ್ನು ಬೆಳೆಸಲು ಪ್ರಯತ್ನಿಸುವೆನು. ಜ್ಞಾನವನ್ನು ಗಳಿಸಬೇಕೆಂಬ ಲವಲವಿಕೆಯು ನಮ್ಮ ವಿದ್ಯಾರ್ಥಿಗಳಲ್ಲಿ ಉಂಟಾದರೆ ಶಿಕ್ಷಣದ ಗುರಿಯು ಸಾರ್ಥಕವಾದಂತೆಯೇ ಸೈ. ನನ್ನ ಹಲವಾರುಉದ್ದೇಶಗಳನ್ನುಕಂಡು ನೀವು ಚೇಷ್ಟೆಮಾಡಬಹುದು. ಆದರೆ ಇವುಗಳಲ್ಲಿ ಕೆಲವನ್ನಾದರೂ ಸಾಧಿಸಿದರೆ ನನ್ನ ಗುರಿಯು ಸಾರ್ಥಕವಾದಂತೆಯೇ.

## ೧೪. ಶಿಕ್ಷಣದಲ್ಲಿ ಮಾಧ್ಯಮವು ಯಾವದಾಗಿರಬೇಕು

ಇಂಗ್ಲಿಷರ ಆಳಿಕೆಯು ಹಿಂದುಸ್ತಾನದಲ್ಲಿ ಪ್ರಾರಂಭವಾದಂದಿನಿಂದ ಇಂಗ್ಲಿಷ ಭಾಷೆಗೆ ಪ್ರಮುಖ ಸ್ಥಾನ ದೊರೆಯಿತು. ಆ ಭಾಷೆಯು ಹಿಂದುಸ್ತಾನದಲ್ಲಿ ಯಾರ ಮಾತೃಭಾಷೆಯೂ ಅಲ್ಲ. ರಾಜಭಾಷೆಯಾದ್ದರಿಂದ ಅದನ್ನು ಸರಕಾರದವರು ಒತ್ತಾಯದಿಂದ ಜನರ ಮೇಲೆ ಹೇರಿದರು. ಮಾಧ್ಯಮಿಕ ಶಾಲೆಗಳಲ್ಲಿಯೂ ಕಾಲೇಜುಗಳಲ್ಲಿಯೂ ಇಂಗ್ಲಿಷೇ ಪ್ರಮುಖ ಭಾಷೆಯಾಗಿತ್ತು. ಮಾಧ್ಯಮವೂ ಕೂಡ ಇಂಗ್ಲಿಷ ಭಾಷೆಯೇ ಆಗಿತ್ತು. ಆದರೆ ಈಗ ಮಾಧ್ಯಮಿಕ ಶಾಲೆಗಳಲ್ಲಿಯ ಮಾಧ್ಯಮವು ಮಾತೃಭಾಷೆಯೇ ಆಗಿದೆ. ವಿಶ್ವವಿದ್ಯಾನಿಲಯಗಳಲ್ಲಿ ಯಾವ ಭಾಷೆಯು ಮಾಧ್ಯಮವಾಗಿರಬೇಕು ಎಂಬ ಪ್ರಶ್ನೆಯು ನಮ್ಮ ಮುಂದಿರುವದು.

ಮಾತೃಭಾಷೆಯ ಮುಖಾಂತರವೇ ನಾವು ಬೇಗನೆ ಯಾವದೊಂದು ವಿಷಯವನ್ನು ಕಲಿಯಬಲ್ಲೆವು. ಈ ಮಾತು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ. ಆದರೂ ಭಾರತದಲ್ಲಿ ಈ ಮಾತನ್ನು ಸ್ಪಷ್ಟಮಾಡಬೇಕಾಗಿದೆ. ವಿಶ್ವವಿದ್ಯಾನಿಲಯದಲ್ಲಿ ಮಾತೃಭಾಷೆಯ ಮುಖಾಂತರವಾಗಿ ಎಲ್ಲ ವಿಷಯಗಳನ್ನು ಕಲಿಸುವದು ಸಾಧ್ಯವೇ ಎಂದು ಹಲವು ವಿದ್ವಾಂಸರು ಪ್ರಶ್ನಿಸುವರು. ಅವರು ಇಂಗ್ಲಿಷ ಭಾಷೆಯೇ ಶಿಕ್ಷಣದ ಮಾಧ್ಯಮವಾಗಿರಬೇಕೆಂದು ಪ್ರತಿಪಾದಿಸುವರು. ಅವರು ಇದಕ್ಕಾಗಿ ಕೆಲವು ಕಾರಣಗಳನ್ನು ಮುಂದೆ ಮಾಡಿರುವರು. ಇಂದು ಇಂಗ್ಲಿಷ ಭಾಷೆಯು ಜಗತ್ತಿನ ಭಾಷೆಯಾಗಿದೆ. ಅದರಲ್ಲಿರುವಷ್ಟು ಸಾಹಿತ್ಯವು ಮತ್ತೆ ಬೇರೆ ಯಾವ ಭಾಷೆಯಲ್ಲಿಯೂ ಇರುವದಿಲ್ಲ. ಅದರಲ್ಲಿ ಅಪಾರವಾದ ಗ್ರಂಥ ಸಂಪತ್ತಿಯಿದೆ. ಹಿಂದೀ ಭಾಷೆಗಳಲ್ಲಿ ಗ್ರಂಥ ಸಂಪತ್ತಿಯಿಲ್ಲ. ಪದಾರ್ಥ ವಿಜ್ಞಾನಶಾಸ್ತ್ರ, ರಸಾಯನಶಾಸ್ತ್ರ

ಮುಂತಾದ ವಿಷಯಗಳನ್ನು ಹಿಂದುಸ್ತಾನದ ಭಾಷೆಗಳಲ್ಲಿ ಕಲಿಸುವದು ಸಾಧ್ಯವಿಲ್ಲ. ಯಾಕಂದರೆ ಈ ವಿಷಯಗಳನ್ನು ತಿಳಿಸಿಕೊಡತಕ್ಕ ಗ್ರಂಥಗಳಾಗಲಿ, ಶಬ್ದ ಭಾಂಡಾರವಾಗಲಿ ನಮ್ಮಲ್ಲಿಲ್ಲ. ಇದಲ್ಲದೆ ಹಿಂದುಸ್ತಾನದಲ್ಲಿ ಅನೇಕ ಭಾಷೆಗಳಿರುವವು. ಪ್ರತಿಯೊಂದು ಭಾಷೆಯವರು ವಿಶ್ವವಿದ್ಯಾಲಯದಲ್ಲಿ ತಮ್ಮ ಭಾಷೆಯನ್ನೇ ಮಾಧ್ಯಮವನ್ನಾಗಿ ಮಾಡಿದರೆ ಒಂದು ಪ್ರಾಂತದಿಂದಮತ್ತೊಂದು ಪ್ರಾಂತಕ್ಕೆ ಹೋಗುವ ವಿದ್ಯಾರ್ಥಿಯ ಗತಿಯೇನು? ಆದ್ದರಿಂದ ಆಂಗ್ಲಭಾಷೆಯೇ ನಮ್ಮ ವಿಶ್ವವಿದ್ಯಾಲಯದಲ್ಲಿ ಮಾಧ್ಯಮವಾಗಿರಬೇಕೆಂದು ಇವರ ವಾದವು.

ನಮ್ಮ ಭಾಷೆಗಳಲ್ಲಿ ಸಾಕಷ್ಟು ಗ್ರಂಥಗಳಿಲ್ಲ. ಮತ್ತು ಶಬ್ದ ಭಾಂಡಾರಗಳಿಲ್ಲ. ಈ ಮಾತನ್ನು ಎಲ್ಲರೂ ಒಪ್ಪುವರು. ಆದರೆ ಇದೊಂದೇ ಕಾರಣವನ್ನು ಮುಂದೆ ಮಾಡಿ ಇಂಗ್ಲಿಷ ಭಾಷೆಯೇ ಮಾಧ್ಯಮವಾಗಿರಬೇಕೆಂದು ಹೇಳುವದು ಸಮಂಜಸವಾಗಲಾರದು. ನಮ್ಮ ಭಾಷೆಯಲ್ಲಿ ಗ್ರಂಥಗಳಿರದಿದ್ದರೆ ನಾವು ಗ್ರಂಥಗಳನ್ನು ನಿರ್ಮಾಣ ಮಾಡಬೇಕು. ಸರಕಾರವು ವಿದ್ವಾಂಸರ ಸಹಾಯದಿಂದ ಇಂಗ್ಲಿಷ, ಜರ್ಮನ್ ಮುಂತಾದ ಭಾಷೆಗಳಲ್ಲಿಯ ವಿಜ್ಞಾನ ಗ್ರಂಥಗಳನ್ನು ನಮ್ಮ ಭಾಷೆಗೆ ಭಾಷಾಂತರಿಸಬಹುದು. ಆಂಗ್ಲ ಭಾಷೆಯು ಜಗತ್ತಿನ ಭಾಷೆಯಾದ ಮಾತ್ರಕ್ಕೆ ಅದು ವಿಶ್ವವಿದ್ಯಾಲಯದಲ್ಲಿ ಮಾಧ್ಯಮವೇಕಾಗಬೇಕು? ಜಪಾನ, ಜರ್ಮನಿ, ರಶಿಯಾ ದೇಶಗಳಲ್ಲಿ ಇಂಗ್ಲಿಷು ಶಿಕ್ಷಣದ ಮಾಧ್ಯಮವಿಲ್ಲ. ಅಂದಮೇಲೆ ನಾವು ನಮ್ಮ ಭಾಷೆಗಳನ್ನು ಬಿಟ್ಟುಕೊಟ್ಟು ಇಂಗ್ಲಿಷನ್ನು ಮಾಧ್ಯಮವಾಗಿಡುವದು ಸರಿಯಾಗಲಾರದು. ನಮ್ಮ ಮಾತೃಭಾಷೆಯು ಬ್ರಿಟಿಶರ ಕಾಲದಲ್ಲಿ ತುಳಿಯಲ್ಪಟ್ಟಿತ್ತು. ಅದಕ್ಕೆ ಯೋಗ್ಯವಾದ ಸ್ಥಾನವು ದೊರೆತಿರಲಿಲ್ಲ. ಇನ್ನು ಮೇಲಾದರೂ ಅದಕ್ಕೆ ಯೋಗ್ಯಸ್ಥಾನವು ದೊರೆಯಬಾರದೇ? ಮಗುವು ತನ್ನ ತಾಯಿಯ ಹಾಲಿನಿಂದ ಪುಷ್ಟಿಯನ್ನು ಪಡೆಯುವಂತೆ ಮಾನವನು ತನ್ನ ಮಾತೃಭಾಷೆಯ ಮುಖಾಂತರವೇ ಹೆಚ್ಚು ವಿಷಯಗಳನ್ನು ತಿಳಿದುಕೊಳ್ಳಬಲ್ಲನು. ಈ ಮಾತನ್ನು ಎಲ್ಲ ಶಿಕ್ಷಣ ಶಾಸ್ತ್ರಜ್ಞರೂ ಒಪ್ಪಿರುವರು. ಅಂದ ಬಳಿಕ ಮಾತೃಭಾಷೆಯೇ ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣದ ಮಾಧ್ಯಮವಾಗಬೇಕು ಎಂಬ ಬಗ್ಗೆ ಚರ್ಚೆ ಬೇಕಾಗಿಲ್ಲ.

ಒಬ್ಬ ವಿದ್ಯಾರ್ಥಿಯು ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತಕ್ಕೆ ಹೋಗುವಾಗ ಬೇರೆ ಬೇರೆ ವಿಶ್ವವಿದ್ಯಾಲಯಗಳ ಮಾಧ್ಯಮವು ಬೇರೆ ಬೇರೆ

ಯಾಗಿದ್ದರೆ ತೊಂದರೆಯಾಗುವದು. ಆದ್ದರಿಂದ ಎಲ್ಲ ವಿಶ್ವವಿದ್ಯಾಲಯ ಗಳಲ್ಲಿಯೂ ಒಂದೇ ಭಾಷೆಯು ಶಿಕ್ಷಣದ ಮಾಧ್ಯಮವಾಗಿರಬೇಕು. ಎಂದು ಕೆಲವರು ಪ್ರತಿಪಾದಿಸುವರು. ಇವರು ಎಲ್ಲ ವಿಶ್ವವಿದ್ಯಾಲಯಗಳಲ್ಲಿಯೂ ಹಿಂದಿಯೇ ಶಿಕ್ಷಣದ ಮಾಧ್ಯಮವಾಗಬೇಕೆಂದು ಹೇಳುವರು ಹಿಂದಿಯು ಉತ್ತರ ಹಿಂದುಸ್ತಾನದಲ್ಲಿ ಬಹು ಜನರ ಮಾತೃಭಾಷೆಯಾಗಿರುವದು. ಆದರೆ ದಕ್ಷಿಣ ಹಿಂದುಸ್ತಾನದಲ್ಲಿ ಅದು ಯಾರ ಮಾತೃಭಾಷೆಯೂ ಅಲ್ಲ. ಯಾರ ಮಾತೃಭಾಷೆಯೂ ಅಲ್ಲದ ಬೇರೊಂದು ಭಾಷೆಯನ್ನು ಶಿಕ್ಷಣದ ಮಾಧ್ಯಮ ವನ್ನಾಗಿ ಮಾಡುವದರಿಂದ ಏನು ಪ್ರಯೋಜನವು? ಮಾತೃಭಾಷೆಯಲ್ಲಿ ಕಲಿ ತರೆ ಮಾತ್ರ ಯಾವದೊಂದು ವಿಷಯವು ಚನ್ನಾಗಿ ತಿಳಿಯುವದು ಎಂಬ ತತ್ವವನ್ನು ಒಪ್ಪಿಕೊಂಡ ಬಳಿಕ ಎಲ್ಲ ಕಡೆಗೂ ಹಿಂದಿಯೇ ಶಿಕ್ಷಣದ ಮಾಧ್ಯ ಮವಾಗಬೇಕೆಂದು ಹೇಳುವದು ಅನ್ಯವಹಾರ್ಯವೂ, ಮೂಲತತ್ವಕ್ಕೆ ವಿರೋಧ ಭೂತವೂ ಆಗುವದು. ಹಿಂದೀ ಮತ್ತು ಇಂಗ್ಲಿಷ ಭಾಷೆಗಳನ್ನು ಕಡ್ಡಾಯದ ಭಾಷೆಗಳನ್ನಾಗಿ ಮಾಡಬಹುದು. ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತಕ್ಕೆ ಹೋಗುವವರಿಗೆ ಮಾತೃಭಾಷೆಯು ಶಿಕ್ಷಣದ ಮಾಧ್ಯಮವಾಗುವದರಿಂದ ತೊಂದರೆಯಾಗಬಹುದು. ಆದರೆ ಈ ಬಗೆಯಾಗಿ ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತಕ್ಕೆ ಹೋಗುವವರು ಎಷ್ಟು ಮಂದಿ? ಕೆಲವು ಜನರ ಸಲುವಾಗಿ ಎಲ್ಲ ಜನರೂ ಯಾಕೆ ಶ್ರಮಪಡಬೇಕು. ಪ್ರಜಾಪ್ರಭುತ್ವದ ಯುಗದಲ್ಲಿ ಬಹು ಜನರ ಕಲ್ಯಾಣವೇ ಸರಕಾರದ ಗುರಿ ಯಾಗಿರಬೇಕು. ಆದ ಕಾರಣ ಯಾವ ದೃಷ್ಟಿಯಿಂದ ವಿಚಾರ ಮಾಡಿದರೂ ಮಾತೃಭಾಷೆಯೇ ಶಿಕ್ಷಣದ ಮಾಧ್ಯಮವಾಗಬೇಕೆಂದು ಪ್ರತಿಪಾದಿಸುವೆವು.

## ೧೫. ನನ್ನ ಮೆಚ್ಚಿಗೆಯ ರಾಷ್ಟ್ರವೀರ

ಹಿಂಸೆಯಿಂದ ಯುದ್ಧಮಾಡಿ ಬೇರೆಯವರನ್ನು ಗೆಲ್ಲುವದು ಸುಲಭ. ಆದರೆ ಅಹಿಂಸೆಯಿಂದ ಎರಡನೆಯವರನ್ನು ಗೆಲ್ಲುವದು ಸುಲಭವಲ್ಲ. ಅದ ರಲ್ಲಿಯೂ ದೇಶದ ಸ್ವಾತಂತ್ರ್ಯವನ್ನು ಗಳಿಸುವದು ಕಷ್ಟಸಾಧ್ಯವು. ಜಗತ್ತಿನ ಇತಿಹಾಸದಲ್ಲಿ ಯಾವ ದೇಶವೂ ಯುದ್ಧಮಾಡದೆ ಸ್ವಾತಂತ್ರ್ಯಗಳಿಸಿಲ್ಲ. ಹಿಂಸಾಚಾರಮಾಡದೆ ೨೦ ನೇ ಶತಮಾನದಲ್ಲಿ ಮಹಾತ್ಮಾ ಗಾಂಧಿಯವರು

ಭಾರತಕ್ಕೆ ಸ್ವಾತಂತ್ರ್ಯ ದೊರಕಿಸಿಕೊಟ್ಟರು. ಅವರ ಸತ್ಯಾಗ್ರಹವು ಒಂದು ಹೊಸಪದ್ಧತಿಯ ಹೋರಾಟವು. ವೈರಿಗಳನ್ನೂ ಕೂಡ ಪ್ರೇಮದಿಂದ ಗೆಲ್ಲು ವದೇ ಅದರ ಮುಖ್ಯ ಉದ್ದೇಶವು. ಹಿಂಸಾಚಾರದಿಂದ ಗೆದ್ದ ಸ್ವಾತಂತ್ರ್ಯವು ಬಹುದಿವಸ ಬಾಳಲಾರದೆಂದು ಮಹಾತ್ಮಾಜಿಯವರು ಹೇಳುತ್ತಿದ್ದರು. ಆದ್ದರಿಂದ ಅವರ ಹೋರಾಟವು ಅಹಿಂಸಾಮಯವಾಗಿತ್ತು.

ಗಾಂಧೀಜಿಯವರು ಸತ್ಯ ಮತ್ತು ಅಹಿಂಸೆಗಳ ಪೂಜಾರಿಗಳಾಗಿದ್ದರು. ಯಾವ ಪ್ರಸಂಗದಲ್ಲಿಯೂ ಅವರು ಅಸತ್ಯಮಾರ್ಗವನ್ನು ಹಿಡಿಯಲು ಒಪ್ಪ ಲಿಲ್ಲ. ತಾವು ಮಾಡಬೇಕಾದ ಸತ್ಯಾಗ್ರಹವನ್ನು ಬಹಿರಂಗವಾಗಿ ಜನರಿಗೂ ಸರಕಾರಕ್ಕೂ ತಿಳಿಸುತ್ತಿದ್ದರು. ರಾಜಕಾರಣವೆಂದರೆ ಜಾರ ಸ್ತ್ರೀಯಂತೆ ಅಪವಿತ್ರವಾದದ್ದು ಎಂದು ಜನರು ತಿಳಿದುಕೊಂಡಿದ್ದರು. ಗಾಂಧೀಜಿ ಯವರು ರಾಜಕಾರಣದಲ್ಲಿ ಸತ್ಯವನ್ನು ಬೆರೆಸಿ ಅದನ್ನು ಪವಿತ್ರವನ್ನಾಗಿ ಮಾಡಿದರು.

ಜಗತ್ತಿಗೆ ನಿಮ್ಮ ಸಂದೇಶವೇನು ಎಂದು ಕೇಳಿದಾಗ ನನ್ನ ಜೀವನವೇ ಒಂದು ಸಂದೇಶವೆಂದು ನುಡಿದರು. ಅವರ ಜೀವನದಿಂದ ನಾವು ಅನೇಕ ಪಾಠಗಳನ್ನು ಕಲಿಯಬಹುದಾಗಿದೆ. ಅವರು ತಮ್ಮ ಆತ್ಮಚರಿತ್ರೆಗೆ 'ಸತ್ಯ ಶೋಧನೆ' ಎಂದು ಕರೆದಿರುವದು ಯಥಾರ್ಥವಾಗಿದೆ. ಯಾಕೆಂದರೆ ಗಾಂಧೀಜಿಯವರು ತಮ್ಮ ಇಡೀ ಆಯುಷ್ಯವನ್ನೆಲ್ಲ ಸತ್ಯಧರ್ಮವನ್ನು ಅನು ಸರಿಸುವದರಲ್ಲಿಯೇ ಕಳೆದರು. ಅವರು ಚಿಕ್ಕವರಿರುವಾಗ ಹರಿಶ್ಚಂದ್ರ ನಾಟಕವನ್ನು ನೋಡಿದರು. ಈ ನಾಟಕವು ಅವರಮೇಲೆ ಬಹಳ ಪ್ರಭಾವ ಬೀರಿತು. ಎಲ್ಲರೂ ಹರಿಶ್ಚಂದ್ರನಂತೆ ಯಾಕೆ ಸತ್ಯಸಂಧರಾಗಬಾರದು. ಎಂದು ಚಿಂತಿಸತೊಡಗಿದರು. ಹರಿಶ್ಚಂದ್ರನನ್ನೇ ತಮ್ಮ ಆದರ್ಶ ವ್ಯಕ್ತಿ ಯನ್ನಾಗಿ ಮಾಡಿಕೊಂಡರು. ಇಂಗ್ಲಂಡಕ್ಕೆ ಹೋಗುವಾಗ ಮದ್ಯ, ಮಾಂಸ ಮತ್ತು ಆಂಗ್ಲ ಸ್ತ್ರೀಯರನ್ನು ಮುಟ್ಟುವದಿಲ್ಲವೆಂದು ತಮ್ಮ ತಾಯಿಯ ಎದು ರಿನಲ್ಲಿ ಪ್ರತಿಜ್ಞೆ ಮಾಡಿದರು. ಮತ್ತು ಅದರಂತೆಯೇ ಅವರು ನಡೆದರು.

ಗಾಂಧೀಜಿಯವರ ಜೀವನವು ತೀರ ಸಾದಾ ಇತ್ತು. ಅವರು ಮೈ ಮೇಲೆ ಎಂದೂ ಎರಡಕ್ಕಿಂತ ಹೆಚ್ಚು ಬಟ್ಟೆಗಳನ್ನು ಹೊದ್ದುಕೊಳ್ಳಲಿಲ್ಲ.

ಒಮ್ಮೆ ಅವರು ದುಂಡುಮೇಜಿನ ಪರಿಷತ್ತಿಗಾಗಿ ಲಂಡನಕ್ಕೆ ಹೊರಟಿದ್ದರು. ಆಗ ಅವರ ಮಕ್ಕಳಾದ ದೇವದಾಸ ಗಾಂಧಿಯವರೂ ಅವರೊಡನಿದ್ದರು. ಇಂಗ್ಲಂಡದಲ್ಲಿ ಚಳಿ ಬಹಳವಾದ್ದರಿಂದ ಗಾಂಧೀಜಿಯುವರ ಸಲುವಾಗಿ ದೇವ ದಾಸ ಗಾಂಧಿಯವರು ಒಂದು ಉಣ್ಣೆಯು ಶಾಲನ್ನು ತೆಗೆದುಕೊಂಡರು. ಆ ಉಣ್ಣೆಯ ಶಾಲನ್ನು ನೋಡಿ ಗಾಂಧೀಜಿಯುವರು ಇದು ಯಾರ ಸಲುವಾಗಿ ಎಂದು ಪ್ರಶ್ನಿಸಿದರು. ದೇವದಾಸರು "ಇಂಗ್ಲಂಡದಲ್ಲಿ ಚಳಿ ಬಹಳವಾದ್ದ ರಿಂದ ನಿಮ್ಮ ಸಲುವಾಗಿ" ಎಂದು ಉತ್ತರ ಕೊಟ್ಟರು. ಗಾಂಧೀಜಿಯವರಿಗೆ ಇದನ್ನು ಕೇಳಿ ಕೋಪಬಂದಿತು. ಅವರು ದೇವದಾಸರನ್ನು ಕುರಿತು 'ನಿನಗೆ ಇನ್ನೂ ನನ್ನ ಸ್ವಭಾವ ಪರಿಚಯವಾಗಲಿಲ್ಲವೇ? ನಾನು ಭಾರತೀಯರ ಬಡ ರೈತರ ಪ್ರತಿನಿಧಿಯಾಗಿ ಇಂಗ್ಲಂಡಕ್ಕೆ ಹೊರಟಿರುವೆನು. ಬಡವರ ಪ್ರತಿ ನಿಧಿಯಾದವನು ಉಣ್ಣೆಯ ಶಾಲನ್ನು ಹೊದ್ದುಕೊಳ್ಳಬಹುದೇ?' ಎಂದು ಕೇಳಿದರು. ಆ ಹಡಗದಲ್ಲಿಯೇ ಆ ಉಣ್ಣೆಯ ಶಾಲನ್ನು ಮಾರಿಬಿಟ್ಟರು. ಇಂಥ ಉದಾಹರಣೆಗಳು ಗಾಂಧೀಜಿಯುವರ ಜೀವನದಲ್ಲಿ ಅನೇಕವಾಗಿರುವವು

ಗಾಂಧೀಜಿಯುವರು ಸೇಗಾಂವದಲ್ಲಿ ತಮ್ಮ ಆಶ್ರಮ ಸ್ಥಾಪಿಸಿದರು. ಸೇಗಾಂವ ಇದು ತೀರ ಚಿಕ್ಕಹಳ್ಳಿ. ಇಲ್ಲಿಯ ಹವೆಯಾದರೋ ಬಹಳ ಉಷ್ಣ. ಹೋಗಿಬರುವದಕ್ಕೆ ಯಾವ ತರದ ಸೌಕರ್ಯಗಳೂ ಇಲ್ಲ. ಈ ಸ್ಥಳವನ್ನು ಗಾಂಧೀಜಿಯುವರು ಆರಿಸುವದಕ್ಕೆ ಕಾರಣವೆಂದರೆ ಅತಿ ಹಿಂದುಳಿದ ಹಳ್ಳಿಯನ್ನು ಪ್ರಯತ್ನ ಮಾಡಿದರೆ ಸುಧಾರಿಸಲು ಬರುತ್ತದೆಂಬ ದನ್ನು ಜನರಿಗೆ ತೋರಿಸುವದಕ್ಕೆ. ಮೊದಲು ಮಾಡಿ ತೋರಿಸಿ ಆಮೇಲೆ ಅದರಂತೆ ನಡೆಯಲು ಎರಡನೆಯವರಿಗೆ ಹೇಳುತ್ತಿದ್ದರು. ಗಾಂಧೀಜಿ ಯುವರು ಸೇಗಾಂವವನ್ನು ಒಂದು ಮಾದರಿಯ ಹಳ್ಳಿಯನ್ನಾಗಿ ಮಾಡಿರು ವರು. ಪ್ರತಿಯೊಬ್ಬರೂ ಸ್ವಚ್ಛತೆಯನ್ನು ನಿರ್ಮಿಸುವದಕ್ಕಾಗಿ ದುಡಿಯು ಬೇಕಾಗುವದು. ಯಾಕೆಂದರೆ ಅಸ್ವಚ್ಛತೆಯೇ ಎಲ್ಲ ರೋಗಗಳ ತವರು ಮನೆಯಲ್ಲವೇ? ಯಾವದೊಂದು ಮೂಲೆಯಲ್ಲಿ ಹೊಲಸು ಬಿದ್ದಿದ್ದರೂ ಅದನ್ನು ಸ್ವಚ್ಛಮಾಡಲೇಬೇಕು. ಹಳ್ಳಿಗಳು ಸ್ವಯಂಪೂರ್ಣವಾಗಬೇಕೆಂದು ಅವರು ಇಚ್ಛಿಸುತ್ತಿದ್ದರು. ಅದಕ್ಕಾಗಿ ಅವರು ಗ್ರಾಮೋದ್ಯೋಗಗಳಿಗೆ ಬಹಳ ಮಹತ್ವ ಕೊಡುತ್ತಿದ್ದರು. ತಮಗೆ ಬೇಕಾಗುವ ಎಲ್ಲ ಸಾಮಾನು

ಗಳನ್ನು ಹಳ್ಳಿಯವರೇ ನಿರ್ಮಿಸಿಕೊಳ್ಳಬೇಕು. ಹಿಂದುಸ್ತಾನದಲ್ಲಿ ಹಳ್ಳಿಗಳೇ ಬಹಳವಿರುವವು. ಅದಕ್ಕಾಗಿ ಹಳ್ಳಿಯ ಉದ್ಧಾರವೇ ಹಿಂದುಸ್ತಾನದ ಉದ್ಧಾರವೆಂದು ಅವರು ಸಾರಿದರು. ಸ್ವತಃ ಹಳ್ಳಿಯಲ್ಲಿದ್ದುಕೊಂಡು ಹಳ್ಳಿಯನ್ನು ಹೇಗೆ ಸುಧಾರಿಸಬೇಕೆಂಬುದನ್ನು ತೋರಿಸಿಕೊಟ್ಟರು.

ಗಾಂಧೀಜಿಯವರು ಜನತೆಯ ಸೇವೆಯೇ ಜನಾರ್ದನ ಸೇವೆ ಎಂದು ನಂಬಿದವರು. ಸಮಾಜ ಸೇವಕನಾದವನು ಜನರಿಂದ ಏನೂ ಅಪೇಕ್ಷೆ ಮಾಡದೆ ಕೆಲಸ ಮಾಡಬೇಕು. ಅವರು ದಕ್ಷಿಣ ಆಫ್ರಿಕೆಯಲ್ಲಿರುವಾಗ ಅಲ್ಲಿಯ ಜನರು ಅವರ ಸೇವೆಯನ್ನು ನೆನೆದು ಗಾಂಧೀಜಿಯವರಿಗೆ ಅನೇಕ ವಸ್ತ್ರ ಒಡವೆಗಳನ್ನು ಕೊಟ್ಟರು. ಗಾಂಧೀಜಿಯವರು ಅವುಗಳನ್ನು ಸ್ವೀಕರಿಸದೆ ಸಮಾಜದ ಕಲ್ಯಾಣಕ್ಕಾಗಿ ಅವುಗಳನ್ನು ಉಪಯೋಗಿಸಬೇಕೆಂದು ಸಾರ್ವಜನಿಕ ಸಂಸ್ಥೆಗೆ ಅವುಗಳನ್ನು ಕೊಟ್ಟುಬಿಟ್ಟರು.

ಗಾಂಧೀಜಿಯವರು ಅಜಾತ ಶತ್ರುಗಳಾಗಿದ್ದರು. ಬ್ರಿಟಿಶರ ಸಂಗಡ ಸ್ವಾತಂತ್ರ್ಯದ ಸಲುವಾಗಿ ಹೋರಾಡಿದರೂ ಬ್ರಿಟಿಶರನ್ನು ಅವರು ಎಂದೂ ದ್ವೇಷಿಸಲಿಲ್ಲ. ತಮ್ಮ ವೈರಿಗಳನ್ನು ಕೂಡ ಅವರು ಪ್ರೀತಿಸುತ್ತಿದ್ದರು. ಅವರು ಪ್ರಾರ್ಥನೆ ಮಾಡುತ್ತಿರುವಾಗ ತಲೆತಿರುಕನೊಬ್ಬನು ಅವರ ಮೇಲೆ ಬಾಂಬು ಒಗೆದನು. ಅದು ಸುದೈವದಿಂದ ಬಾಪೂಜಿಯವರಿಗೆ ಕೂಡಲಿಲ್ಲ. ಅವನನ್ನು ಗಾಂಧೀಜಿಯವರು ಕ್ಷಮಿಸಿ ಬಿಟ್ಟು ಬಿಟ್ಟರು. ಸರಕಾರವುಅವನ ಮೇಲೆ ಯಾವದೇ ರೀತಿಯಿಂದ ಕ್ರಮ ಕೈಕೊಳ್ಳಬಾರದೆಂದು ತಿಳಿಸಿದರು. ದಕ್ಷಿಣ ಆಫ್ರಿಕೆಯಲ್ಲಿರುವಾಗ ಒಬ್ಬ ಆಂಗ್ಲ ಮನುಷ್ಯನು ಇವರನ್ನು ಕೊಲ್ಲಬೇಕೆಂದು ಮಾಡಿದ್ದನು. ಗಾಂಧೀಜಿಯವರು ಅವನ ಮುಂದೆ ಹೋಗಿ ನಿಂತುಕೊಂಡು 'ನನ್ನ ಜೀವವು ಬೇಕಾಗಿದ್ದರೆ ತೆಗೆದುಕೋ' ಎಂದು ಹೇಳಿದರು. ಅವನು ಗಾಂಧೀಜಿಯವರ ಕ್ಷಮೆ ಕೇಳಿದನು. ಇಂಥ ಅಸಾಧಾರಣ ಪುರುಷನು ನಮಗೆ ಇತಿಹಾಸದಲ್ಲಿ ದೊರೆಯುವದಿಲ್ಲ.

ಗಾಂಧೀಜಿಯವರಿಗೆ ದೇವರಲ್ಲಿ ನಂಬಿಗೆಯು ಅಚಲವಾಗಿತ್ತು. ಮನಃಪೂರ್ವಕವಾಗಿ ಅವರು ದೇವರನ್ನುನಂಬಿದ್ದರು.ಗಾಂಧೀಜಿಯವರು ಪ್ರಾರ್ಥನೆ ಮಾಡುವಾಗ ಅಲ್ಲಿಗೆ ಬರುವ ಜನರನ್ನು ಶೋಧಿಸುತ್ತೇವೆಂದು ಸರಕಾರದವರು

ಗಾಂಧೀಜಿಯವರನ್ನು ಕೇಳಿದರೆ ಅದಕ್ಕೆ ಒಪ್ಪಲಿಲ್ಲ. ನನ್ನನ್ನು ಕಾಯುವವನು ದೇವರಿದ್ದಾನೆ. ಅವನ ಇಚ್ಛೆಯಂತೆ ಎಲ್ಲವೂ ನಡೆಯುವವು ಎಂದು ಉತ್ತರ ಕೊಟ್ಟರು. ಧೀರರಂತೆ ಸಾವನ್ನು ಅಪ್ಪಿಕೊಂಡರು. ಶರಣರ ಬಾಳು ಮರಣ ದಲ್ಲಿ ಎಂಬ ಮಾತು ಗಾಂಧೀಜಿಯವರಿಗೆ ಪೂರ್ಣವಾಗಿ ಅನ್ವಯಿಸುತ್ತದೆ.

ಎಷ್ಟು ಬರೆದರೂ ನಾವು ಗಾಂಧೀಜಿಯವರ ಪೂರ್ಣ ಕಲ್ಪನೆಯನ್ನು ಈ ಸಣ್ಣ ಲೇಖದಲ್ಲಿ ಮಾಡಿಕೊಡಲಾರೆವು. ಉಪನಿಷತ್ತುಗಳು ದೇವರ ಸ್ವರೂ ಪವನ್ನು ಕಂಡು ಹಿಡಿಯಲು ಪ್ರಯತ್ನಿಸಿ ಕಡೆಗೆ ಸಾಧ್ಯವಾಗದೆ ನೇತಿ ನೇತಿ ಎಂದಂತೆ ಎಷ್ಟು ಬರೆದರೂ ಗಾಂಧಿಜೀಯವರ ಪೂರ್ಣ ಸ್ವರೂಪವನ್ನು ವರ್ಣಿಸುವದು ಸಾಧ್ಯವಿಲ್ಲ. ವರ್ಣಿಸಲಸಾಧ್ಯವಾದ ಅನೇಕ ಸದ್ಗುಣಗಳಿಂದ ಕೂಡಿದ ನಮ್ಮ ಭಾರತ ದೇಶದ ತಂದೆಯಾದ ಬಾಪೂಜಿಯವರೇ ನನ್ನ ಮೆಚ್ಚಿನ ರಾಷ್ಟ್ರ ವೀರರು. ಇಂಥ ಮಹಾಪುರುಷರು ಯಾರ ಮೆಚ್ಚಿಗೆ ಯನ್ನು ಪಡೆಯಲಿಕ್ಕಿಲ್ಲ?

## ೧೬. ನಮ್ಮ ಹಬ್ಬಗಳು

ಬೇರೆ ದೇಶಗಳಲ್ಲಿ ನಮ್ಮಷ್ಟು ಹಬ್ಬಗಳಿವೆಯೊ ಇಲ್ಲವೊ ನಾನರಿಯೆ. ಹಿಂದಸ್ತಾನದಲ್ಲಿಯಂತೂ ಹಬ್ಬಗಳಿಗೆ ಮಿತಿಯಿಲ್ಲ. ಯಾವ ಹಬ್ಬವಿಲ್ಲ ವೆಂದರೂ ತಿಂಗಳಲ್ಲಿ ಅಮಾವಾಸ್ಯೆ, ಹುಣ್ಣಿವೆಗಳಾದರೂ ಇದ್ದೇ ಇರುತ್ತವೆ. ಮೊದಲಿನವರು ಯಾವ ಅರ್ಥನನ್ನಿಟ್ಟುಕೊಂಡು ಈ ಹಬ್ಬಗಳನ್ನು ಸುರುವು ಮಾಡಿದರೆಂಬುದೂ ನಮಗೆ ತಿಳಿಯುವಂತಿಲ್ಲ.

ಶ್ರಾವಣಮಾಸದಲ್ಲಿ ಬರುವ ಹಬ್ಬಗಳಿಗೆ ಲೆಕ್ಕವಿಲ್ಲ. ನಾಗರಪಂಚಮಿಯ ಹಬ್ಬವು ಸ್ತ್ರೀಯರಿಗೆ ಬಹುದೊಡ್ಡ ಹಬ್ಬವು. ಮೊದಲನೆ ಸಾರೆಯಾದರೂ ಹೆಣ್ಣುಮಕ್ಕಳು ತವರು ಮನೆಗೆ ಈ ಹಬ್ಬಕ್ಕೆ ಬರುವರು. ನಾಗರಪಂಚಮಿಯು ಬರುವದಕ್ಕಿಂತ ೭-೮ ದಿವಸಗಳ ಪೂರ್ವದಲ್ಲಿಯೇ ಮನೆಯಲ್ಲಿ ಸಿಹಿಯಾದ ತಿಂಡಿಗಳನ್ನು ಮಾಡಲು ಪ್ರಾರಂಭಿಸುವರು. ಈ ತಿಂಡಿಯನ್ನು ಸುಮಾರು ೧೫ ದಿವಸಗಳ ವರೆಗಾದರೂ ಉಪಯೋಗಿಸುವರು. ನಾಗಪ್ಪನಿಗೆ ಉಂಡಿ ಹಾಲುಗಳನ್ನು ಏರಿಸುವರು. ಮಣ್ಣಿನ ನಾಗಪ್ಪನನ್ನು ಮಾಡಿ ಪೂಜಿಸುವರು. ಆಸಾಮುದಲ್ಲಿ ಜೀವಂತ ನಾಗಪ್ಪನನ್ನು ಪೂಜಿಸುವರು. ಶ್ರಾವಣಮಾಸದಲ್ಲಿ

ಶುಕ್ರವಾರ ಮಂಗಳವಾರಗಳೂ ಪವಿತ್ರವಾದವುಗಳು. ಶುಕ್ರವಾರವನ್ನು ಸಂಪತ್ತು ಶುಕ್ರವಾರವೆಂದು ಕರೆಯುತ್ತೇವೆ.

ಗಣೇಶಚವತಿಯು ಇಂದು ಸಾಮಾಜಿಕ ಹಬ್ಬವಾಗಿದೆ. ಲೋಕಮಾನ್ಯ ಟಿಳಕರು ಇದನ್ನು ರಾಷ್ಟ್ರೀಯ ಹಬ್ಬವನ್ನಾಗಿ ಮಾಡಿದರು. ಗಣೇಶನ ಮುಂದೆ ಸಂಗೀತ, ನೃತ್ಯ ಮುಂತಾದ ಕಾರ್ಯಕ್ರಮಗಳು ನಡೆಯುವವು. ನಮ್ಮಲ್ಲಿಯ ಕಲಾಪ್ರೀತಿಯನ್ನು ಬೆಳೆಸಲು ಈ ಹಬ್ಬವು ಬಹಳ ಸಹಾಯ ಮಾಡುವದು.

ಗಣೇಶಚವತಿಯ ತರುವಾಯ ಬರುವ ದೊಡ್ಡಹಬ್ಬವೆಂದರೆ ನವರಾತ್ರಿ. ಇದು ನಮ್ಮ ನಾಡಿನ ಹಬ್ಬವಾಗಿದೆ. ಪ್ರತಿಯೊಂದು ಊರಲ್ಲಿಯೂ ಅನೇಕ ಉಪನ್ಯಾಸಗಳಿಂದಲೂ, ಸಂಗೀತ ಕಾರ್ಯಕ್ರಮಗಳಿಂದಲೂ ಈ ಹಬ್ಬವು ಆಚರಿಸಲ್ಪಡುವದು. ಜನರ ಜ್ಞಾನವನ್ನು ಬೆಳೆಸುವದಕ್ಕೆ ಇದರಿಂದ ಬಹಳ ಸಹಾಯವಾಗುತ್ತದೆ. ಈ ಹಬ್ಬವು ನಡೆದಾಗ ಮನೆಯಲ್ಲಿಯೂ ರಸದೂಟ; ಹೊರಗೂ ರಸದೂಟ. ವಿಜಯನಗರದ ಕಾಲದಲ್ಲಿ ಈ ಹಬ್ಬವನ್ನು ಬಹಳ ವೈಭವದಿಂದ ಆಚರಿಸುತ್ತಿದ್ದರು. ನಮ್ಮಲ್ಲಿಯ ಎಲ್ಲ ಭೇದಗಳನ್ನು ಮರೆಯಲು ಇಂಥ ಹಬ್ಬಗಳು ಸಹಾಯವಾಗಬಲ್ಲವು. ರಾಷ್ಟ್ರದ ಐಕ್ಯವನ್ನು ಕಾಪಾಡಲು ಇಂಥ ಹಬ್ಬಗಳು ಬೇಕು. ನಮ್ಮ ಧಾರ್ಮಿಕ ಹಬ್ಬಗಳೆಲ್ಲವೂ ಇನ್ನು ಸಾಮಾಜಿಕ ಹಬ್ಬಗಳಾಗಬೇಕು.

ದೀಪಾವಳಿಯು ಹಿಂದೂ ಜನರ ದೊಡ್ಡ ಹಬ್ಬವು. ಉತ್ತರ ಹಿಂದುಸ್ತಾನದಲ್ಲಿ ಈ ಹಬ್ಬವನ್ನು ಬಹಳ ವಿಜೃಂಭಣೆಯಿಂದ ಆಚರಿಸುವರು. ಶಾಲೆ-ಕಾಲೇಜುಗಳಿಗೆ ಸೂಟಿಯಿರುವದು. ರಾತ್ರಿ ನಾಲ್ಕು ಗಂಟೆಗೆ ಎದ್ದು ಸುಗಂಧ ದ್ರವ್ಯಗಳಿಂದ ಸ್ನಾನ ಮಾಡುವದು, ಸ್ನಾನ ಮಾಡಿದ ಕೂಡಲೆ ಅನೇಕ ಪ್ರಕಾರದ ಸಿಹಿಯಾದ ತಿಂಡಿಗಳನ್ನು ಸೇವಿಸುವದು. ಈ ಕಾರ್ಯಕ್ರಮವು ಹದಿನೈದು ದಿವಸಗಳವರೆಗೆ ಹೀಗೆಯೇ ಸಾಗುವದು. ದೀಪಾವಳಿಯು ಹಿಂದೂ ಜನರಿಗೆ ಬಹಳ ವೈಭವದ ಹಬ್ಬವು. ಬೆಳಗು ಮುಂಜಾನೆ ಸಾಲು ಸಾಲಾಗಿ ಹಣತೆಗಳನ್ನಿಟ್ಟು ದೀಪವನ್ನು ಹಚ್ಚುವರು. ಇದೇ ಸಮಯದಲ್ಲಿ ಅಂಗಡಿಕಾರರು ಲಕ್ಷ್ಮೀ ಪೂಜೆ ಮಾಡುವರು. ನೋಡಿದಲ್ಲೆಲ್ಲ ಬೆಳಕೇಬೆಳಕು. ಊರು ತುಂಬ ವಿದ್ಯುತ್ತಿನ ದೀಪಗಳೇ ಕಂಡುಬರುವವು.

ದೀಪಾವಳಿಯ ತರುವಾಯ ಹೋಳಿಹುಣ್ಣಿವೆ ಬರುವದು. ಹೋಳೀ ಹುಣ್ಣಿವೆಯದಿವಸ ಕಾಮಣ್ಣನನ್ನು ಮಾಡಿ ಸುಡುವೆವು! ಕಾಮಣ್ಣನನ್ನು ಸುಡುವದಕ್ಕಾಗಿ ಬೇರೆಯವರ ಕಟ್ಟಿಗೆ ಕುಳ್ಳುಗಳನ್ನು ಕದಿಯುವರು. ನಾವು ಕಟ್ಟಿಗೆಯ ಕಾಮಣ್ಣನನ್ನು ಸುಡುವೆವೇ ಹೊರತು ನಮ್ಮ ಮನಸ್ಸಿನಲ್ಲಿದ್ದ ಕಾಮವನ್ನು ಕಡಿಮೆ ಮಾಡುವದಕ್ಕೆ ಎಳ್ಳಷ್ಟೂ ಪ್ರಯತ್ನಿಸುವದಿಲ್ಲ! ಈ ಹಬ್ಬಗಳ ಸ್ವರೂಪವೇ ಇಂದು ಬದಲಾಗಿದೆ.

ಯುಗಾದಿಯು ವರ್ಷದ ಆರಂಭದ ದಿವಸವು. ಯಾವ ಶುಭ ಕೆಲಸವನ್ನಾದರೂ ಆ ಹೊತ್ತು ಆರಂಭಿಸುತ್ತೇವೆ. ಬೇವು ಕಹಿಯಾಗಿದ್ದರೂ ಅದರಲ್ಲಿ ಬಹಳ ಒಳ್ಳೇ ಗುಣಗಳಿರುವವು. ದಿನಾಲು ಅದನ್ನು ಸೇವಿಸುವದು ಸಾಧ್ಯವಿಲ್ಲ. ಅದಕ್ಕಾಗಿ ವರ್ಷಕ್ಕೊಮ್ಮೆಯಾದರೂ ಅದನ್ನು ಸೇವಿಸುವೆವು. ಬೇವನ್ನು ನೀರಿನಲ್ಲಿ ಹಾಕಿ ಸ್ನಾನಮಾಡುವೆವು. ದೇವರ ಹೆಸರಿನಿಂದ ಬೇರೆ ಬೇರೆ ಹಬ್ಬಗಳಲ್ಲಿ ಬೇರೆ ಬೇರೆ ಪ್ರಕಾರದ ಮೃಷ್ಟಾನ್ನಗಳನ್ನು ಮಾಡುವೆವು. ಅವೆಲ್ಲವುಗಳನ್ನೂ ಮಾಡಲೇಬೇಕು. ಇಲ್ಲದಿದ್ದರೆ ದೇವರು ಕೋಪಗೊಳ್ಳುವನು!!

ಹಬ್ಬಗಳ ಸಂಖ್ಯೆಯು ಬಹಳವಾಗಿರುವದರಿಂದ ಅವುಗಳ ಮಹತ್ವವು ಕಡಿಮೆಯಾಗಿದೆ. ಹಬ್ಬಗಳ ಸಂಖ್ಯೆಯನ್ನು ಕಡಿಮೆಮಾಡಿ, ನಮ್ಮ ಉನ್ನತಿಗಾಗಿ ಅವುಗಳಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಳ್ಳುವದು ಅವಶ್ಯವಾದದ್ದು. ಕೇವಲ ಸಿಹಿತಿಂಡಿಗಳನ್ನು ದಿನಕ್ಕಿಂತಲೂ ಹೆಚ್ಚಿಗೆ ತಿಂದು ನಿದ್ದೆಹೋದರೆ ಹಬ್ಬಗಳನ್ನು ಆಚರಿಸಿದಂತಾಗಲಿಲ್ಲ. ಇಂಥ ಶುಭದಿವಸಗಳಲ್ಲಿಯಾದರೂ ದೇಶದ ಕಲ್ಯಾಣವಾಗತಕ್ಕ ಕಾರ್ಯಗಳನ್ನು ಸಾರ್ವಜನಿಕವಾಗಿ ಮಾಡಬೇಕು.

## ೧೭. ಕಾಯಿದೆಯಿಂದ ಜನರನ್ನು ಸುಧಾರಿಸಬಹುದೇ?

ಸರಕಾರವು ಕಳವು ಮಾಡಿದವರನ್ನು ಶಿಕ್ಷಿಸುವದು. ಇದರಿಂದ ತುಡುಗುಮಾಡುವವರ ಸಂಖ್ಯೆಯು ಏಷ್ಟೋ ಕಡಿಮೆಯಾಗಿದೆ. ಸಮಾಜದಲ್ಲಿ ಕಳವು ಮಾಡುವವನನ್ನು ತಿರಸ್ಕಾರ ದೃಷ್ಟಿಯಿಂದ ಕಾಣುವರು. ಕೇವಲ ಕಾಯಿದೆಯಿಂದ ಕಳ್ಳತನವನ್ನು ನಿಲ್ಲಿಸುವದು ಸಾಧ್ಯವಿಲ್ಲ. ಕಳ್ಳತನ ಮಾಡುವದು ಪಾಪವೆಂದು ಜನರು ತಿಳಿದಿರುವದರಿಂದ ಕಳ್ಳರಿಗೆ ಸಮಾಜದಲ್ಲಿ ಸ್ಥಾನ

ವಿಲ್ಲ. ಕೇವಲ ಕಾಯಿದೆಯಿಂದ ನಾವು ಜನರನ್ನು ಸುಧಾರಿಸಲಾರೆವು. ಜನರ ಸಮ್ಮತಿಯಿಂದಲೇ ಕಾಯ್ದೆಯು ಮಹತ್ವವನ್ನು ಪಡೆಯುವದು.

ಬ್ರಿಟಿಶರ ಕಾಲದಲ್ಲಿ ನಮಗೆ ಭಾಷಣ ಸ್ವಾತಂತ್ರ್ಯವಿರಲಿಲ್ಲ. ಗಾಂಧೀಜಿಯವರು ಈ ಕಾಯ್ದೆಯ ವಿರುದ್ಧವಾಗಿ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಗಾಂಧೀಜಿಯವರು ಸತ್ಯಾಗ್ರಹವನ್ನುಪ್ರಾರಂಭಿಸಿದೊಡನೆ ಇಡೀ ದೇಶವೇ ಅವರನ್ನುಅನುಸರಿಸಿತು. ಬ್ರಿಟಿಶ ಸರಕಾರವು ಮಾಡುವ ಯಾವ ಕಾಯಿದೆಗಳಿಗೂ ಬೆಲೆಯಿಲ್ಲದಾಯಿತು. ನಮಗೂ ಸ್ವತಂತ್ರರಾಗುವ ಅಧಿಕಾರವುಂಟು; ಆದ್ದರಿಂದ ಬ್ರಿಟಿಶರು ಅನ್ಯಾಯದಿಂದ ನಮ್ಮ ಮೇಲೆ ಮಾಡಿರುವ ಕಾಯಿದೆಗಳನ್ನು ನಾವು ಪಾಲಿಸುವದಿಲ್ಲ ಎಂದು ಗಾಂಧೀಜಿಯವರು ನುಡಿದರು. ಎಲ್ಲರೂಕಾಯಿದೇಭಂಗಮಾಡತೊಡಗಿದರು. ಕಾಯಿದೇಭಂಗಮಾಡಿದವರನ್ನು ಸರಕಾರವು ಉಗ್ರವಾಗಿ ಶಿಕ್ಷಿಸಿತು. ಆದರೆ ರಾಜ್ಯದಲ್ಲಿ ಶಾಂತತೆಯು ಉಳಿಯಲಿಲ್ಲ. ಸರಕಾರದ ವಿರುದ್ಧವಾಗಿ ಮತ್ತಿಷ್ಟು ಅಸಂತೋಷವು ಉತ್ಪನ್ನವಾಯಿತು. ಪ್ರಜೆಗಳ ಇಚ್ಛೆಯಂತೆ ಸರಕಾರವು ನಡೆಯಬೇಕು. ಸರಕಾರದ ವಿರುದ್ಧವಾಗಿ ಪ್ರಜೆಗಳು ನಡೆಯತೊಡಗಿದರೆ ಆ ಸರಕಾರವು ಬಹು ದಿವಸ ಬಾಳಲಾರದು. ಸರಕಾರವನ್ನು ನಿರ್ಮಿಸುವವರೇ ಪ್ರಜೆಗಳು. ಪ್ರಜೆಗಳ ಹಿತವೇ ತನ್ನ ಹಿತವೆಂದು ಸರಕಾರವು ತಿಳಿಯಬೇಕು. ಪ್ರಜೆಗಳು ಸರಕಾರವು ಮಾಡಿದ ಕಾಯಿದೆಯಂತೆ ನಡೆದರೆ ಮಾತ್ರ ಈ ಕಾಯಿದೆಗೆ ಬೆಲೆಯುಂಟು. ಇಲ್ಲದಿದ್ದರೆ ಆ ಕಾಯ್ದೆಯಿಂದ ಯಾವ ಪ್ರಯೋಜನವೂ ಆಗಲಾರದು.

ಲಂಚ ತಿನ್ನುವದು ಅಪರಾಧವೆಂದು ಸರಕಾರವು ಕಾಯಿದೆ ಮಾಡಿರುವದು. ಆದರೆ ಅಧಿಕಾರಿಗಳು ಲಂಚ ತಿನ್ನುವದು ಪಾಪವೆಂದು ಗೊತ್ತಿದ್ದರೂ ಅದನ್ನು ಬಿಟ್ಟಿಲ್ಲ. ಸರಕಾರದವರು ಎಷ್ಟು ಪ್ರಯತ್ನಿಸಿದರೂ ಜನರು ನೀತಿವಂತರಾಗದ ಹೊರತು ಲಂಚಗುಳಿತನವು ಕಡಿಮೆಯಾಗಲಾರದು. ಯಾವದೊಂದು ಕಾಯ್ದೆಯು ಯಶಸ್ವಿಯಾಗುವದೋ ಇಲ್ಲವೋ ಎನ್ನುವದು ಜನರನ್ನೇ ಅವಲಂಬಿಸಿರುವದು. ಅಮೇರಿಕೆಯ ಸರಕಾರವು ಅಮೇರಿಕೆಯಲ್ಲಿ ಮಧ್ಯಪಾನ ಪ್ರತಿಬಂಧ ಮಾಡಬೇಕೆಂದು ಪ್ರಯತ್ನಿಸಿತು. ಆದರೆ ಸರಕಾರದ ಪ್ರಯತ್ನವು ಅಯಶಸ್ವಿಯಾಯಿತು. ಯಾಕಂದರೆ ಸರಕಾರವು ಮಾಡಿದ ಪ್ರಯತ್ನಕ್ಕೆ ಜನರು ವಿರೋಧ ಮಾಡಿದರು.

ಹಲವು ಸಮಯಗಳಲ್ಲಿ ಜನರನ್ನು ಕಾಯಿದೆಯಿಂದ ಸುಧಾರಿಸುವದು ಸಾಧ್ಯವು. ಆದರೆ ಕಾಯಿದೆಯನ್ನು ಮಾಡುವದಕ್ಕಿಂತ ಮೊದಲು ಜನರಲ್ಲಿ ಆ ಕಾಯಿದೆಯ ಬಗ್ಗೆ ಸಹಾನುಭೂತಿಯನ್ನು ನಿರ್ಮಾಣ ಮಾಡಬೇಕು ಸರಕಾರವು ಮಾಡುವ ಕಾಯ್ದೆಯಿಂದ ತಮ್ಮ ಹಿತವಾಗುವದೆಂದು ಅವರಿಗೆ ಮನವರಿಕೆಯಾಗಬೇಕು. ಅದ್ದರಿಂದ ಕಾಯ್ದೆ ಮಾಡುವದಕ್ಕಿಂತ ಮೊದಲು ಜನರಿಗೆ ಅದನ್ನು ತಿಳಿಸಿ ಹೇಳಬೇಕು. ಬಂಗಾಲದಲ್ಲಿ ರಾಜಾರಾಮ ಮೋಹನರಾಯನು ಸತಿಹೋಗುವದನ್ನು ತಡೆಯುವದಕ್ಕಾಗಿ ಬಹಳಪ್ರಚಾರ ಮಾಡಬೇಕಾಯಿತು. ಗವ್ಹರ್ನರ ಜನರಲ್‌ನನ್ನು ಸತಿಹೋಗುವ ಪದ್ಧತಿಯನ್ನು ತಡೆಯಲು ಕಾಯಿದೆ ಮಾಡಬೇಕೆಂದು ಒತ್ತಾಯ ಮಾಡಿದನು. ಸರಕಾರದವರು ಈ ಕಾಯ್ದೆ ಮಾಡುವಷ್ಟರಲ್ಲಿ ಜನಜಾಗ್ರತಿ ಆಗಿತ್ತು. ಆದ್ದರಿಂದ ಸರಕಾರದವರು ಮಾಡಿದ ಕಾಯ್ದೆಯು ಯಶಸ್ವಿಯಾಯಿತು. ಜನರ ಬೆಂಬಲ ದೊರೆತರೆ ಕಾಯ್ದೆಯಿಂದ ಜನರನ್ನು ಸುಧಾರಿಸಬಹುದು. ಇಲ್ಲದಿದ್ದರೆ ಒತ್ತಾಯದಿಂದ ಕಾಯ್ದೆಗಳನ್ನು ಜನರ ಮೇಲೆ ಹೇರಿದರೆ ಅದರಿಂದ ಯಾವ ಪರಿಣಾಮವೂ ಆಗುವದಿಲ್ಲ. ಎಲ್ಲರೂ ಸತ್ಯ ಮಾತನಾಡಬೇಕೆಂದು ಸರಕಾರವು ಕಾಯಿದೆಯನ್ನು ಮಾಡಬಹುದು. ಆದರೆ ಜನರು ಸುಳ್ಳು ಮಾತನಾಡುವದನ್ನು ಕಂಡು ಹಿಡಿಯುವದು ಎಷ್ಟು ಸಾಧ್ಯ. ಎಲ್ಲರೂ ಸುಳ್ಳು ಮಾತನಾಡುವಾಗ ಈ ಕಾಯ್ದೆಯಿಂದ ಏನು ಲಾಭವಾದೀತು? ಸುಳ್ಳು ಮಾತನಾಡಿದ್ದಕ್ಕಾಗಿ ಸರಕಾರವು ಎಷ್ಟು ಜನರನ್ನು ಶಿಕ್ಷಿಸಬಹುದು. ಜನರು ನೀತಿವಂತರಾಗಿದ್ದರೆ ಅವರಿಗೆ ಸತ್ಯ ಮಾತನಾಡಿರಿ ಎಂದು ಹೇಳುವದರ ಅವಶ್ಯಕತೆಯಿಲ್ಲ. ಸತ್ಯವಂತರಲ್ಲದವರನ್ನು ಎಷ್ಟು ಪ್ರಯತ್ನ ಮಾಡಿದರೂ ಕಾಯಿದೆಯಿಂದ ಅವರನ್ನು ನೀತಿವಂತರನ್ನಾಗಿ ಮಾಡುವದು ಸಾಧ್ಯವಿಲ್ಲ.

ಅಮೇರಿಕಾ ದೇಶದಲ್ಲಿ ಇತ್ತೀಚೆಗೆ ವಿವಾಹ-ವಿಚ್ಛೇದನಗಳು ಬಹಳವಾಗುತ್ತಿರುವವು. ಇಂಥ ಅಹಿತಕಾರಕ ಸಂಗತಿಗಳನ್ನು ಕಾಯಿದೆಯಿಂದ ಪ್ರತಿಬಂಧಿಸಲೇ ಬೇಕು. ಇಲ್ಲವಿದ್ದರೆ ವಿವಾಹದ ಮಹತ್ವವೇ ಹೊರಟು ಹೋಗುವದು. ವಿವಾಹ ವಿಚ್ಛೇದವಾಗಬೇಕಾದರೆ ಕೆಲವು ಸಮಂಜಸ ಕಾರಣಗಳು ಬೇಕು. ಸಕಾರಣವಿಲ್ಲದೆ ಈ ಪದ್ಧತಿಯನ್ನು ಬೆಳೆಯಗೊಟ್ಟರೆ ದೇಶಕ್ಕೆ ಬಹಳ ಹಾನಿ ಸಂಭವಿಸುವದು. ಕ್ಷುಲ್ಲಕ ಕಾರಣಕ್ಕಾಗಿ

ವಿವಾಹ ವಿಚ್ಛೇದವಾಗುವದು ಮೂರ್ಖತನವು. ಆದ್ದರಿಂದ ಇಂಥ ದುಷ್ಟ ಪದ್ಧತಿಗಳನ್ನು ತಡೆಯುವದಕ್ಕಾಗಿ ಕಾಯಿದೆಗಳಿಂದ ಸಹಾಯವಾಗುತ್ತದೆ.

## ೧೪. ಪ್ರಜಾಪ್ರಭುತ್ವ ಮತ್ತು ಸರ್ವಾಧಿಕಾರತ್ವ

ಪ್ರಜಾಪ್ರಭುತ್ವವೆಂದರೆ ಪ್ರಜೆಗಳ ರಾಜ್ಯ. ರಾಜ್ಯಕಾರಭಾರದಲ್ಲಿ ಪ್ರತಿಯೊಬ್ಬ ಪ್ರಜೆಗೂ ಸಮಾನಾಧಿಕಾರವಿರುವದು. ಸರಕಾರದ ಮುಂದೆ ಎಲ್ಲರೂ ಸಮಾನರು. ಸರಕಾರವು ಪ್ರಜೆಗಳಲ್ಲಿ ಭೇದವನ್ನೆಣಿಸಬಾರದು. ಪ್ರತಿಯೊಬ್ಬನಿಗೂ ಮತದಾನ ಮಾಡುವ ಹಕ್ಕು ಇರುವದು. ಸರಕಾರವು ಎಂಥದಿರಬೇಕು ಎಂಬುದನ್ನು ನಿರ್ಣಯಿಸುವ ಅಧಿಕಾರವು ಅವರಿಗೇ ಸೇರಿದ್ದು. ಸರಕಾರವು ಪ್ರಜೆಗಳ ಬೆಂಬಲವನ್ನು ಪಡೆಯದಿದ್ದರೆ ಅದು ಬಹುದಿವಸ ಅಧಿಕಾರದಲ್ಲಿ ಉಳಿಯಲಾರದು.

ಎಲ್ಲ ಪ್ರಜೆಗಳೂ ಕೂಡಿ ಇಡೀ ಒಂದು ದೇಶದ ರಾಜ್ಯಕಾರಭಾರವನ್ನು ಸಾಗಿಸಲಾರರು. ಅದಕ್ಕಾಗಿ ಅವರು ತಮ್ಮ ಪ್ರತಿನಿಧಿಗಳನ್ನು ಶಾಸನಸಭೆಗೆ ಆರಿಸಿ ಕಳಿಸುವರು. ಶಾಸನ ಸಭೆಯಲ್ಲಿ ಬಹುಮತವನ್ನು ಸಂಪಾದಿಸಿದವನು ಮುಖ್ಯಮಂತ್ರಿಯಾಗುವನು. ಜನರ ಪ್ರತಿನಿಧಿಯಾಗಿ ಅವನು ರಾಜ್ಯಕಾರ ಭಾರವನ್ನು ಸಾಗಿಸುವನು. ಜನರ ಹಿತವೇ ಅವನ ಗುರಿಯಾಗಿರತಕ್ಕದ್ದು. ಜನರ ಮೇಲೆ ಒತ್ತಾಯದಿಂದ ಯಾವ ಕಾಯಿದೆಗಳನ್ನೂ ಅವನು ಹೇರ ಲಾರನು. ಜನರ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವ ಅಧಿಕಾರವು ಅವನಿ ಗಿರುವದಿಲ್ಲ. ಯಾವ ಕಾರ್ಯ್ಯ ಮಾಡಿದರೂ ಅದಕ್ಕೆ ಶಾಸನ ಸಭೆಗಳ ಸದ ಸ್ಯರ ಬಹುಮತವನ್ನು ಪಡೆಯಬೇಕಾಗುತ್ತದೆ. ಒಂದು ವೇಳೆ ಅವನು ಶಾಸನ ಸಭೆಯಲ್ಲಿ ಸದಸ್ಯರ ಬಹುಮತವನ್ನು ಪಡೆಯದೆ ಹೋದರೆ ತನ್ನ ಅಧಿ ಕಾರಕ್ಕೆ ರಾಜೀನಾಮೆ ಕೊಡಬೇಕಾಗುವದು. ಮುಖ್ಯಮಂತ್ರಿಯು ಇಲ್ಲವೆ ಸರಕಾರವು ಮಂಡಿಸುವ ಮಸೂದೆಯನ್ನು ತಿರಸ್ಕರಿಸುವ ಅಧಿಕಾರವು ಶಾಸನ ಸಭೆಯ ಸದಸ್ಯರಿಗಿರುವದು. ಪ್ರಜೆಗಳು ಸರಕಾರವು ಮಾಡಿದ ಕಾಯಿದೆ ಯನ್ನು ಒಪ್ಪದೆ ಇರಬಹುದು. ವೃತ್ತಪತ್ರಿಕೆಗಳು ಸರಕಾರದ ಧೋರಣವು ತಪ್ಪು ಎಂದು ಕಂಡುಬಂದಾಗ ಅದನ್ನು ಉಗ್ರವಾಗಿ ಖಂಡಿಸುವವು. ಜನರು ಸಾರ್ವಜನಿಕ ಸಭೆಗಳನ್ನು ಮಾಡಿ ಸರಕಾರದ ಧೋರಣವನ್ನು ಖಂಡಿಸ

ಬಹುದು. ಸರಕಾರದ ಧೋರಣವನ್ನು ಎಲ್ಲರೂ ಒಪ್ಪಲೇಬೇಕೆಂದು ಅದು ಯಾರ ಮೇಲೆಯೂ ಒತ್ತಾಯ ಮಾಡಲಾರದು. ಪತ್ರಿಕೆಗಳ ಸ್ವಾತಂತ್ರ್ಯವನ್ನು ಅಪಹರಿಸುವದಕ್ಕೆ ಸರಕಾರಕ್ಕೆ ಬರುವದಿಲ್ಲ. ಪತ್ರಿಕೆಗಳು ಜನಾಭಿಪ್ರಾಯದ ಪ್ರತಿಬಿಂಬಗಳಾದ್ದರಿಂದ ಅವುಗಳ ಅಭಿಪ್ರಾಯಗಳಿಗೆ ಪ್ರಜಾಪ್ರಭುತ್ವದಲ್ಲಿ ಬಹಳ ಮಹತ್ವವಿದೆ. ಪ್ರತಿಯೊಬ್ಬ ಪ್ರಜೆಯೂ ಸ್ವತಂತ್ರನಾಗಿರುವದರಿಂದ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಅವನು ಸರಕಾರಕ್ಕೆ ಹೆದರಬೇಕಾಗಿಲ್ಲ. ಆದರೆ ಅವನು ತನ್ನ ಸ್ವಾತಂತ್ರ್ಯದ ದುರುಪಯೋಗ ಪಡೆದು ಎರಡನೆಯವರನ್ನು ನಿಂದಿಸಲು ಬರಲಾರದು.

ಪ್ರಜಾಪ್ರಭುತ್ವವೆಂದರೆ ಪ್ರಜೆಗಳ ಸರಕಾರವಾದ್ದರಿಂದ ಅದು ಬೇಗನೆ ಯಾವದೊಂದು ಕೆಲಸವನ್ನು ಮಾಡಲಾರದು. ಒಂದು ಕಾಯ್ದೆಯನ್ನು ಮಾಡಬೇಕಾದರೆ ಅದಕ್ಕೆ ಶಾಸನ ಸಭೆಗಳ ಬಹುಮತ ಸದಸ್ಯರ ಬೆಂಬಲ ದೊರಕಿಸಬೇಕು. ಅದನ್ನು ಶಾಸನ ಸಭೆಯ ಮುಂದೆ ಮಂಡಿಸಬೇಕು. ವಿರೋಧಿ ಪಕ್ಷದವರು ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡಬೇಕು. ಇದರಿಂದ ಕಾಯ್ದೆ ಮಾಡುವದಕ್ಕೆ ಬಹಳ ವೇಳೆ ಹಿಡಿಯುವದು. ಇದಲ್ಲದೆ ಸರಕಾರವು ಜನರ ಅಭಿಪ್ರಾಯವನ್ನೂ ತಿಳಿದುಕೊಳ್ಳಬೇಕಾಗುವದು. ತ್ವರಿತದಿಂದ ಸುಧಾರಣೆಗಳನ್ನು ಮಾಡುವದು ಪ್ರಜಾಪ್ರಭುತ್ವದಲ್ಲಿ ಸಾಧ್ಯವಿಲ್ಲ. ಅನೇಕರು ಕೂಡಿ ರಾಜ್ಯಕಾರಭಾರ ಮಾಡುವದರಿಂದ ಸುಧಾರಣೆಗಳನ್ನು ಮಾಡಲು ತಡವಾಗುವದು.

ಸರ್ವಾಧಿಕಾರತ್ವವೆಂದರೆ ಒಬ್ಬನೇ ರಾಜ್ಯವನ್ನು ಆಳುವದು. ಅವನು ಶಾಸನ ಸಭೆಗೆ ಹೊಣೆಗಾರನಾಗಿರುವದಿಲ್ಲ. ತನ್ನ ಮನಸ್ಸಿಗೆ ಬಂದಂತೆ ರಾಜ್ಯಕಾರಭಾರ ಮಾಡುವನು. ಪ್ರಜೆಗಳ ಇಚ್ಛೆಗೆ ಅವನು ಮಹತ್ವ ಕೊಡುವದಿಲ್ಲ. ಪ್ರಜೆಗಳು ಅವನು ಮಾಡಿದ ಕಾಯ್ದೆಯಂತೆ ನಡೆಯಬೇಕಾಗುವದು. ಇಲ್ಲದಿದ್ದರೆ ಅವನು ಕಾಯಿದೇಭಂಗಮಾಡಿದವರನ್ನು ಉಗ್ರವಾಗಿ ಶಿಕ್ಷಿಸುವನು. ಅನೇಕ ಸುಧಾರಣೆಗಳನ್ನು ಇವನು ತ್ವರಿತದಲ್ಲಿ ಮಾಡಬಲ್ಲನು. ಹಿಟ್ಲರನ ಆಳಿಕೆಯಲ್ಲಿ ಜರ್ಮನಿಯ ಆರ್ಥಿಕ, ಸಾಮಾಜಿಕ ಪರಿಸ್ಥಿತಿಯು ಬಹುಬೇಗನೆ ಸುಧಾರಿಸಿತು. ಸರ್ವಾಧಿಕಾರಿಯು ಸಂಪೂರ್ಣವಾಗಿ ಅಧಿಕಾರವನ್ನು ಪಡೆದಿರುವದರಿಂದ ಯಾವ ಸುಧಾರಣೆಗಳನ್ನು ಮಾಡಲು ಹಿಂದೆ ಮುಂದೆ ನೋಡು

ವದಿಲ್ಲ. ಅವನ ಅಧಿಕಾರವು ಸೈನ್ಯ ಬಲವನ್ನು ಅವಲಂಬಿಸಿರುತ್ತದೆ ಕಾಯ್ದೆ ಮಾಡುವದು ಅವನಿಗೆ ಬಹು ಸುಲಭ ಕೆಲಸ ಅವನ ರಾಜ್ಯಕಾರಭಾರದಲ್ಲಿ ಅಡ್ಡಿ ಆತಂಕಗಳನ್ನು ಒಡ್ಡುವವರು ಯಾರೂ ಇಲ್ಲ. ಅವನಲ್ಲಿ ಜನಹಿತವನ್ನು ಮಾಡಬೇಕೆಂಬ ಇಚ್ಛೆಯಿದ್ದರೆ ಅವನು ಅನೇಕ ಸುಧಾರಣೆಗಳನ್ನು ಮಾಡ ಬಹುದು. ಈ ಕಾಯ್ದೆಯನ್ನು ಯಾಕೆ ಮಾಡಿದಿ ಎಂದು ಅವನನ್ನು ಯಾರೂ ಪ್ರಶ್ನಿಸುವದಿಲ್ಲ. ರಶಿಯಾ ದೇಶದಲ್ಲಿ ಸ್ಟಾಲಿನ್ ತನ್ನ ವಜ್ರಮುಷ್ಟಿಯಿಂದ ರಾಜ್ಯಕಾರಭಾರ ಸಾಗಿಸಿ ಅನೇಕ ಸುಧಾರಣೆಗಳನ್ನು ಮಾಡಿದನು.

ಸರ್ವಾಧಿಕಾರಿಯ ರಾಜ್ಯದಲ್ಲಿ ಬೇಗನೆ ಸುಧಾರಣೆಗಳು ಆಗುವವು ಎಂಬ ಮಾತಿನಲ್ಲಿ ಸಂದೇಹವಿಲ್ಲ. ಆದರೆ ಸರ್ವಾಧಿಕಾರಿಯು ತನ್ನ ವಿರೋಧಿ ಗಳಾದವರನ್ನು ಅತಿ ಕ್ರೂರತನದಿಂದ ನಡಿಸಿಕೊಳ್ಳುವನು. ಇಲ್ಲಿ ವ್ಯಕ್ತಿ ಸ್ವಾತಂತ್ರವೇ ಇರುವದಿಲ್ಲ. ಸರ್ವಾಧಿಕಾರಿಯ ವಿರುದ್ಧವಾಗಿ ಪ್ರಜೆಗಳು ಯಾವ ಅಭಿಪ್ರಾಯವನ್ನೂ ವ್ಯಕ್ತಪಡಿಸಲಾರರು. 'ಆತ್ಮವನ್ನು ಕಳೆದು ಕೊಂಡು ಜಗತ್ತನ್ನು ಗೆದ್ದರೂ ಏನು ಲಾಭ?' ಎಂದು ಕ್ರಿಸ್ತನು ಹೇಳಿದಂತೆ ವ್ಯಕ್ತಿ ಸ್ವಾತಂತ್ರವಿಲ್ಲದೆ ಇದ್ದ ರಾಜ್ಯದಲ್ಲಿ ಎಷ್ಟು ವೈಭವಗಳಿದ್ದರೂ ಅದು ವ್ಯರ್ಥವಾದದ್ದು. ಎಲ್ಲಕ್ಕಿಂತಲೂ ವ್ಯಕ್ತಿ ಸ್ವಾತಂತ್ರವೇ ಮುಖ್ಯವಾದದ್ದು. ಸಾವಕಾಶವಾಗಿ ಸುಧಾರಣೆಗಳಾದರೂ ಅಡ್ಡಿಯಿಲ್ಲ; ಪ್ರಜಾಪ್ರಭುತ್ವವೇ ಮೇಲು. ಎಷ್ಟು ಸುಖ ಸಂಪತ್ತುಗಳಿದ್ದರೂ ಸರ್ವಾಧಿಕಾರಿಯ ರಾಜ್ಯವನ್ನು ಯಾರೂ ಬಯಸಲಾರರು.

## ೧೯. ಬೇಸಿಗೆ ಕಾಲ

ಹಿಂದುಸ್ತಾನದಲ್ಲಿ ಎಲ್ಲ ಬಗೆಯ ಹವಾಮಾನಗಳನ್ನು ಕಾಣಬಹುದು. ಆಸಾಮುದ ಹವಾಮಾನವು ಅತಿ ಶೀತವಾಗಿದ್ದರೆ ಪಂಜಾಬದ ಹವಾಮಾನವು ಅತಿ ಉಷ್ಣವಾಗಿರುತ್ತದೆ. ಸಂಯುಕ್ತಪ್ರಾಂತ, ಮಧ್ಯಪ್ರದೇಶ ಇವು ಸಮುದ್ರ ದಿಂದ ದೂರವಿರುವದರಿಂದ ಅಲ್ಲಿಯ ಹವಾಮಾನವು ವಿಷಮವಾಗಿರುತ್ತದೆ. ಕೆಲವು ಪ್ರದೇಶಗಳಲ್ಲಿ ಬೇಸಿಗೆ ಕಾಲವು ಬಹಳ ಉಗ್ರವಾಗಿರುವದು.

ಎಲ್ಲ ಋತುಗಳಲ್ಲಿ ವಸಂತ ಋತುವೇ ಶ್ರೇಷ್ಠವಾದದ್ದೆಂದು ಕವಿಗಳು ವರ್ಣಿಸಿರುವರು. ಈ ಕಾಲದಲ್ಲಿ ಎಲ್ಲ ಗಿಡಗಳೂ ಚಿಗಿತು ಹೂ ಬಿಡುವವು.

ಮಾವಿನ ಮರದ ಸೊಬಗನ್ನಂತೂ ಎಷ್ಟು ಬಣ್ಣಿಸಿದರೂ ಸಮಾಧಾನವಾಗುವದಿಲ್ಲ. ಎಲ್ಲಿ ನೋಡಿದಲ್ಲಿ ಗಿಡಗಳು ಹೊಸ ಚಿಗುರುಗಳಿಂದ ಶೋಭಿಸುವವು. ಕೋಗಿಲವು ತನ್ನ ಮಧುರವಾದ ಸ್ವರಗಳಿಂದ ಹಾಡುವದು.

ಮಧ್ಯಾಹ್ನ ಸಮಯದಲ್ಲಿ ಮಾತ್ರ ಬಿಸಿಲು ಬಹಳ ಉಗ್ರವಾಗಿರುವದು. ಕೆಲಸಮಾಡಲು ಉತ್ಸಾಹ ಬರುವದಿಲ್ಲ. ಯಾವದೊಂದು ಕೆಲಸ ಮಾಡಲು ಪ್ರಾರಂಭಿಸಿದರೆ ಬೇಗನೆ ದಣಿವಾಗುವದು. ಮೈತುಂಬ ಬೆವರು ಬರುವದು. ಇದರಿಂದಬಹಳಆಯಾಸವಾದಂತಾಗುವದು.ಆದರೆಸಂಜೆಯುಮುಂದೆಹವೆಯು ತಂಪಾಗುವದು. ಸೂರ್ಯನು ಮುಳುಗುವ ಹೊತ್ತಿಗೆ ಹೊರಗೆ ಹೋದರೆ ತಂಪಾದ ಗಾಳಿಯು ನಮ್ಮನ್ನು ಎದುರುಗೊಳ್ಳುವದು. ಸೃಷ್ಟಿಸೌಂದರ್ಯವು ಮನೋಹರವಾಗಿರುವದು. ನಮಗೆ ಮಳೆಯನ್ನು ಮುಂದೆ ಕೊಡತಕ್ಕ ಕಾಲವೇ ಬೇಸಿಗೆ ಕಾಲವು. ಇಂಗ್ಲಂಡದಲ್ಲಿ ಹ ವಾ ಮಾ ನ ವು ಬಹಳ ಶೀತವಾಗಿರುವದರಿಂದ ಅವರಿಗೆ ಬೇಸಿಗೆಯ ಅನುಭವವಿಲ್ಲ. ಸೂರ್ಯನು ಅವರಿಗೆ ದಿನಾಲು ಕಾಣಿಸುವದಿಲ್ಲ. ಸೂರ್ಯನು ಕಂಡದಿವಸ ಅವರು ಬಹಳ ಆನಂದಪಡುವರು. ನಮ್ಮಲ್ಲಿ ಅದರ ವಿಪರೀತವಾಗಿದೆ. ಮಳೆಗಾಲವನ್ನು ಬಿಟ್ಟರೆ ಉಳಿದ ಎಲ್ಲ ಕಾಲಗಳಲ್ಲಿಯೂ ನಾವು ಸೂರ್ಯನನ್ನು ನೋಡುವೆವು. ಬಿಸಿಲುಗಾಲದಲ್ಲಿ ಅವನ ಕೃಪೆಗೆ ಪಾತ್ರರಾಗುವೆವು! ನಮಗೆ ಮೇಲಿಂದ ಮೇಲೆ ಸೂರ್ಯನದರ್ಶನವಾಗುವದರಿಂದ ನಾವು ಸೂರ್ಯನು ಮಹತ್ವವನ್ನು ಅರಿಯದೆ ಹೋಗಿದ್ದೇವೆ. ಸೂರ್ಯಪ್ರಕಾಶವಿಲ್ಲದಿದ್ದರೆ ಯಾವ ವನಸ್ಪತಿಯೂ ಬೆಳೆಯುತ್ತಿರಲಿಲ್ಲ. ಮಳೆಗಾಲದ ಕೂಡ ತುಲನೆ ಮಾಡಿದರೆ ಬೇಸಿಗೆ ಕಾಲವೇ ಒಳ್ಳೇದೆಂದು ಕಂಡು ಬರುವದು.

ಮಳೆಗಾಲದಲ್ಲಿ ಹವೆಯು ಬಹಳ ಕೆಡುವದು. ಯಾಕಂದರೆ ತಗ್ಗುದಿನ್ನೆಗಳಿದ್ದಲ್ಲಿ ನೀರು ನಿಲ್ಲುವದರಿಂದ ಅಲ್ಲಿಗುಂಗಾಡುಗಳು ಮನೆಮಾಡುವವು. ಹವೆಯು ಯಾವಾಗಲೂ ತಂಪಾಗಿರುವದರಿಂದ ಹೊರಗೆ ಹೋಗಲು ಮನಸ್ಸಾಗುವದಿಲ್ಲ. ರಸ್ತೆಗಳೆಲ್ಲವೂ ಕೊಳೆಯಿಂದ ತುಂಬಿರುವವು. ನಾವು ಹಾಯ್ದು ಹೋಗುವಾಗ ಯಾವದಾದರೊಂದು ವಾಹನವು ಬಂದರೆ ನಮ್ಮ ಪಾಡು ಹೇಳತೀರದು! ಹಾದಿಯಲ್ಲಿ ನೀರು ನಿಲ್ಲುವದರಿಂದ ಜಾರಿ ಬೀಳುವ ಸಂಭವವೂ ಹೆಚ್ಚಾಗಿರುವದು. ಒಂದೇ ಸವನೆ ಗಾಳಿ ಬೀಸುವದು. ಮಳೆ-

ಗಾಳಿಗಳು ಕೂಡಿದವೆಂದರೆ ಹೊರಗೆ ಹೋಗುವದು ಸಾಧ್ಯವಾಗುವದಿಲ್ಲ. ಭೂಮಿಯಲ್ಲಿ ಕೆಲಸ ಮಾಡುವದು ಸಾಧ್ಯವಾಗುವದಿಲ್ಲ.

ಬೇಸಿಗೆಕಾಲವು ಉದ್ಯೋಗದ ಕಾಲವು. ಪಶುಪಕ್ಷಿಗಳು ತಮ್ಮ ಆಹಾರವನ್ನು ಶೇಖರಿಸಿಕೊಳ್ಳುವವು. ಹಳ್ಳಿಯಲ್ಲಿ ರೈತನು ಈ ಕಾಲವನ್ನು ಆನಂದದಿಂದ ಕಳೆಯುವನು. ಅವನ ಸುಗ್ಗಿಯು ಮುಗಿದಿರುವದು. ಆದ್ದರಿಂದ ಅವನು ಆಟಗಳನ್ನುಮಾಡಿಮನೋರಂಜನೆಯನ್ನು ಮಾಡಿಕೊಳ್ಳುವನು. ಜಾತ್ರೆಗಳೂ ಈ ಕಾಲದಲ್ಲಿ ನಡೆಯುವವು. ಶಾಲೆಗಳಿಗೆ ಒಂದುವರೆ ತಿಂಗಳು ಬಿಡುವು ಇರುವದರಿಂದ ವಿದ್ಯಾರ್ಥಿಗಳು ಆನಂದದಿಂದ ಕಾಲಕಳೆಯುವರು. ಪ್ರವಾಸಮಾಡುವದಕ್ಕೂ ಈ ಕಾಲವು ಯೋಗ್ಯವಾಗಿರುವದು.

## ೨೦. ಸೈನಿಕ ಶಿಕ್ಷಣವನ್ನು ಕಡ್ಡಾಯವಾಗಿ ಮಾಡಬೇಕೆ?

ಭರತಖಂಡದಲ್ಲಿ ಭೀಮ, ಹನುಮಂತ ಮುಂತಾದ ಬಲಶಾಲಿಗಳು ಆಗಿಹೋಗಿರುವರು. ಶಿವಾಜಿ, ಪ್ರತಾಪಸಿಂಹ, ಪುಲಕೇಶಿ, ಚಂದ್ರಗುಪ್ತರ ಪರಾಕ್ರಮವು ಜಗತ್ಪ್ರಸಿದ್ಧವಾಗಿದೆ. ಅವರ ವಂಶಜರಾದ ನಾವು ಇಂದು ಬಲಹೀನರಾಗಿರುವೆವು. ಭಾರತೀಯ ತರುಣರು ಚಿಕ್ಕವಯಸ್ಸಿನಲ್ಲಿಯೇ ರೋಗಗಳಿಂದ ಪೀಡಿತರಾಗಿರುವರು. ದೇಹ ದಾರ್ಢ್ಯವು ಇಲ್ಲದಂತಾಗಿದೆ. ತಾರುಣ್ಯದಲ್ಲಿರ ಬೇಕಾದ ಕಾಂತಿಯು ಇಲ್ಲದಂತಾಗಿದೆ. ಇದಕ್ಕೆ ಕಾರಣವೆಂದರೆ ನಮಗೆ ಸಾಕಷ್ಟು ಶಾರೀರಿಕ ಶ್ರಮವಿಲ್ಲದಿರುವದು. ಶಾರೀರಿಕ ಶ್ರಮವಿಲ್ಲದೆ ನಮ್ಮ ದೇಹವು ಗಟ್ಟಿಯಾಗಲಾರದು. ಶರೀರ ಸಂಪತ್ತು ಇಲ್ಲದಿದ್ದರೆ ಯಾವ ಕಾರ್ಯವೂ ಸಾಧಿಸಲಾರದು. ಆದ್ದರಿಂದ ನಮ್ಮ ಶಾಲೆ ಕಾಲೇಜುಗಳಲ್ಲಿ ಸೈನಿಕ ಶಿಕ್ಷಣವನ್ನು ಕಡ್ಡಾಯವಾಗಿ ಮಾಡಬೇಕು.

ಸೈನಿಕ ಶಿಕ್ಷಣದಿಂದ ವಿದ್ಯಾರ್ಥಿಯು ಸಧೃಡನಾಗುವದಲ್ಲದೆ ಶಿಸ್ತು ಕಲಿಯುವನು. ಶಿಸ್ತಿಯಿಲ್ಲದ ಜೀವನವು ವ್ಯರ್ಥವಾದದ್ದು. ಮಹಾತ್ಮಾ ಗಾಂಧೀಜಿಯವರು ನಾಗಪುರದ ವಿಶ್ವವಿದ್ಯಾನಿಲಯದಲ್ಲಿ ಭಾಷಣಮಾಡಲ ಬಂದಿದ್ದರು. ಆಗ ಅಲ್ಲಿಯ ವಿದ್ಯಾರ್ಥಿಗಳು ಗಾಂಧೀಜಿಯವರ ಭಾಷಣವನ್ನು ಕೇಳುವದಕ್ಕಾಗಿ ಕಿಡಿಕಿಗಳನ್ನು ಮುರಿದು ಒಳಗೆ ಹೊಕ್ಕರು. ಇದನ್ನು ಕಂಡು ಗಾಂಧೀಜಿಯವರಿಗೆ ಬಹಳ ವಿಷಾದವಾಯಿತು. 'ಶಿಸ್ತುಕಲಿಯ

ದಿದ್ದರೆ ನಿಮ್ಮ ಶಿಕ್ಷಣದಿಂದ ದೇಶಕ್ಕೆ ಏನು ಪ್ರಯೋಜನವಾದೀತು?' ಎಂದು ಗಾಂಧೀಜಿಯವರು ಪ್ರಶ್ನಿಸಿದರು. ಎಲ್ಲಿಯಾದರೂ ಒಂದು ಸಭೆಗೆ ಹೋಗ ಬೇಕಾದರೆ ನಮ್ಮ ವಿದ್ಯಾರ್ಥಿಗಳು ಎಷ್ಟು ನೂಕುವರು! ಇದಕ್ಕೆ ಕಾರಣವೆಂದರೆ ವಿದ್ಯಾರ್ಥಿಗಳಲ್ಲಿ ಶಿಸ್ತು ಇಲ್ಲದಿರುವದು.

ಒಬ್ಬನಿಗೆ ಅಧೀನವಾಗಿ ನಡೆಯದಿದ್ದರೆ ನಮ್ಮಲ್ಲಿ ಶಿಸ್ತು ಬರಲಾರದು. ಎಲ್ಲರೂ ನಾಯಕರಾದರೆ ಅನಾಯಕತ್ವ ತಲೆದೋರುವದು. ಆಜ್ಞೆಯನ್ನು ಹೇಗೆ ಪಾಲಿಸಬೇಕು ಎಂಬುದನ್ನು ಕಲಿಯದೆ ಆಜ್ಞೆ ಕೊಡಲಿಕ್ಕೆ ಬರಲಾರದು. ಸೇನಾಪತಿಯಾಗಬೇಕಾದವನು ಮೊದಲು ಸೈನಿಕನಾಗಬೇಕು. ಶಿಕ್ಷಕನಾಗ ಬೇಕೆಂದು ಬಯಸುವವನು ಮೊದಲು ವಿದ್ಯಾರ್ಥಿಯಾಗಬೇಕು. ನಮ್ಮಲ್ಲಿ ಸಂಘಟನಾಶಕ್ತಿಯೇ ಇಲ್ಲದಾಗಿದೆ. ಭಾರತೀಯರು ವೀರರಾದರೂ ಸಂಘಟನಾ ಶಕ್ತಿಯಿಲ್ಲದ್ದರಿಂದ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡರು. ಈಗ ನಾವು ಸಂಘಟನಾ ಶಕ್ತಿಯನ್ನು ಬೆಳಿಸಿಕೊಳ್ಳಬೇಕು. ಇದು ಸೈನಿಕ ಶಿಕ್ಷಣ ದಿಂದ ಮಾತ್ರ ಸಾಧ್ಯವಾದದ್ದು.

ಜಾತೀಯ ಭೂತವು ನಮ್ಮ ದೇಶವನ್ನು ಹಾಳು ಮಾಡಿರುವದು. ಇದನ್ನು ನಾವು ಹಾಗೆಯೇ ಬೆಳೆಯಗೊಟ್ಟರೆ ಭರತಖಂಡವು ನುಚ್ಚುನೂರಾ ಗುವದು. ಸೈನಿಕನು ಜಾತಿಭೇದಗಳನ್ನು ಎಣಿಸಲಾರನು. ಯುದ್ಧಭೂಮಿ ಯಲ್ಲಿ ಸೈನಿಕನು ಜಾತಿಭೇದವನ್ನೆಣಿಸಿದರೆ ಹೇಗೆ ಯಶಸ್ಸನ್ನು ತಂದಾನು? ತನ್ನ ಒಡೆಯನ ಆಜ್ಞೆಯನ್ನು ಬಿಟ್ಟು ಬೇರೆ ಯಾವದನ್ನೂ ಅವನು ಅರಿಯನು.

ಸೈನಿಕ ಶಿಕ್ಷಣವು ನಮ್ಮಲ್ಲಿ ದೇಶಾಭಿಮಾನವನ್ನುಂಟು ಮಾಡುವದು. ನಾವೆಲ್ಲ ಒಂದೇ ಎಂಬ ಭಾವನೆಯು ಬೆಳೆಯುವದು. ಸೈನಿಕರೆಲ್ಲರೂ ಒಂದೇ ಉಡುಪು ಧರಿಸುವದರಿಂದ ಅವರಲ್ಲಿ ತಾವೆಲ್ಲರೂ ಒಂದು ಎಂಬ ವಿಚಾರವು ಉತ್ಪನ್ನವಾಗುವದು. ದೇಶದ ಸಲುವಾಗಿ ಪ್ರಾಣವನ್ನು ಕೊಡಲೂ ಅವರು ಹಿಂದೆ ಮುಂದೆ ನೋಡುವದಿಲ್ಲ. ಸಂಕಟಗಳಿಗೆ ಅವರು ಹೆದರುವದಿಲ್ಲ. ಎಂಥ ಪ್ರಸಂಗ ಬಂದರೂ ಅದರೊಳಗಿಂದ ಪಾರಾಗಲು ಹಂಚಿಕೆಯನ್ನು ಹುಡುಕು ವರು. ಅವರ ಜೀವನವು ಸಾಹಸಯುತವಾದುದು. ಇಂಥ ಸಾಹಸಿಗಳ ಸಹಾ ಯವು ನಮ್ಮ ದೇಶಕ್ಕಿಂದು ಬೇಕಾಗಿರುವದು. 'ಆಳಾಗಿ ನೂರು ವರ್ಷ ಬದು ಕುವದಕ್ಕಿಂತ ಹುಲಿಯಾಗಿ ಮೂರು ವರ್ಷ ಬಾಳುವದು ಲೇಸು'.

ನಮ್ಮ ದೇಶವನ್ನು ರಕ್ಷಿಸುವದರ ಸಲುವಾಗಿ ನಾವು ಎರಡನೇ ದೇಶದವರ ಮೇಲೆ ಅವಲಂಬಿಸಬಾರದು. ನಮ್ಮ ದೇಶವನ್ನು ರಕ್ಷಿಸುವದಕ್ಕೆ ಸೈನ್ಯವಿದ್ದೇ ಇರುವದು. ಆದರೆ ಯುದ್ಧಸಮಯದಲ್ಲಿ ಸೈನಿಕರಿಂದಲೇ ದೇಶವನ್ನು ಸಂರಕ್ಷಿಸುವದು ಸಾಧ್ಯವಾಗಲಾರದು. ಆದ್ದರಿಂದ ಮುಂಚಿತವಾಗಿ ಶಾಲೆ-ಕಾಲೇಜುಗಳಲ್ಲಿಯ ವಿದ್ಯಾರ್ಥಿಗಳಿಗೆ ಸೈನಿಕ ಶಿಕ್ಷಣವನ್ನು ಕೊಡಬೇಕು. ಬೇರೆ ದೇಶದವರು ನಮ್ಮ ಮೇಲೆ ದಾಳಿ ಮಾಡಿದರೆ ಆಗ ನಾವು ಸೈನಿಕ ಶಿಕ್ಷಣವನ್ನು ಕೊಟ್ಟಂಥ ವಿದ್ಯಾರ್ಥಿಗಳ ಸಹಾಯವನ್ನು ಪಡೆಯಬಹುದು. ಈಗ ನಾವು ಸೈನ್ಯದ ಸಲುವಾಗಿ ಅಪರಿಮಿತವಾಗಿ ಹಣವನ್ನು ಖರ್ಚು ಮಾಡುವೆವು. ಅದನ್ನು ಕಡಿಮೆಮಾಡಬಲ್ಲೆವು. ಯಾಕಂದರೆ ವಿದ್ಯಾರ್ಥಿಗಳಿಗೆ ಸೈನಿಕ ಶಿಕ್ಷಣ ಕೊಡುವದರಿಂದ ಅಷ್ಟು ಸೈನ್ಯವು ನಮ್ಮ ಹತ್ತಿರ ಇದ್ದಂತೆಯೇ. ವಿದ್ಯಾರ್ಥಿಗಳಿಗೆ ಸೈನಿಕ ಶಿಕ್ಷಣ ಕೊಡುವದರಿಂದ ನಾವು ಯುದ್ಧಮಾಡಲು ಇಚ್ಛಿಸುವೆವೆಂದು ಇದರ ಅರ್ಥವಲ್ಲ. ಆತ್ಮರಕ್ಷಣೆಗಾಗಿ ನಮಗೆ ಸೈನಿಕರು ಬೇಕು. ಅದಕ್ಕಾಗಿ ನಾವು ಮುಂಜಾಗ್ರತೆ ವಹಿಸಬೇಕಾಗುವದು. ನಮ್ಮ ರಾಷ್ಟ್ರವು ಶಾಂತಿಪ್ರಿಯವಾದುದು. ಜಗತ್ತಿನಲ್ಲಿ ಶಾಂತಿಪಸರಿಸಬೇಕೆಂದು ಪಂಡಿತ ಜವಾಹರಲಾಲರು ಒಂದೇ ಸವನೆ ಪ್ರಯತ್ನಿಸುತ್ತಿರುವರು. ಶಾಂತಿಸ್ಥಾಪನೆ ಮಾಡುವದಕ್ಕೆ ಬಲಬೇಕು. ಪ್ರತಿಯೊಂದು ರಾಷ್ಟ್ರವೂ ಸ್ವತಂತ್ರವಾಗಬೇಕೆಂದು ನಮ್ಮ ಇಚ್ಛೆಯಿರುವದು. ಸಾಮ್ರಾಜ್ಯದ ದಿನಗಳು ಹಿಂದೆ ಆದವು. ಇದು ಪ್ರಜಾಸತ್ತಾತ್ಮಕಯುಗವು. ಯಾವದೊಂದು ಪ್ರಜಾಸತ್ತಾತ್ಮಕ ರಾಜ್ಯದ ಮೇಲೆ ಬೇರೊಂದು ದೇಶವು ಅನ್ಯಾಯದಿಂದ ದಾಳಿ ಮಾಡಿದರೆ ಅದನ್ನು ನಾವು ಸಹಿಸಲಾರೆವು. ಅದಕ್ಕಾಗಿ ನಾವು ಬಲಶಾಲಿಗಳಾಗಬೇಕು.

## ೨೧. ವಿದ್ಯಾರ್ಥಿ ಜೀವನ

'Heaven lies about us in our infancy' ಎಂದು ವರ್ಡ್ಸ್‌ವರ್ಥ ಕವಿಯು ಹೇಳಿರುವನು. ಎಲ್ಲಕ್ಕಿಂತಲೂ ಬಾಲ್ಯಜೀವನವೇ ಅತ್ಯಂತ ಪ್ರಿಯಕರವಾದದ್ದು ಎಂದು ಅವನ ಅಭಿಪ್ರಾಯವು. ನಾವು ಬಾಲ್ಯದಲ್ಲಿ ಯಾವ ಚಿಂತೆಗಳನ್ನೂ ಅರಿಯೆವು. ವಿದ್ಯಾರ್ಜನೆ ಮಾಡುವದೇ ನಮ್ಮ ಗುರಿಯು. ಬೇರೆ ಯಾವದರ ಕಡೆಗೂ ಲಕ್ಷ ಹಾಕದೆ ವಿದ್ಯಾರ್ಜನೆ ಮಾಡು

ವದೇ ತನ್ನ ಪರಮೋಚ್ಚವಾದ ಧ್ಯೇಯವೆಂದು ವಿದ್ಯಾರ್ಥಿಯು ತಿಳಿಯ ತಕ್ಕದ್ದು. "ಮೂರು ವರ್ಷದ ಬುದ್ಧಿ ನೂರು ವರ್ಷದ ತನಕ" ಎಂದು ಗಾದೆಯು ಹೇಳುತ್ತದೆ. ಆದ್ದರಿಂದ ಈ ಕಾಲದಲ್ಲಿ ಒಳ್ಳೇ ಚಟಗಳನ್ನು ಕಲಿಯಬೇಕು. ಒಮ್ಮೆ ಒಳ್ಳೇ ಚಟಗಳನ್ನು ರೂಢಿ ಮಾಡಿಕೊಂಡರೆ ಕಡೆ ತನಕ ಅವು ಇರುವವು. 'Habit is ten times stronger than nature' "ಸ್ವಭಾವಕ್ಕಿಂತಲೂ ಚಟವೇ ಬಲವುಳ್ಳದ್ದು" ಎಂದು ಸುಪ್ರಸಿದ್ಧ ಮಾನಸಶಾಸ್ತ್ರಜ್ಞನೊಬ್ಬನು ಹೇಳಿರುವನು.

ಅನೇಕ ಚಟಗಳು ಕೂಡಿ ಸ್ವಭಾವವಾಗಿರುತ್ತದೆ. ಒಳ್ಳೇ ಸ್ವಭಾವಗಳು ಅಂಟಿಕೊಂಡರೆ ನಮ್ಮ ಸ್ವಭಾವವು ಒಳ್ಳೇದಾಗುತ್ತದೆ. ಕೆಟ್ಟ ಚಟಗಳು ಅಂಟಿಕೊಂಡರೆ ನಮ್ಮ ಸ್ವಭಾವವು ಕೆಟ್ಟದಾಗುತ್ತದೆ. ಒಮ್ಮೆ ಕೆಟ್ಟ ಚಟಗಳು ಅಂಟಿಕೊಂಡರೆ ಅದನ್ನು ಬಿಡುವದು ಬಹಳ ಕಠಿಣವಾಗುವದ. ಮಧ್ಯಪಾನ ಮಾಡುವದು ಕೆಟ್ಟದ್ದೆಂದು ಗೊತ್ತಿದ್ದರೂ ಒಮ್ಮೆ ಆ ಚಟವು ಹತ್ತಿತೆಂದರೆ ಅದನ್ನು ಬಿಡಲಿಕ್ಕೆ ಆಗುವದಿಲ್ಲ. ನೂರಾರು ಕುಟುಂಬಗಳು ಇದರಿಂದ ಹಾಳಾಗಿವೆ. ಮಧ್ಯಪಾನ ಮಾಡುವವರಿಗೆ ಮಧ್ಯಪಾನವು ಒಳ್ಳೇದಲ್ಲವೆಂದು ಗೊತ್ತಿರುವದು. ಅದರಿಂದ ತಮ್ಮ ವಂಶವೇ ಹಾಳಾಗುತ್ತದೆಂದು ಗೊತ್ತಿರುವದು. ಆದರೂ ಅದನ್ನು ಅವರು ತ್ಯಜಿಸಲಾರರು. ಅವರು ಬಿಡಬೇಕೆಂದು ಪ್ರಯತ್ನಿಸಿದರೂ ಚಂಚಲವಾದ ಮನಸ್ಸು ಅವರನ್ನು ಅಡ್ಡದಾರಿಗೆ ನೂಕುತ್ತದೆ. ಇದರಿಂದ ಚಟವು ಎಷ್ಟು ಪರಿಣಾಮಕರವಾಗಿದೆ ಎಂಬುದು ಗೊತ್ತಾಗುವದು. ಒಮ್ಮೆ ಒಳ್ಳೇ ಚಟವು ಅಂಟಿಕೊಂಡರೆ ಜೀವನವು ಸುಖಮಯವಾಗುವದು. ಜ್ಞಾನವನ್ನು ಗಳಿಸಬೇಕೆಂಬ ಲವಲವಿಕೆ ಉಂಟಾದರೆ ಎಷ್ಟು ತೊಂದರೆಗಳು ಬಂದರೂ, ಮನುಷ್ಯನು ಆ ತೊಂದರೆಗಳನ್ನು ಎದುರಿಸಿ ತನ್ನ ಜ್ಞಾನದ ಹಸಿವನ್ನು ತೃಪ್ತಿಮಾಡಿಕೊಳ್ಳುವನು. ಆದ್ದರಿಂದ ವಿದ್ಯಾರ್ಥಿಯಾದವನು ಒಳ್ಳೇ ಚಟಗಳನ್ನು ರೂಢಿಮಾಡಿಕೊಳ್ಳಬೇಕು.

ಈಗ ಪ್ರತಿಯೊಂದು ವಿಷಯವನ್ನು ಸುಲಭವಾಗಿ ಕಲಿಯಬೇಕೆಂಬ ಆತುರತೆಯು ಜನರಲ್ಲಿ ಹೆಚ್ಚಾಗತೊಡಗಿರುವದು. ಹೀಗೆ ಪ್ರಯತ್ನಿಸುವದರಲ್ಲಿ ದೋಷವೇನೂ ಇಲ್ಲ. ಆದರೆ ಶ್ರಮಪಡದೆ ವಿದ್ಯೆಯು ದೊರೆಯಲಾರದು. ಶ್ರಮಪಟ್ಟು ಓದಿ, ತಿಳಿದುಕೊಳ್ಳದೆ ನಮ್ಮ ಜ್ಞಾನವು ಬೆಳೆಯಲಾರದು. ಈ

ಯುಗವು ವಿಜ್ಞಾನ ಯುಗವೆಂದು ಕರೆಯಲ್ಪಡುವದು. ವಿಮಾನಕ್ಕಿಂತಲೂ ಬೇಗ ಓಡುವ ವಾಹನಗಳನ್ನು ಹುಡುಕಿ ತೆಗೆಯಬಹುದು. ಸಾವಿರಾರು ಪುಸ್ತಕಗಳನ್ನು ಒಂದೇದಿನದಲ್ಲಿ ಮುದ್ರಿಸುವ ಯಂತ್ರವೂ ಸಿದ್ಧವಾಗಬಹುದು. ಆದರೆ ಪುಸ್ತಕದಲ್ಲಿಯ ಜ್ಞಾನವನ್ನು ತಲೆಯಲ್ಲಿ ತುಂಬಲು ಮಾತ್ರ ಯಾವ ಯಂತ್ರವನ್ನೂ ಹುಡುಕಿತೆಗೆಯಲು ಸಾಧ್ಯವಾಗಲಾರದು. ಹಗಲಿರುಳು ಶ್ರಮ ಪಡದೆ ಸರಸ್ವತಿ ದೇವಿಯು ನಮ್ಮ ವಶವಾಗಲಾರಳು. ಬಹಳ ವಿದ್ಯಾರ್ಥಿಗಳು ಪ್ರಶ್ನೋತ್ತರ ಇತಿಹಾಸ, ಭೂಗೋಲ, ಶಾಸ್ತ್ರೀಯವಿಷಯಗಳನ್ನು ಓದಿ ಪರೀಕ್ಷೆಯಲ್ಲಿ ತೇರ್ಗಡೆಯಾಗುವರು. ಇದರಿಂದ ಅವರ ಜ್ಞಾನವು ಬೆಳೆಯುವ ದಿಲ್ಲ. ಪರೀಕ್ಷೆ ಪಾಸಾಗುವದರಿಂದ ಅವರ ಜ್ಞಾನವೇನೂ ಹೆಚ್ಚಾಗಲಾರದು. ವಿದ್ಯಾರ್ಥಿಗಳು ಜ್ಞಾನವನ್ನುಸಂಪಾದಿಸುವದರಲ್ಲಿ ಆಲಸ್ಯತನ ಮಾಡಬಾರದು. ಕೇವಲ ಪರೀಕ್ಷೆ ಪಾಸಾಗುವದೇ ತಮ್ಮ ಧ್ಯೇಯವೆಂದು ತಿಳಿಯಬಾರದು. ಪರೀಕ್ಷೆ ಪಾಸಾಗುವದರಿಂದ ತಾವು ಜ್ಞಾನಿಗಳಾಗುವೆವೆಂದು ತಿಳಿಯಕೂಡದು. ಪರೀಕ್ಷೆಯೇ ನಮ್ಮ ಧ್ಯೇಯವಾಗಬಾರದು. ಜ್ಞಾನ ಸಂಪಾದನೆಯೇ ನಮ್ಮ ಧ್ಯೇಯವಾಗಿರಬೇಕು. ಇಲ್ಲದಿದ್ದರೆ ನಮ್ಮ ಜ್ಞಾನದ ಮಟ್ಟವು ತೀರ ಕೆಳ ಮಟ್ಟದ್ದಾಗುವದು.

ಕೆಲವು ವಿದ್ಯಾರ್ಥಿಗಳು ಪರೀಕ್ಷೆಗಾಗಿಯೇ ಪುಸ್ತಕಗಳನ್ನು ಓದ ಬೇಕೆಂದು ತಿಳಿದಿರುವರು ! ಅವರು ಶಿಕ್ಷಣವನ್ನು ಮುಗಿಸಿದ ಬಳಿಕ ಯಾವ ಪುಸ್ತಕವನ್ನೂ ಓದುವದಿಲ್ಲ! ಪಂಡಿತ ಜವಾಹರಲಾಲ ನೆಹರುರವರು ತಾವು ಕಾಲೇಜಿನ ಶಿಕ್ಷಣವನ್ನು ಮುಗಿಸಿದ ಬಳಿಕವೇ ಹೆಚ್ಚಾಗಿ ಜ್ಞಾನಗಳಿಸಿರುವ ದಾಗಿ ತಮ್ಮ ಆತ್ಮ ಚರಿತ್ರೆಯಲ್ಲಿ ಹೇಳಿರುವರು. ನಮ್ಮ ಶಿಕ್ಷಣವು ಮುಗಿದ ಬಳಿಕವೇ ನಿಜವಾದ ಜ್ಞಾನಾರ್ಜನೆಯು ಪ್ರಾರಂಭವಾಗುವದು. ತಮ್ಮ ಕಾಲೇಜಿನ ಶಿಕ್ಷಣವು ಮುಗಿದ ಕೂಡಲೆ ಕೆಲವರು ತಾವು ಸರ್ವಜ್ಞರಾದೆವೆಂದು ತಿಳಿದುಕೊಳ್ಳುತ್ತಾರೆ ! ನಿಜವಾದ ಶಿಕ್ಷಣವು ನಾವು ಸಾಯುವ ವರೆಗೂ ನಡೆದಿರುತ್ತದೆ! ಕೇವಲ ಪುಸ್ತಕಗಳಿಂದ ಗಳಿಸುವದಷ್ಟೇ ಜ್ಞಾನವಲ್ಲ; ನಮ್ಮ ಅನುಭವದಿಂದ ಬಂದುದೆಲ್ಲವೂ ಜ್ಞಾನವು. "ಜ್ಞಾನವೇ ಶಕ್ತಿಯು" ಎಂದು ಆಂಗ್ಲ ನಾಣ್ಣುಡಿಯು ಸಾರುತ್ತದೆ. ಆದ್ದರಿಂದ ನಾವು ಜ್ಞಾನವನ್ನು ಗಳಿಸ ಬೇಕು. ವೇದಾಂತಿಗಳು ಜ್ಞಾನದಿಂದಲೇ ಮೋಕ್ಷವೆಂದು ಸಾರಿರುವರು.

ಮನುಷ್ಯನು ಜೀವನಾದ್ಯಂತವೂ ವಿದ್ಯಾರ್ಥಿಯಾಗಿರಬೇಕು. ವಿದ್ಯೆಯನ್ನು ಗಳಿಸಬೇಕೆಂದು ಪ್ರಯತ್ನಪಡುವವನೇ ವಿದ್ಯಾರ್ಥಿಯು.

ಮೊದಲಿನ ಕಾಲದ ವಿದ್ಯಾರ್ಥಿಗಳು ಗುರುಗಳ ಸಾನ್ನಿಧ್ಯದಲ್ಲಿದ್ದು ಕೊಂಡು ಅಭ್ಯಾಸ ಮಾಡುತ್ತಿದ್ದರು. ಇಂದು ಗುರು – ಶಿಷ್ಯ ಭಾವನೆಯು ಮಾಯವಾಗತೊಡಗಿದೆ. ಗುರುಗಳಿಗೆ ಶಿಷ್ಯನಲ್ಲಿ ಪ್ರೇಮವಿಲ್ಲ, ಶಿಷ್ಯನಿಗೆ ಗುರುಗಳಲ್ಲಿ ಭಕ್ತಿಯಿಲ್ಲ. ಗುರುಗಳಲ್ಲಿ ವಿಶ್ವಾಸವಿಲ್ಲದಿದ್ದರೆ ವಿದ್ಯೆಯು ಬರಲಾರದು ಗುರುಗಳಲ್ಲಿ ವಿಶ್ವಾಸವಿಡಬೇಕು; ನವ್ರತೆ ಬೇಕು. ನಮ್ರತೆಯಿಲ್ಲದಿದ್ದರೆ ಯಾವ ವಿದ್ಯೆಯೂ ಬರಲಾರದು. "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಾಮುಕುತಿ" ಎಂದು ದಾಸರು ಅನುಭವದಿಂದ ಹೇಳಿದ್ದಾರೆ. ಭಾರತದೇಶ ಗುರುಭಕ್ತಿಯಲ್ಲಿ ಹೆಸರಾಗಿತ್ತು. ಇಂದು ಪಾಶ್ಚಾತ್ಯನಾಗರಿಕತೆಯ ಪರಿಣಾಮವಾಗಿ ಅದು ಇಲ್ಲದಾಗಿದೆ. ಅದನ್ನು ನಾವು ಮತ್ತೆ ಪುನರುಜ್ಜೀವನಗೊಳಿಸಬೇಕು. ಹಿರಿಯರಲ್ಲಿ ಗೌರವ ಆದರಗಳಿರದಿದ್ದರೆ ನಮಗೆ ವಿದ್ಯೆಯು ಬರಲಾರದು. ಎರಡನೆಯವರ ಬಗ್ಗೆ ನಮ್ಮಲ್ಲಿ ಆದರವಿದ್ದರೆ, ಅವರಿಗೆ ನಮ್ಮ ಬಗ್ಗೆ ಪ್ರೀತಿಯುಂಟಾಗುವದಲ್ಲವೇ?

ಒಟ್ಟಿನಲ್ಲಿ ವಿದ್ಯಾರ್ಥಿಯಾದವನು ಒಳ್ಳೇ ಚಟಗಳುಳ್ಳವನೂ, ಜ್ಞಾನ ತೃಷ್ಣೆಯುಳ್ಳವನೂ, ಕಷ್ಟಸಹಿಷ್ಣುತೆಯುಳ್ಳವನೂ, ಗುರುಗಳಲ್ಲಿ ಆದರವುಳ್ಳವನೂ ಆಗಿರಬೇಕು.

## ೨೨. ನಾನು ನೋಡಿದ ಪಟ್ಟಣ

ನಾನು ನೋಡಿದ ಪಟ್ಟಣಗಳಲ್ಲಿ ಮೈಸೂರು ಬಹಳಸುಂದರವಾದದ್ದು. ಅಲ್ಲಿಯ ವಿಸ್ತಾರವಾದ ರಾಜಬೀದಿಗಳು, ಕಟ್ಟಡಗಳು, ಮನೋಹರವಾದ ಉದ್ಯಾನಗಳು ಇವೆಲ್ಲವೂ ಈಗಲೂ ನನ್ನ ಕಣ್ಣ ಮುಂದೆ ಬಂದು ನಿಲ್ಲುತ್ತವೆ. ಮುಂಬಯಿ, ಮದ್ರಾಸಗಳಷ್ಟು ಈ ಊರು ದೊಡ್ಡದಾಗಿಲ್ಲ. ಆದರೆ ಅವುಗಳಿಗಿಂತಲೂ ಸುಂದರವಾಗಿದೆ. ಇದು ಭೂಲೋಕದ ಇಂದ್ರಪುರಿಯೆಂದು ಕರೆಯಲು ಯೋಗ್ಯವಾಗಿದೆ. ಎಲ್ಲ ಕಡೆಯಲ್ಲಿಯೂ ವಿದ್ಯುತ್ತಿನ ದೀಪಗಳು ಆಕಾಶದಲ್ಲಿಯ ತಾರೆಗಳಂತೆ ಮಿಂಚುತ್ತವೆ. ಇಲ್ಲಿಯ ಬೀದಿಗಳು ಬಹಳ ವಿಸ್ತಾರವಾದವುಗಳೂ, ಸ್ವಚ್ಛವಾದವುಗಳೂ ಆಗಿವೆ. ಬಿಸಿಲುಗಾಲದಲ್ಲಿ

ಬಹಳ ಬಿಸಿಲು ಇರುವದಿಲ್ಲ. ಮಳೆಗಾಲದಲ್ಲಿ ವಿಶೇಷ ಮಳೆಯಾಗುವದಿಲ್ಲ. ಆದ್ದರಿಂದ ಇಲ್ಲಿಯ ಹವೆಯು ಯಾವಾಗಲೂ ಆಲ್ಹಾದಕರವಾಗಿರುವದು.

ಮೈಸೂರಲ್ಲಿ ನೋಡತಕ್ಕಂಥ ಸ್ಥಳಗಳು ಅನೇಕವಿರುವವು. ಇವುಗಳಲ್ಲಿ ಚಾಮುಂಡಿಯ ಬೆಟ್ಟ, ಮಹಾರಾಜರ ಅರಮನೆ, ವಿಶ್ವವಿದ್ಯಾನಿಲಯ ಜಗನ್ಮೋಹನ ವಸ್ತುಸಂಗ್ರಹಾಲಯ, ಪಶುಸಂಗ್ರಹಾಲಯ, ಕನ್ನಂಬಾಡಿ ಆಣೆಕಟ್ಟು ಇವು ಅತ್ಯಂತ ಮಹತ್ವದ ಸ್ಥಳಗಳು.

ಚಾಮುಂಡಿಯು ಮಹಾರಾಜರ ಕುಲದೇವಿಯು. ಇವಳು ಊರ ಹೊರಗೆ ಒಂದು ಬೆಟ್ಟದ ಮೇಲೆ ನಿಂತಿರುವಳು. ಬೆಟ್ಟದ ಮೇಲೆ ಏರಿ ಹೋಗುವದಕ್ಕೆ ಮೆಟ್ಟಲುಗಳನ್ನು ಮಾಡಿರುವರು. ಮೋಟಾರದಿಂದಲೂ ಗುಡ್ಡದಮೇಲೆ ಏರಿ ಹೋಗಬಹುದು. ಆದರೆ ಮೆಟ್ಟಲುಗಳನ್ನು ಏರುತ್ತ ಸೃಷ್ಟಿಸೌಂದರ್ಯವನ್ನು ಸವಿಯುತ್ತ ಹೋಗುವದರಲ್ಲಿಯೇ ಆನಂದವಿದೆ. ಚಾಮುಂಡಿಯಮುಖವು ಬಹಳ ಉಗ್ರವಾಗಿರುವದು. ಮಹಾರಾಜರು ಈ ದೇವಿಯ ದರ್ಶನಕ್ಕಾಗಿ ಮೇಲಿಂದ ಮೇಲೆ ಬರುವದರಿಂದ ಈ ಮೂರ್ತಿಯನ್ನು ಯಾವಾಗಲೂ ಶೃಂಗರಿಸುವರು. ಈ ಬೆಟ್ಟದಮೇಲೆ ನಿಂತುಕೊಂಡರೆ ಇಡೀ ಮೈಸೂರ ಪಟ್ಟಣವೆಲ್ಲವೂ ಕಾಣುವದು. ರಾತ್ರಿಹೊತ್ತು ಈ ಬೆಟ್ಟದ ಮೇಲೆ ನಿಂತು ನೋಡಿದರೆ, ಮೈಸೂರಿನ ತುಂಬ ಹೊಳೆಯುತ್ತಿರುವ ವಿದ್ಯುತ್ತಿನ ದೀಪಗಳು ಬಹಳ ಅಂದ ಕಾಣುವವು. ಈ ದೃಶ್ಯವನ್ನುಎಷ್ಟು ಹೊತ್ತು ನೋಡಿದರೂ ಮನಸ್ಸು ತಣಿಯಲಾರದು. ಈಬೆಟ್ಟದಮೇಲೆ ಮಹಾರಾಜರ ಒಂದು ಅರಮನೆಯಿರುವದು. ಬೇಸಿಗೆ ಕಾಲದಲ್ಲಿ ಅವರು ಇದರಲ್ಲಿ ಇರುವರು.

ಜಗನ್ಮೋಹನ ವಸ್ತು ಸಂಗ್ರಹಾಲಯವು ಊರಲ್ಲಿಯೇ ಇರುವದು. ಇಲ್ಲಿ ಅನೇಕ ಐತಿಹಾಸಿಕ ಚಿತ್ರ ಗಳೂ, ಲೇಖಗಳೂ ಇರುವವು. ಪೂರ್ವ ಕಾಲದಲ್ಲಿಯ ಜನರ ವೇಷಭೂಷಣಗಳು, ಶಸ್ತ್ರಾಸ್ತ್ರಗಳು, ವಾದ್ಯಗಳು, ಅವರು ಉಪಯೋಗಿಸಿದ ಪಾತ್ರೆ ಇವೆಲ್ಲವನ್ನೂ ಇಲ್ಲಿ ನೋಡಬಹುದು.

ಪಶುಸಂಗ್ರಹಾಲಯದಲ್ಲಿ ಅನೇಕ ಪ್ರಾಣಿಗಳನ್ನು ಇಟ್ಟಿರುವರು. ಕಾಡುಕೋಣ, ಅನೇಕ ಪ್ರಕಾರದ ಗಿಳಿಗಳು, ನಾನಾ ಬಣ್ಣದ ಪಕ್ಷಿಗಳು, ಚಿಗರಿಗಳು, ಮಂಗಗಳು, ಹಾವು ಇವೆಲ್ಲವನ್ನೂ ಇಟ್ಟಿದ್ದಾರೆ.

ಮೈಸೂರಿಗೆ ಹೋದವರು ಪ್ರತಿಯೊಬ್ಬರೂ ತಪ್ಪದೇ ನೋಡಬೇಕಾದ ಸಂಗತಿಯೆಂದರೆ ಕನ್ನಂಬಾಡಿಯ ಆಣೆಕಟ್ಟು. ಕಾವೇರಿ ನದಿಗೆ ಪ್ರಚಂಡ ವಾದ ಆಣೆಕಟ್ಟು ಕಟ್ಟಿದ್ದಾರೆ. ಈ ಆಣೆಕಟ್ಟು ಸುಮಾರು ಒಂದುಮೈಲು ಉದ್ದವಾಗಿರುವದು. ಆಣೆಕಟ್ಟಿನಮೇಲೆ ಎರಡು ಮೋಟಾರುಗಳು ಓಡಾಡ ಬಲ್ಲವು. ಇಲ್ಲಿ ನಿಂತು ನೋಡಿದರೆ ಕಾವೇರಿನದಿಯು ಸಮುದ್ರದಂತೆ ತೋರು ವದು. ನೀರನ್ನು ಬಿಡುವದಕ್ಕಾಗಿ ಅನೇಕ ಕಮಾನುಗಳನ್ನು ಮಾಡಿರುವರು. ಹೆಚ್ಚಾದ ನೀರನ್ನು ಈ ಕಮಾನುಗಳ ಮುಖಾಂತರವಾಗಿ ಹೊರಗೆ ಬಿಡು ವರು. ಈ ಸಣ್ಣ ಕಮಾನುಗಳಿಂದ ಮಿಂಚಿನವೇಗದಿಂದ ನೀರು ಹೊರಗೆ ಹೋಗುವದು. ಹೊರಗೆ ಹೋಗುವ ನೀರು ಅತಿ ವೇಗದಿಂದ ಹೊರಗೆ ಬರು ವದರಿಂದ, ನೀರು ತೇಜಃಪುಂಜವಾದ ಅನೇಕ ನಕ್ಷತ್ರಗಳ ಗುಂಪಿನಂತೆ ತೋರುವದು.

ಆಣೇಕಟ್ಟಿನ ಒಂದು ಬದಿಗೆ ಕಾವೇರಮ್ಮನ ಮೂರ್ತಿಯನ್ನು ಮಾಡಿರು ವರು. ಇದರ ಸಮೀಪದಲ್ಲಿಯೇ ಉದ್ಯಾನವು ಇರುವದು. ಈ ಉದ್ಯಾನ ದಲ್ಲಿ ಎಲ್ಲ ಬಣ್ಣದ ವಿದ್ಯುತ್ತಿನ ದೀಪಗಳನ್ನು ಹಚ್ಚುವರು. ನೀರಿನಲ್ಲಿಯೂ ನಾನಾತರದ ದೀಪಗಳನ್ನು ನೋಡಬಹುದು. ಈ ಉದ್ಯಾನದಲ್ಲಿದ್ದಾಗ ನಾವು ಭೂಮಿಯ ಮೇಲಿರುವೆವೋ ಅಥವಾ ಮತ್ತೆ ಯಾವದಾದರೂ ಬೇರೆ ಲೋಕಕ್ಕೆ ಬಂದಿರುವೆವೋ ಎಂದು ಭಾಸವಾಗುವದು. ಆದಿತ್ಯವಾರ ಸಂಜೆಯ ಮುಂದೆ ಇಲ್ಲಿ 'ಬ್ಯಾಂಡ' ಬಾರಿಸುವರು. ಈ ಸೌಂದರ್ಯದ ಜೊತೆಗೆ ಸಂಗೀತ ಬೇರೆ! ಹಾಲಿಗೆ ಸಕ್ಕರೆ ಕೂಡಿಸಿದಂತಾಗುವದು!!

ಇಲ್ಲಿಯ ಮಹಾರಾಜಾ ಕಾಲೇಜು, ವಿಶ್ವವಿದ್ಯಾನಿಲಯ, ಆಕಾಶವಾಣಿ ಕೇಂದ್ರ ಮುಂತಾದ ಕಟ್ಟಡಗಳೂ ಸುಂದರವಾಗಿವೆ. ಮೈಸೂರ ವಿಶ್ವವಿದ್ಯಾ ನಿಲಯವು ಕನ್ನಡ ಭಾಷೆಯ, ಸಂಸ್ಕೃತಿಯ ಉನ್ನತಿಗಾಗಿ ಮಾಡುತ್ತಿರುವ ಪ್ರಯತ್ನವು ಅಮೋಘವಾಗಿದೆ.

## ೨೩. ನಾನು ಮಾಡಿದ ಪ್ರವಾಸ

ನಮ್ಮ ಶಾಲೆಯ ಹುಡುಗರೆಲ್ಲರೂ ಕೂಡಿ ಗೋವೆಯನ್ನು ನೋಡಲಿಕ್ಕೆ ಹೊರಟೆವು. ಧಾರವಾಡದಲ್ಲಿ ಒಂದು ಡಬ್ಬಿಯನ್ನೇ ಆಕ್ರಮಿಸಿದೆವು. ನಾವು

ಬಹಳ ಜನರಿರುವದನ್ನು ಕಂಡು ಯಾರೂ ನಮ್ಮ ಕಡೆಗೆ ಬರಲಿಲ್ಲ. ಲೋಂಡಾ ದಲ್ಲಿ ಇಳಿದು ಬಾಯಿ ಬೆಚ್ಚಗೆ ಮಾಡಿಕೊಂಡೆವು. ಲೋಂಡಾದಿಂದ ಗಾಡಿಯು ಮಾರ್ಮಗೋವಾ ಬಂದರಕ್ಕೆ ಹೋಗುವದು.

ಇಲ್ಲಿಂದ ಮುಂದೆ ಎತ್ತ ನೋಡಿದತ್ತ ಗುಡ್ಡವೇ ಕಾಣುವದು. ಕವಿ ಗಳಿಗೆ ಇದು ಬಹಳ ಮನೋಹರವಾದ ದೃಶ್ಯವು. ಗುಡ್ಡವೆಲ್ಲವೂ ಗಿಡಗಳಿಂದ ಮುಚ್ಚಿಹೋಗಿರುವದು. ಉಗಿಬಂಡಿಯು ಗುಡ್ಡದಲ್ಲಿ ಅನೇಕ ಪ್ರಕಾರವಾಗಿ ಗುಡ್ಡವನ್ನು ಸುತ್ತುಹಾಕುತ್ತ ಮೆಲ್ಲನೆ ಹೋಗುವದು. ದೂಧಸಾಗರ ಜಲ ಪಾತವನ್ನು ಗಾಡಿಯೊಳಗಿಂದಲೇ ನೋಡಿದೆವು. ನೀರು ಹಾಲಿನಂತೆ ಬೆಳ್ಳಗೆ ಕಾಣುತ್ತಿತ್ತು. ಅದ್ದರಿಂದಲೇ ಇದಕ್ಕೆ ದೂಧಸಾಗರವೆಂದು ಕರೆದಿರಬಹುದು. ಕ್ಯಾಸಲ್‌ರಾಕನ್ನು ಮುಟ್ಟಿದ ಬಳಿಕ ಗಾಡಿಯು ಬಹಳ ಹೊತ್ತು ನಿಲ್ಲುವದು. ಯಾಕಂದರೆ ಇಲ್ಲಿಂದ ಪೋರ್ತುಗೀಜರ ಸೀಮೆಯು ಪ್ರಾರಂಭವಾಗುವದು. ಕ್ಯಾಲೆಯಲ್ಲಿಯೂ ಮತ್ತೆ ನಮ್ಮ ಸಾಮಾನುಗಳನ್ನು ಪರೀಕ್ಷಿಸಿದರು. ಈ ಎರಡೂ ಸ್ಥಳಗಳಲ್ಲಿ ಬಂಡಿಯು ಬಹಳ ಹೊತ್ತು ನಿಲ್ಲುವದರಿಂದ ಬೇಸರ ಬರುವದು. ಆದರೆ ನಾವು ಸುಮ್ಮನೆ ಕೂಡ್ರುವವರೇ? ರೇಲ್ವೆ ನಿಲ್ದಾಣದ ತುಂಬ ಗಲಾಟೆ ಮಾಡಿದೆವು.

ಸಂಜೆಯ ಮುಂದೆ ಮಾರ್ಮಗೋವಾ ಬಂದರಕ್ಕೆ ಬಂದೆವು. ಇದಕ್ಕೂ ಮೊದಲು ನಾವು ಸಮುದ್ರವನ್ನು ನೋಡಿರಲಿಲ್ಲ. ಆ ಅಪಾರವಾದ ನೀರಿನ ರಾಶಿಯನ್ನು ಕಂಡು ಆಶ್ಚರ್ಯ ಪಟ್ಟೆವು. ಸಮುದ್ರ ತೆರೆಗಳು ದಂಡೆಗೆ ಬಂದು ಅಪ್ಪಳಿಸಿ ತಿರುಗಿ ಹೋಗುತ್ತಿದ್ದವು. ಎರಡು ಮೈಲುಗಳಿಂದಲೂ ಸಮುದ್ರದ ಸಪ್ಪಳವು ಕೇಳಬರುತ್ತಿತ್ತು. ಮಾರ್ಮಗೋವಾ ಬಂದರವು ತೀರ ಚಿಕ್ಕದಾಗಿ ರುವದು. ಬೇರೆ ದೇಶಗಳಿಂದ ಬಂದಿದ್ದ ಹಡಗಗಳನ್ನು ನೋಡಿದೆವು. ಹಡ ಗವು ಒಂದು ಊರಿನಂತಿರುವದು. ಇದರಲ್ಲಿ ಕಪ್ತಾನನ ಕೋಣೆಯು ಬಹಳ ಅಂದವಾಗಿರುವದು. ಸಮುದ್ರ ದಂಡೆಯ ಸಮೀಪದಲ್ಲಿಯೇ ಎರಡು ಮೂರು ಹಡಗಗಳು ನಿಂತು ಕೊಂಡಿದ್ದವು. ಹಡಗಗಳ ರಚನೆಯನ್ನು ಕಂಡು ಮನು ಷ್ಯನ ಬುದ್ಧಿ ಶಕ್ತಿಯ ಬಗ್ಗೆ ವಿಸ್ಮಯಗೊಂಡೆವು. ಎಷ್ಟು ಶೋಧಗಳನ್ನು ಮಾಡಿದರೂ ಮನುಷ್ಯನು ವಿಶ್ರಮಿಸಲಾರನು.

ಮಾರ್ಮಗೋವಾ ಬಂದರದಿಂದ ನಾವು ಗೋವೆಯ ರಾಜಧಾನಿ ಯಾದಪಣಜಿಗೆ ಬಂದೆವು, ಪಣಜಿಯು ಒಂದುಚಿಕ್ಕಪಟ್ಟಣವು. ಆದರೂ ಈ ಪಟ್ಟಣವು ಬಹಳ ಮನೋಹರವಾಗಿರುವದು. ಇಲ್ಲಿಯ ಕಟ್ಟಡಗಳು ದೊಡ್ಡ ವಿರುವದಿಲ್ಲ. ಆದರೂ ಅವುಗಳಲ್ಲಿ ಒಂದು ತರದ ಅಚ್ಚುಕಟ್ಟುತನ, ರಮ್ಯತೆ ಕಂಡುಬರುವವು. ಇಲ್ಲಿ ಸ್ವಚ್ಛತೆಯು ಒಡೆದು ಕಾಣುತ್ತದೆ. ನಮ್ಮ ಪಟ್ಟಣ ಗಳು ಹೀಗಾಗಬಾರದೇ? ಇಲ್ಲಿಯ ಚರ್ಚನ್ನು ನೋಡಿಕೊಂಡು ಹಳೆಯ ಗೋವೆಗೆ ತೆರಳಿದೆವು. ಇಲ್ಲಿ ಅನೇಕ ಕ್ರಿಸ್ತಸಾಧುಗಳ ಸಮಾಧಿಗಳಿರುವವು. ಅತಿ ಭವ್ಯವೂ, ರಮಣೀಯವೂ ಆದ ನೂರು ಹಳೆಯ ಪ್ರಾರ್ಥನಾ ಮಂದಿ ರಗಳಿರುವವು. ಮೊದಲಿನ ಕಾಲದಲ್ಲಿ ಸಾವಿರಾರು ಜನರು ಇಲ್ಲಿ ಪ್ರಾರ್ಥನೆ ಮಾಡುತ್ತಿದ್ದರಂತೆ

ಗೋವೆಯಲ್ಲಿ ಪಣಜಿಯು ರಾಜಧಾನಿಯಾದರೆ, ಮಡಗಾಂವ ವ್ಯಾಪಾರಕ್ಕೆ ಹೆಸರಾದದ್ದು. ಮಡಗಾಂವನ್ನು ನೋಡಿಕೊಂಡು ಮಂಗೇಶ ನಾಗೇಶ ಮೊದಲಾದ ಹಿಂದೂ ದೇವಾಲಯಗಳನ್ನು ನೋಡಲು ತೆರಳಿದೆವು. ಈ ಗುಡಿಗಳು ಬಹಳ ಭವ್ಯವಾಗಿರುವವು. ಈ ಗುಡಿಯ ಸುತ್ತಲೂ ಸೃಷ್ಟಿ ದೇವಿಯ ಮನೋಹರ ದೃಶ್ಯವಿರುವದು. ತಿರುಗಿ ನಮ್ಮೂರಿಗೆ ಬಂದೆವು.

## ೨೪. ನನ್ನ ಬಾಲ್ಯದ ಕೆಲವು ನೆನಹುಗಳು

ಶಾಲೆಯೆಂದರೆ ನನಗೆ ಜೈಲುವಾಸದಂತೆ ತೋರುತ್ತಿತ್ತು. ಆದ್ದ ರಿಂದ ಶಾಲೆಯ ಗಂಟೆಯಾದ ಕೂಡಲೇ ಎಲ್ಲಿಯಾದರೂ ಅಡಗಿಕೊಂಡು ಕುಳಿತುಕೊಳ್ಳುತ್ತಿದ್ದೆನು. ಎಲ್ಲಿ ಅಡಗಿ ಕುಳಿತರೂ ನನ್ನ ತಂದೆಯವರು ನನ್ನನ್ನು ಹುಡುಕದೆ ಬಿಡುತ್ತಿರಲಿಲ್ಲ. ಆದ್ದರಿಂದ ದಿನಾಲು ಒಂದೊಂದು ಸ್ಥಳದಲ್ಲಿ ಅಡಗಿಕೊಳ್ಳುತ್ತಿದ್ದೆನು. ನನ್ನ ಗೆಳೆಯನಾದ ಮಂಗಯ್ಯನು ದಿನಾಲು ಒಂದು ಬೇರೆ ಸ್ಥಳವನ್ನು ಹುಡುಕುತ್ತಿದ್ದನು. ಅವನೂ ನನ್ನಂತೆಯೇ ಶಾಲೆ ಯನ್ನು ತಪ್ಪಿಸುವದರಲ್ಲಿ ಚಾಣಾಕ್ಷನಾಗಿದ್ದನು. ನಮ್ಮ ಊರ ಮುಂದೆ ತೋಟವಿತ್ತು. ಆ ತೋಟದಲ್ಲಿ ಅನೇಕ ಹಣ್ಣಿನ ಗಿಡಗಳಿದ್ದವು. ನಾವಿಬ್ಬರೂ ಕೂಡಿ ಯಾವದಾದರೊಂದು ಗಿಡದಲ್ಲಿ ಹತ್ತಿ ಕುಳಿತುಕೊಳ್ಳುತ್ತಿದ್ದೆವು.

ಶಾಲೆಯ ಗಂಟೆಯಾಗುವದರಲ್ಲಿಯೇ ನಾವಿಬ್ಬರೂ ಮನೆಯನ್ನು ಬಿಡುತ್ತಿದ್ದೆವು. ಶಾಲೆಗೆ ಹೋಗುವೆವೆಂದು ಮನೆಯಲ್ಲಿ ಹೇಳಿ ನಮ್ಮ ತೋಟಕ್ಕೆ ಓಡಿಹೋಗುತ್ತಿದ್ದೆವು. ಶಾಲೆಯು ಬಿಡುವ ಹೊತ್ತಿಗೆ ತಿರುಗಿ ಮನೆಗೆ ಬರುತ್ತಿದ್ದೆವು. ಆದರೆ ನಮ್ಮ ಶಿಕ್ಷಕರು ನಾವು ಶಾಲೆಗೆ ಬರುವದಿಲ್ಲವೆಂದು ನಮ್ಮ ತಂದೆಯವರ ಮುಂದೆ ಹೇಳಿದರು. ನಮ್ಮ ತಂದೆಯವರು ಬಹಳ ಕೋಪದ ಸ್ವಭಾವದವರಾಗಿದ್ದರು. ನಾನು ದಿನಾಲು ಶಾಲೆಗೆ ಹೋಗುವೆನೆಂದೇ ಅವರು ಭಾವಿಸಿದ್ದರು. ಶಿಕ್ಷಕರ ಮಾತನ್ನು ಕೇಳಿ ಅವರಿಗೆ ಬಹಳ ಕೋಪ ಬಂದಿತು. ಅವರು ತಮ್ಮ ಕೈಯಲ್ಲಿಯ ಬಡಿಗೆಯನ್ನು ನನ್ನ ಕಡೆಗೆ ಒಗೆದರು. ಆದರೆ ಅದು ದೈವ ಯೋಗದಿಂದ ನನಗೆ ಕೂಡಲಿಲ್ಲ. ತಂದೆಯವರು ಬಡಿಯುವರೆಂದು ತಿಳಿದು ನನ್ನ ತಾಯಿಯು ನನ್ನನ್ನು ಒಳಗೆ ಕರೆದುಕೊಂಡು ಹೋದಳು. ದಿನಾಲು ನನ್ನನ್ನು ಶಾಲೆಗೆ ಕರೆದುಕೊಂಡುಹೋಗಲು ಕೆಲವು ಹುಡುಗರನ್ನು ಕಳಿಸಬೇಕಾಗಿ ಹೇಳಿದರು. ಇದರಿಂದ ದಿನಾಲು ಶಾಲೆಗೆ ಕರೆಯಲು ಹುಡುಗರು ಬರತೊಡಗಿದರು. ಅವರು ಬೇಗನೆ ಬರುತ್ತಿದ್ದುದರಿಂದ ನಾನು ಎಲ್ಲಿಯಾದರೂ ಓಡಿಹೋಗಬೇಕೆಂದರೆ ಸಾಧ್ಯವಾಗುತ್ತಿರಲಿಲ್ಲ.

ನಮ್ಮ ಹಿತ್ತಲಲ್ಲಿ ಒಂದು ನೀರು ತುಂಬುವ ಹೌದು ಇತ್ತು. ಆ ಹೌದು ಬಹಳ ಹಳೆಯದಾದ್ದರಿಂದಲೂ, ಬಹಳ ದೊಡ್ಡದಾಗಿದ್ದದರಿಂದಲೂ ಅದರಲ್ಲಿ ನೀರನ್ನು ತುಂಬುತ್ತಿರಲಿಲ್ಲ. ನಾನು ಅದರಲ್ಲಿ ಅಡಗಿಕೊಂಡು ಕುಳಿತೆನು. ಮನೆಯವರೆಲ್ಲರೂ ನನ್ನನ್ನು ಹುಡುಕಾಡ ತೊಡಗಿದರು. ನಾನು ಸಪ್ಪಳವಾಗದಂತೆ ಅದರಲ್ಲಿ ಕುಳಿತುಕೊಂಡಿದ್ದೆನು. ನನ್ನ ತಂಗಿಯು ಅಲ್ಲಿ ಯಾವದೋ ಕೆಲಸಕ್ಕಾಗಿ ಬಂದಿದ್ದಳು. ನನ್ನನ್ನು ನೋಡಿ ನಮ್ಮ ತಂದೆಗೆ ತಿಳಿಸಿದಳು. ಅವಳು ನನ್ನನ್ನುನೋಡಿದ್ದು ನನಗೆ ಗೊತ್ತಾಗಲಿಲ್ಲ. ನಮ್ಮ ತಂದೆಯವರು ಕೈಯಲ್ಲಿ ಅಡಸಾಲಿನ ಚಬಕವನ್ನು ಹಿಡಿದುಕೊಂಡು ಅಲ್ಲಿಗೆಬಂದರು. ನನ್ನನ್ನು ಕಂಡು ಒಳಿತಾಗಿ ಬೀಸಿದರು. ನನಗೆ ಪೆಟ್ಟು ವಿಶೇಷವಾಗಿ ತಾಕಿರಲಿಲ್ಲ. ನಾನು ಪೆಟ್ಟು ಹತ್ತದವನಂತೆ ನಟಿಸಿದರೆ ಮತ್ತೆ ಏಟು ಬೀಳುವವೆಂದು ತಿಳಿದು, ಮೂರ್ಛೆಬಿದ್ದವನಂತೆ ಹೌದಿನಲ್ಲಿ ಉರುಳಿದೆನು. ಇದರಿಂದ ನನ್ನ ತಂದೆಯವರು ಗಾಬರಿಯಾದರು. ಎಲ್ಲಿಯಾದರೂ ಆಯಕಟ್ಟಿನ ಸ್ಥಳಕ್ಕೆ ಹೊಡೆತ ಬಿದ್ದಿರಬೇಕೆಂದು ಅವರು ಭಾವಿಸಿದರು. ಅವರಕೋಪವು

ಕಡಿಮೆಯಾಯಿತು. ನನ್ನ ನೆತ್ತಿಗೆ ನೀರು ಬಡಿದರು. ನಮ್ಮ ಮನೆಯುವರೆಲ್ಲರೂ ಅಲ್ಲಿ ನೆರೆದಿದ್ದರು. ನಮ್ಮ ತಂದೆಯುವರು ಹಿಂದೆ ಎಂದೂ ಇಷ್ಟು ಪ್ರೀತಿಯಿಂದ ಕಂಡಿರಲಿಲ್ಲ; ಅಷ್ಟು ಮಮತೆಯಿಂದ ನನ್ನನ್ನು ಎತ್ತಿಕೊಂಡರು ಮುಂದೆ ಅವರು ನನ್ನನ್ನು ಎಂದೂ ಹೊಡೆಯುಲಿಲ್ಲ! ಅವರು ಬಡಿಯುವದನ್ನು ಬಿಟ್ಟಬಳಿಕ ಶಾಲೆಗೆ ಹೋಗಲು ಪ್ರಾರಂಭಿಸಿದೆನು.

ನಾವು ಅಭ್ಯಾಸಮಾಡುವದಕ್ಕಾಗಿ ಎಂದು ಒಂದುಕೋಣೆಯನ್ನು ಹಿಡಿದೆವು. ಅಭ್ಯಾಸಕ್ಕಿಂತಲೂ ಹರಟೆಯೇಹೆಚ್ಚಾಗುತ್ತಿತ್ತು. ಮುಂಜಾನೆಬೇಗನೆ ಏಳೋಣವೆಂದು ಎಲ್ಲರೂಬೇಗನೆ ಮಲಗಿಕೊಳ್ಳುತ್ತಿದ್ದೆವು. ಆದರೆಮುಂಜಾನೆ ಯಾರೂ ಬೇಗನೆ ಏಳುತ್ತಿರಲಿಲ್ಲ. ದಿನಾಲು ಬೇಗನೆ ಏಳುವದಾಗಿ ಪ್ರತಿಜ್ಞೆ ಮಾಡುತ್ತಿದ್ದೆವು. ಆದರೆ ನಿದ್ದೆ ಬಂದಿತೆಂದರೆ ನಮಗೆ ಎಚ್ಚರವೇ ಆಗುತ್ತಿರಲಿಲ್ಲ. ಮುಂಜಾನೆ ಬೇಗನೆ ಎದ್ದೆವೆಂದರೆ ನಿದ್ದೆ ಬರುತ್ತಿತ್ತು. ಅದಕ್ಕಾಗಿ ಮುಂಜಾನೆ ಎದ್ದಕೂಡಲೇ ತಿರುಗಾಡಲು ಹೋಗಬೇಕೆಂದು ನಿಶ್ಚಯಿಸಿದೆವು.

ಮುಂಜಾನೆ ಎದ್ದು ತಿರುಗಾಡಲಿಕ್ಕೆ ಹೋದೆವೆಂದರೆ ಬಹಳ ಹೊತ್ತು ಅದರಲ್ಲಿಯೇ ಕಳೆಯುತ್ತಿದ್ದೆವು. ಮನೆಗೆ ಬರುವಷ್ಟರಲ್ಲಿ ಹೊತ್ತೇರುತ್ತಿತ್ತು. ಒಂದು ದಿವಸ ಮುಂಜಾನೆ ತಿರುಗಾಡಲು ಹೋದಾಗ ಹೊಲದಲ್ಲಿ ನೆಲಗಡಲೆಯ ಬಳ್ಳಿಗಳು ಕಂಡವು. ನಮಗೆ ನೆಲಗಡಲೆ ಎಂದರೆ ಪ್ರಾಣ. ಬಾಯಲ್ಲಿ ನೀರು ಬಂದಿತು. ಬಳ್ಳಿಯನ್ನು ಕಿತ್ತಬೇಕೆಂದು ನಿಶ್ಚಯಿಸಿದೆವು. ಮನಸ್ಸಿನಲ್ಲಿ ಬಂದ ಬಳಿಕ ಕಾರ್ಯಮಾಡುವದಕ್ಕೆ ತಡಹಿಡಿಯುವದೇ ? ಎಲ್ಲರೂ ಕೂಡಿ ಕಿತ್ತತೊಡಗಿದೆವು. ನಾವು ಐದಾರುಹುಡುಗರಿದ್ದೆವು. ಒಂದು ಸಾಲನ್ನೇ ಕಿತ್ತಿದೆವು. ಅಷ್ಟರಲ್ಲಿ ಹೊಲದವನು ಓಡಿಬಂದನು. ನಮಗೆ ದಾರಿಕಾಣದಂತಾಯಿತು. ಮನಸ್ಸು ತಿಳಿದತ್ತ ಓಡಿದೆವು. ಅವನು ನಮ್ಮನ್ನು ಬೆನ್ನುಹತ್ತಿ ಹಿಡಿದನು. ಅವನು ತನ್ನ ಗುಡಿಸಲಲ್ಲಿ ಮಲಗಿಕೊಂಡಿದ್ದನು. ನಮ್ಮ ಸದ್ದು ಕೇಳಿ ಹೊರಗೆಬಂದನು, ನಮ್ಮನ್ನು ಹಾಗೆಯೇ ಅವನುಬಿಡುವದಿಲ್ಲವೆಂದುತೋರಿತು. ಅವನ ಗುಡಿಸಲಿನ ಎದುರಿನಲ್ಲಿಯೇ ಒಂದು ಹುಣಸೆಯ ಮರವಿತ್ತು. ಆ ಹುಣಸೆಯ ಮರಕ್ಕೆ ತೂಗುಕಟ್ಟುವದಾಗಿ ಹೆದರಿಸಿದನು. ನಮ್ಮ ಗುಂಪಿನಲ್ಲಿ ಕೆಲವರು ಆಕಳ ಜಾತಿಯುವರು. ಅವರು ದೊಡ್ಡ ಧ್ವನಿಯಿಂದ ಅಳಲು

ಪ್ರಾರಂಭಿಸಿದರು. ನಮಗೆ ಅವರ ಅಳುವನ್ನು ಕಂಡು ನಗು ಬಂದಿತು. ಯಾಕಂದರೆ ಹೊಲದವನು ನಮ್ಮನ್ನು ಹುಣಸೆಯ ಮರಕ್ಕೆ ತೂಗುಗಟ್ಟಲಾರ ನೆಂದು ನಮಗೆ ಚೆನ್ನಾಗಿಗೊತ್ತು. ಆದರೂ ಬಹುಮತದಂತೆ ನಾನೂ ನಡೆಯ ಬೇಕಲ್ಲವೇ? ಅವರ ಸಂಗಡ ನಾನೂ ದನಿಗೂಡಿಸಿದೆನು. ಇನ್ನೊಮ್ಮೆ ತುಡುಗು ಮಾಡುವದಿಲ್ಲವೆಂದು ಆಣೆ ಮಾಡಿರಿ ಎಂದನು. ನಾವು ಅಳುತ್ತಲೇ ಆಣೆ ಮಾಡಿದೆವು. ನಾವು ಅಲ್ಲಿಂದ ಪಾರಾಗಿ, ಅವನನ್ನು ಶಪಿಸುತ್ತ ಓಡಿಬಂದೆವು.

## ೨೫. ನನ್ನ ಮೆಚ್ಚಿಗೆಯ ಕವಿ

ಲೋಕದಲ್ಲಿ ಎಷ್ಟು ಜನರಿರುವರೋ ಅಷ್ಟು ರುಚಿಗಳುಂಟು. ಒಬ್ಬನಿಗೆ ಕಾವ್ಯ ಸೇರಿದರೆ, ಮತ್ತೊಬ್ಬನಿಗೆ ನಾಟಕ ಸೇರುತ್ತದೆ. ಮತ್ತೊಬ್ಬನಿಗೆ ಸಂಗೀತದಮೇಲೆ ಆಶೆ. ಔರಂಗಜೇಬನಂತೆ ಸಂಗೀತದ ವೈರಿಗಳೂ ಇರುವರು. ಅವರ ಸ್ವಭಾವವೇ ಹಾಗಿರುವದರಿಂದ ಅವರಿಗೆ ಅದೇ ಯಾಕೆ ಸೇರುವದೆಂಬು ದಕ್ಕೆ ಕಾರಣ ಹೇಳಲಾರೆವು. ಸಾಹಿತ್ಯದಲ್ಲಿ ಪ್ರೀತಿಯಿದ್ದವರಿಗೆ ಒಬ್ಬ ಕವಿಯೇ ಎಲ್ಲರ ಮೆಚ್ಚಿಗೆಯ ಕವಿಯಾಗಲಾರನು. ಒಬ್ಬನಿಗೆ ಷಟ್ಪದಿ ಸೇರಿದರೆ ಮತ್ತೊಬ್ಬನಿಗೆ ಸಂಸ್ಕೃತ ವೃತ್ತಗಳು ಮೆಚ್ಚಿಗೆಯವಾಗಿರಬಹುದು. ಅದೇನೆ ಇರಲಿ ನನಗೆ ಷಟ್ಪದಿಯೆಂದರೆ ಬಲು ಇಷ್ಟವಾದದ್ದು. ಷಟ್ಪದಿಯ ಕಾವ್ಯವು ರಾಘವಾಂಕನಿಂದ ಆರಂಭವಾಗದಿದ್ದರೂ ಅದರ ಪುನರುಜ್ಜೀವನವನ್ನು ಮಾಡಿದವನು ರಾಘವಾಂಕನೇ. ಷಟ್ಪದಿಯಲ್ಲಿ ಮಹಾಕಾವ್ಯ ಬರೆಯಬಹು ದೆಂಬದನ್ನು ಅವನು ಮೊದಲು ತೋರಿಸಿಕೊಟ್ಟನು. ಕುಮಾರವ್ಯಾಸನು ಅದೇ ಮಾರ್ಗವನ್ನು ಮುಂದೆ ಸಾಗಿಸಿ ಭಾಮಿನೀಷಟ್ಪದಿಯಲ್ಲಿ ಮಹಾಕಾವ್ಯ ಬರೆದು ಅಜರಾಮರನಾದನು. ಕುಮಾರವ್ಯಾಸನ ಕಾವ್ಯವು ಗಾತ್ರದಲ್ಲಿಯೂ ಗುಣ ದಲ್ಲಿಯೂ ಮಹಾಕಾವ್ಯವೆಂದು ಕರೆಯಲು ಯೋಗ್ಯವಾದದ್ದು. ಇವನೇ ನನ್ನ ಮೆಚ್ಚಿಗೆಯ ಕವಿ.

ಕುಮಾರವ್ಯಾಸನು ಗದುಗಿನ ವೀರನಾರಾಯಣನ ಭಕ್ತನು. ಅವನ ಹೆಸರು ನಾರಾಯಣಪ್ಪನಾದರೂ ಕುಮಾರವ್ಯಾಸನೆಂದೇ ಪ್ರಸಿದ್ಧನಾಗಿರು ವನು. ಕುಮಾರವ್ಯಾಸನೆಂಬುದು ಜನರು ಕೊಟ್ಟ ಬಿರುದಾಗಿರಬೇಕು. ಅವನ ಜೀವನದ ವಿಷಯವಾಗಿ ನಮಗೆ ಯಾವ ಸಂಗತಿಗಳೂ ಗೊತ್ತಾಗಿಲ್ಲ. ಕೇವಲ

ಅವನ ಕಾವ್ಯದಿಂದಲೇ ನಾವು ಅವನ ಜೀವನವನ್ನು ಅರಿತುಕೊಳ್ಳಬೇಕಾಗಿದೆ. ಕುಮಾರವ್ಯಾಸ ತನ್ನ ವಿಷಯವಾಗಿ ಯಾವ ಮಾತನ್ನೂ ಹೇಳುವದಿಲ್ಲ. ಅವನ ಕಾವ್ಯವನ್ನು ಓದಿದರೆ ಅವನು ಕೃಷ್ಣನ ಪರಮಭಕ್ತನಾಗಿದ್ದಂತೆ ತೋರುವದು. ಈ ಕಾವ್ಯ ಬರೆದವನು "ವೀರನಾರಾಯಣ" ಲಿಪಿಕಾರ ಮಾತ್ರ ಕುಮಾರ ವ್ಯಾಸನೆಂದು ಹೇಳಿರುವನು. ಅವನ ಕಾವ್ಯವನ್ನು ಓದಿದರೆ ಭಗವತ್ ಪ್ರೇರಣೆಯಿಂದಲೇ ಇಂಥ ಕಾವ್ಯ ಬರೆಯುವದು ಸಾಧ್ಯವೆಂಬದು ಗೊತ್ತಾಗು ಗುವದು. ಜಗತ್ತಿನಲ್ಲಿಯ ಎಲ್ಲ ಮಹಾಕಾವ್ಯಗಳಾದರೂ ಭಗವತ್ ಪ್ರೇರಣೆ ಯಿಂದಲೇ ನಿರ್ಮಾಣವಾಗಿವೆ. ಕುಮಾರವ್ಯಾಸನು ತನ್ನ ಕಾವ್ಯದಲ್ಲಿರುವ ಗುಣಗಳನ್ನು ಈ ರೀತಿಯಾಗಿ ಹೇಳಿದ್ದಾನೆ:—

ಅರಸುಗಳಿಗಿದು ವೀರ ದ್ವಿಜರಿಗೆ
ಪರಮವೇದದ ಸಾರ ಯೋಗೀ
ಶ್ವರರ ತತ್ವ ವಿಚಾರ ಮಂತ್ರೀ ಜನಕೆ ಬುದ್ಧಿ ಗುಣ
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ.

ಈ ಕಾವ್ಯ ಬೇರೆ ಬೇರೆ ಜನರಿಗೆ ಬೇರೆ ಬೇರೆ ರೀತಿಯಿಂದ ಪ್ರಯೋಜನ ಕಾರಿಯಾಗಿರಬಹುದು. ನನಗೆ ಮಾತ್ರ ಈ ಕಾವ್ಯ ನವರಸಗಳಿಂದ ಕೂಡಿದ ಕಾವ್ಯವಾಗಿದೆ. ಸನ್ನಿವೇಶಕ್ಕೆ ತಕ್ಕಂತೆ ಕುಮಾರವ್ಯಾಸನು ಪಾತ್ರಗಳನ್ನು ನಿರ್ಮಿಸಬಲ್ಲನು. ಕೃಷ್ಣನೇ ಅವನ ಕಾವ್ಯಕ್ಕೆ ನಾಯಕನಾಗಿರುವದರಿಂದ ಕೃಷ್ಣನ ವರ್ಣನೆ ಬಂದ ಕಡೆಯಲೆಲ್ಲ ನಾರಾಣಪ್ಪನು ಮೈಮರೆಯುತ್ತಾನೆ. ಒಂದು ಪದ್ಯದಲ್ಲಿ ಅವನ ವರ್ಣನೆ ಮಾಡಿದರೆ ಅವನಿಗೆ ಸಮಾಧಾನವಾಗುವ ದಿಲ್ಲ. ಕೃಷ್ಣ ಬಂದನು ಎಂದು ಹೇಳಬೇಕಾದರೆ, ಕೃಷ್ಣ ಬಂದನು ಮುರಾರಿ ಬಂದನು ಎಂದು ಹಲವು ಬಗೆಯಿಂದ ವರ್ಣನೆ ಮಾಡುವನು. ಹಲವಾರು ಪದ್ಯಗಳಲ್ಲಿ ಕೃಷ್ಣನ ವರ್ಣನೆ ಮಾಡಿ ಕೃಷ್ಣನ ಎದುರಾಳಿಗಳನ್ನು ಸೋಲಿಸಿಬಿಡುವನು. ಗಂಗಾ ಪ್ರವಾಹದಂತೆ ಅವನ ಭಕ್ತಿರಸವು ಓತಪ್ರೋತ ವಾಗಿ ಹರಿಯುವದು. ಅದು ಅಖಂಡವಾದದ್ದು. ಭಕ್ತರಿಗೆಅದರಿಂದ ಬೇಸರಿಕೆ

ಬರುವದಿಲ್ಲ. ಅನೇಕ ನವೀನವಾದ ರೀತಿಗಳಿಂದ ಕೃಷ್ಣನ ವರ್ಣನೆ ಮಾಡುವದರಿಂದ ರಸಿಕರಿಗೂ ಬೇಸರಿಕೆ ಬರಲಾರದು.

ಕುಮಾರವ್ಯಾಸನು ಭಕ್ತಿರಸದಲ್ಲಿ ಎತ್ತಿದ ಕೈಯಿದ್ದಂತೆ ಹಾಸ್ಯರಸದ ಲ್ಲಿಯೂ ತನ್ನ ಹಾಸ್ಯಪ್ರಿಯತೆಯನ್ನು ತೋರಿಸಿದ್ದಾನೆ. ಸಮಯ ಬಂದಾಗಲೆಲ್ಲ ಹಾಸ್ಯರಸವನ್ನು ಉಪಯೋಗಿಸುತ್ತಾನೆ. ದ್ರೌಪದಿಯ ಸ್ವಯಂವರ ಕಾಲದಲ್ಲಿ ಬ್ರಾಹ್ಮಣರ ಸಾಲಲ್ಲಿ ಕುಳಿತಿದ್ದ ಅರ್ಜುನನು ಧನುವನ್ನು ಭಂಗಿಸಲು ಏಳುವನು. ಅರ್ಜುನನ ನಿಜ ರೂಪವನ್ನು ಬ್ರಾಹ್ಮಣರು ಅರಿಯರು. ಅವರು ಅರ್ಜುನನನ್ನು ಕುರಿತು ಹಾಸ್ಯಮಾಡುವರು.

ಧನುತನಗೆ ನೆಗಹಲ್ಕೆ ಕೃಷ್ಣಾ
ಜಿನವೊ ಸಾಲಿಗ್ರಾಮದೇವರೊ
ವಿನುತ ತುಲಸಿಯೊ ಕುಶೆಯೊ ದರ್ಭೆಯೊ ಸಮಿಧೆಗಳ ಹೊರೆಯೊ
ನನೆದ ತಿಲವೋ ಮೇಣಿದೌಪಾ
ಸನದ ಕೊಳಿವಿಯೊ ಬಣಗುವಿಪ್ರನ
ನೆನಹ ನೋಡಿರಿ ಘನವಲಾ ದ್ರೌಪದಿಯ ಸೌಭಾಗ್ಯ.

ಧನಸ್ಸನ್ನು ಭಂಗಮಾಡುವದಕ್ಕಾಗಿ ಬ್ರಾಹ್ಮಣರನ್ನು ಕರೆಯಲು 'ಅರವಿಂದ ವಂದನೆಯ ತೊಡಕು ನಮಗೇಕೆ ಎಂಬರು.' ತಾವು ಯಾವ ಕೆಲಸದಲ್ಲಿ ಪ್ರವೀಣರು ಎಂಬುದನ್ನು ಬಹಳಮಾರ್ಮಿಕವಾಗಿ ಹೇಳಿದ್ದಾರೆ. ನಾನಾತರದ ಮಂಡಿಗೆ, ಪಾಯಸ, ಅನೇಕ ಪ್ರಕಾರದ ಪಕ್ವಾನ್ನಗಳನ್ನು ಮಾಡಿ ಅವರ ಸಾಮರ್ಥ್ಯ ನೋಡಬೇಕಂತೆ! ಕುಮಾರವ್ಯಾಸ ಅವರ ಬಾಯಿಂದಲೇ ಅವರ ಸ್ವಭಾವಕ್ಕೆ ಕನ್ನಡಿ ಹಿಡಿದಿರುವನು. ಉತ್ತರ ಕುಮಾರನ ಪಾತ್ರ ವಂತೂ ಹಾಸ್ಯಭರಿತವಾಗಿದೆ. ಉತ್ತರ ಕುಮಾರ ಹೆಂಗಳೆದುರಿನಲ್ಲಿ ತನ್ನ ಪೌರುಷವನ್ನು ಹೇಳಿಕೊಳ್ಳುತ್ತಾನೆ. ನನಗೆ ಸರಿಯಾದ ಸಾರಥಿಯಿಲ್ಲ. ಇಲ್ಲದಿದ್ದರೆ ಕೌರವರ ಸೇನೆಯನ್ನು ಕ್ಷಣಾರ್ಧದಲ್ಲಿ ನಾಶಮಾಡುತ್ತಿದ್ದೆನು. ಎಂದು ಜಂಬ ಕೊಚ್ಚುತ್ತಾನೆ. ಬೃಹನ್ನಳೆ ಸಾರಥಿಯಾಗುವಳು. ಅರ್ಜುನನು ಬೃಹನ್ನಳೆಯ ವೇಷವನ್ನು ಹಾಕಿಕೊಂಡಿರುವನು. ಅರ್ಜುನನು ಉತ್ತರ ಕುಮಾರನನ್ನು ಯುದ್ಧಕ್ಕೆ ಕರೆದುಕೊಂಡು ಹೋಗುವನು. ಯುದ್ಧ

ಭೂಮಿಯನ್ನು ನೋಡಿದಕೂಡಲೇ ಉತ್ತರನ ಶರೀರವು ಭಯದಿಂದ ನಡುಗ ತೊಡಗುವದು. ಎಂದೂ ಯುದ್ಧಭೂಮಿಯನ್ನು ನೋಡಿರದ ಅವನು ಪ್ರಾಣ ಭಯದಿಂದ ರಥವನ್ನು ಹಿಂದೆ ತಿರುಗಿಸಬೇಕೆಂದು ಅರ್ಜುನನಿಗೆ ಹೇಳುವನು. ಯುದ್ಧಭೂಮಿಯಲ್ಲಿ ಮರಣಹೊಂದಿದರೆ ಅಪ್ಸರಾ ಸ್ತ್ರೀಯರು ನಿನ್ನ ಸೇವಕರಾಗುವರು ಎಂದು ಅರ್ಜುನನು ನುಡಿಯಲು ಉತ್ತರ ಕುಮಾರನು ಸುರರ ಸತಿಯರನೊಲ್ಲೆವು ಎಮಗೆ ಎಮ್ಮ ಅರಮನೆಯರ ನಾರಿಯರೆ ಸಾಕು ಎಂದು ಉತ್ತರ ಕೊಡುವನು. ಯುದ್ಧಭೂಮಿಯಲ್ಲಿ ಅರ್ಜುನ ಮತ್ತು ಉತ್ತರ ಕುಮಾರರಲ್ಲಿ ನಡೆದಿರುವ ಸಂಭಾಷಣೆಯು ಕುಮಾರವ್ಯಾಸನ ಹಾಸ್ಯ ದೃಷ್ಟಿಗೆ ಸಾಕ್ಷಿಯಾಗಿದೆ. ಉತ್ತರಕುಮಾರ ಮತ್ತು ಅರ್ಜುನ ಇವರಿಬ್ಬರಲ್ಲಿ ನಡೆದ ಸಂಭಾಷಣೆಯನ್ನು ಸ್ವಲ್ಪದರಲ್ಲಿ ಅವಲೋಕಿಸೋಣ:-

**ಅರ್ಜುನ:**- ಸುರೇಂದ್ರನು ನೆಲವನು ಪರಾಕು ಹೇಳುವನು, ವೀರಸ್ವರ್ಗ ವಹುದು.

**ಉತ್ತರ:**— ಎಮ್ಮರಸುತನ ಎಮಗಿಂದ್ರಪದ ನೀ ಬಿಟ್ಟು ಕಳುಹು.

**ಅರ್ಜುನ:**- ಗಾಯವಡೆಯದೆ ಕಾಲುವೇಗವ ತೊರಿದೊಡೆ ನೀನೋಲಗದೊಳಗೆ ಎಂತಕಟ ನಾಚದೆ ಕುಳಿತಿಹೆಯೋ?

**ಉತ್ತರ:**— ಕಿತ್ತುಕೊಂಡಾ ನಾಚಿಕೆಗೆ ನೆರೆ ಕುತ್ತಿಕೊಳಬೇಕು ಎಂಬ ಗಾದೆಯನಿತ್ತ ಹೊದ್ದಿಸಬೇಡ ನಾವಂಜುವೆವು ಕಾಳಗಕೆ.

**ಅರ್ಜುನ:**- ಸುಡುಸುಡೆಲವೋ ರಾಜಬಾಹಿರ! ನಡೆ ವರೂಥದ ಹೊರಗೆ ಕಾಡಲು ಬೇಡ ಬಾ.

**ಉತ್ತರ:**— ಎಲೆ ಬೃಹನ್ನಳೆ ಎಮ್ಮ ಬೊಪ್ಪನು ಸಲಹಿದಕೆ ಕೈತೋರಿದೆ. ಕಲುಮನವಲಾ ನಿನ್ನದು.

**ಅರ್ಜುನ:**- ಸಾರಥಿಯಾಗು ಬಾ. ಗಳಹಿದರೆ ಕಟವಾಯ ಕೊಯ್ವೆನು.

**ಉತ್ತರ:**— ಸಾರಥಿ! ಕೆಡಿಸದಿರು ವಂಶವನು; ರಾಯನ ಹಿಂದೆ ಹೆಸರಿಲ್ಲ. ಮಹಾಹವವೆನಗೆ ನೂಕದು; ತೊಡೆಯದಿರು ನೊಸಲಕ್ಕರವ.

ಅರ್ಜುನನು ಸುಭದ್ರೆಯನ್ನು ಮದುವೆಯಾಗುವದಕ್ಕಾಗಿ ದ್ವಾರಕಿಗೆ ಬಂದಾಗ- ಬಾಲಕಿಗೆಸನ್ಯಾಸಿ ದೇವರ ಮೇಲೆ ಮನವಾಯ್ತು; ಅವರಿಗಾಕೆಯ ಮೇಲೆ ನೆಲಿಸಿತು ಚಿತ್ತ; ಕಾಣೆನು ಜಪಪವಮಾಧಿಗಳ.

ಜರಾಸಂಧ ಕೃಷ್ಣನನ್ನು ಕುರಿತು- ಆವಂಜುನೆವು, ರಣನಾಟಕ ಪಲಾಯನ ಪಂಡಿತರು ನೀವೆಂದನಾಮಗಧ.

ಈ ರೀತಿಯಾದ ಹಾಸ್ಯವನ್ನು ಕುಮಾರವ್ಯಾಸ ಭಾರತದಲ್ಲಿ ಅನೇಕ ಕಡೆಗೆ ಕಾಣಬಹುದು. ಶೃಂಗಾರ, ಹಾಸ್ಯ, ಭಕ್ತಿ ಇವೆಲ್ಲ ರಸಗಳನ್ನು ಕುಮಾರವ್ಯಾಸನು ಸಮಯೋಚಿತವಾಗಿ ಉಪಯೋಗಿಸಿಕೊಂಡಿರುವನು. ದ್ರೌಪದೀ ಸ್ವಯಂವರವನ್ನು ನೆನೆಸಿಕೊಂಡರೆ ಶೃಂಗಾರ ಹಾಸ್ಯರಸಗಳೆರಡೂ ನೆನಪಾಗುತ್ತವೆ. ಸನ್ನಿವೇಶಗಳನ್ನು ನಿರ್ಮಿಸುವದರಲ್ಲಿಯೂ, ಪಾತ್ರಸೃಷ್ಟಿಯಲ್ಲಿಯೂ ಕುಮಾರವ್ಯಾಸನಿಗೆ ಸರಿಯಾದ ಕವಿಗಳು ಅತಿವಿರಳ. ಪಂಪನು ಕನ್ನಡದಲ್ಲಿ ಮೊದಲು ಭಾರತವನ್ನು ಬರೆದನು. ಅವನ ಭಾಷೆ ಸಂಸ್ಕೃತ ಮಿಶ್ರವಾದುದು. ಸಾಮಾನ್ಯವಾಚಕರಿಗೆ ಅದರ ಸ್ವಾರಸ್ಯವನ್ನು ತಿಳಿದು ಕೊಳ್ಳಲು ಸಾಧ್ಯವಾಗಲಾರದು. ಇದಲ್ಲದೆ ಪಂಪನು ಮಹಾಭಾರತದಲ್ಲಿಯ ಅನೇಕ ಪಾತ್ರಗಳಲ್ಲಿ ಜೈನಧರ್ಮದ ಮತದಂತೆ ಅನೇಕ ಬದಲಾವಣೆಗಳನ್ನು ಮಾಡಿಕೊಂಡಿರುವನು. ಕುಮಾರವ್ಯಾಸನ ಭಾರತವು ಮಾತ್ರ ಸಂಸ್ಕೃತದಲ್ಲಿರುವ ವ್ಯಾಸರ ಮಹಾಭಾರತವನ್ನು ಅನುಸರಿಸಿ ಬರೆದದ್ದು. ತನಗೆ ಸರಿ ಕಂಡಲ್ಲಿ ಕೆಲವು ಮಾರ್ಪಾಡುಗಳನ್ನು ಕುಮಾರವ್ಯಾಸ ಮಾಡಿದ್ದಾನೆ. ಆದರೆ ಅವನ ಭಾರತವು ಬಹುಮಟ್ಟಿಗೆ ಮೂಲವನ್ನೇ ಅನುಸರಿಸಿರುವದು. ಇವನ ಭಾರತವು ಹೃದಯಂಗಮವೂ. ಸುಲಭವೂ ಆಗಿರುವದರಿಂದ ಪಂಡಿತ ಪಾಮರರ ಮೆಚ್ಚಿಗೆಗೆ ಪಾತ್ರವಾಗಿದೆ. ಯಾವ ದೃಷ್ಟಿಯಿಂದ ವಿಚಾರಮಾಡಿದರೂ ಕುಮಾರವ್ಯಾಸನು ಕನ್ನಡ ಸಾಹಿತ್ಯದ ಮಹಾಕವಿಗಳಲ್ಲಿ ಒಬ್ಬನಾಗುವನು.

## ೨೬. ಪರೀಕ್ಷೆಗಳು

ವಿದ್ಯಾರ್ಥಿಯ ಜ್ಞಾನವನ್ನು ಅಳೆಯುವದಕ್ಕಾಗಿ ನಾವು ಪರೀಕ್ಷೆಗಳನ್ನು ತೆಗೆದುಕೊಳ್ಳುತ್ತೇವೆ. ಪರೀಕ್ಷೆಯ ಸಲುವಾಗಿಯೇ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಾರೆ. ಆದರೆ ಪರೀಕ್ಷೆಯಿಂದ ಯಾವ ವಿದ್ಯಾರ್ಥಿಯ

ಜ್ಞಾನವನ್ನು ಅಳೆಯಲೂ ಸಾಧ್ಯವಾಗುವದಿಲ್ಲ. ಶಾಲೆಯಲ್ಲಿ ವರ್ಷಾಂತ್ಯದ ಕೊನೆಗೆ ಮೂರು ತಾಸು ಪರೀಕ್ಷೆ ತೆಗೆದುಕೊಂಡು ಆ ವಿಷಯದಲ್ಲಿ ವಿದ್ಯಾರ್ಥಿಯು ಯಶಸ್ವಿಯಾಗಿರುವನೋ ಇಲ್ಲವೋ ಎನ್ನುವದನ್ನು ನಿರ್ಣಯಿಸುತ್ತೇವೆ. ವಿದ್ಯಾರ್ಥಿಯು ಅಭ್ಯಾಸಮಾಡಿರುವನೋ ಇಲ್ಲವೋ ಎಂಬುದನ್ನು ಮೂರು ತಾಸಿನಲ್ಲಿ ನಿರ್ಣಯಿಸಬಹುದೇ? ಕೆಲವು ಸಾರೆ ದೈವಯೋಗದಿಂದ ವಿದ್ಯಾರ್ಥಿಯು ಮೊದಲು ಎರಡು ಮೂರು ದಿವಸ ಓದಿದ ಭಾಗವೇ ಪರೀಕ್ಷೆಯಲ್ಲಿ ಬರಬಹುದು. ದುರ್ದೈವದಿಂದ ಮತ್ತೊಬ್ಬ ವಿದ್ಯಾರ್ಥಿಯು ಚೆನ್ನಾಗಿ ಮಾಡಿರದ ಅಥವಾ ಓದಿರದ ಭಾಗವೇ ಅದಾಗಿರಬಹುದು. ಇದರಿಂದ ಒಬ್ಬ ವಿದ್ಯಾರ್ಥಿಗೆ ಲಾಭವಾದರೆ ಮತ್ತೊಬ್ಬ ವಿದ್ಯಾರ್ಥಿಗೆ ಅದರಿಂದ ಹಾನಿಯಾಗುವದು. ಇದರಿಂದ ಮೊದಲನೇ ವಿದ್ಯಾರ್ಥಿಯು ಜಾಣನೆಂದಾಗಲೀ, ಎರಡನೇ ವಿದ್ಯಾರ್ಥಿಯು ದಡ್ಡನೆಂದಾಗಲೀ ತೀರ್ಪು ಹೇಳುವದು ಸಾಧ್ಯವಾಗಲಾರದು. ಆದ್ದರಿಂದ ನಮ್ಮ ಈಗಿನ ಪರೀಕ್ಷೆಗಳಿಂದ ವಿದ್ಯಾರ್ಥಿಗಳ ನಿಜವಾದ ಪರೀಕ್ಷೆಯಾಗುವದಿಲ್ಲ.

ವಿದ್ಯಾರ್ಥಿಗಳು ವಿಷಯವನ್ನು ತಿಳಿದುಕೊಳ್ಳದೆ, ಬಾಯಿಪಾಠ ಮಾಡುವರು. ಅದೇ ವಿಷಯುವು ಪರೀಕ್ಷೆಯಲ್ಲಿ ಬಂದರೆ ಅವರು ಉತ್ತೀರ್ಣರಾಗುವರು. ವರ್ಷಾನುವರ್ಷ ಓದಿದ ವಿದ್ಯಾರ್ಥಿಯು ತನಗೆ ಬಾರದ ವಿಷಯುವು ಪರೀಕ್ಷೆಯಲ್ಲಿಬಂದರೆಪರೀಕ್ಷೆಯಲ್ಲಿತೇರ್ಗಡೆಯಾಗಲಾರನು. ಪರೀಕ್ಷೆಗಳುವಿದ್ಯಾರ್ಥಿಯುಅಭ್ಯಾಸಮಾಡಿರುವನೋಇಲ್ಲವೋಅವನುವಿಷಯುವನ್ನುತಿಳಿದುಕೊಂಡಿರುವನೋ ಇಲ್ಲವೋ ಎಂಬುದನ್ನು ತಿಳಿಸಲು ಸಹಾಯಕಾರಿಯಾಗಲಾರವು

ಚೆನ್ನಾಗಿ ಅಭ್ಯಾಸ ಮಾಡಿದ ವಿದ್ಯಾರ್ಥಿಯು ಪರೀಕ್ಷೆಯ ವೇಳೆಯಲ್ಲಿ ಜಡ್ಡು ಬಿದ್ದರೆ ಅಥವಾ ಪರೀಕ್ಷೆಯಲ್ಲಿ ಗಾಬರಿಯಾದರೆ ಅವನು ಅನುತ್ತೀರ್ಣನಾಗುವನು. ವಿದ್ಯಾರ್ಥಿಯಲ್ಲಿ ಜ್ಞಾನಾಭಿಲಾಷೆಯು ಇರುವದೋ ಇಲ್ಲವೋ ಎಂಬುದನ್ನು ನಾವು ಪರೀಕ್ಷಿಸದೆ ಅವನು ಎಷ್ಟು ಬೇಗ ಬರೆಯುವನು. ಎಂಬುದನ್ನೇ ಪರೀಕ್ಷಿಸುತ್ತೇವೆ. ಬೇಗನೆ ಬರೆಯುವವನು ಅನೇಕ ವಿಷಯಗಳನ್ನು ಗೊತ್ತುಪಡಿಸಿದ ಅವಧಿಯಲ್ಲಿ ಬರೆಯಬಲ್ಲನು· ವಿಷಯಗಳು ಗೊತ್ತಿದ್ದರೂ ಸಾವಕಾಶವಾಗಿ ಬರೆಯುವವನು ತನಗೆ ಗೊತ್ತಿದ್ದ ವಿಷಯಗಳೆಲ್ಲವನ್ನೂ ಬರೆಯಲಾರನು· ಪರೀಕ್ಷೆಯೆಂದರೆ ಬಹುಬೇಗನೆ ತನಗೆ ಗೊತ್ತಿದ್ದ ವಿಷಯಗಳನ್ನು ಬರೆಯುವದು.

ಪರೀಕ್ಷೆ ಪಾಸಾಗುವದಕ್ಕೆ ವಿದ್ಯಾರ್ಥಿಗಳು ಶಾಲೆಗೆ ಬರುವರು. ಶಿಕ್ಷಕರಾದರೂ ಪರೀಕ್ಷೆಗೆ ಮಹತ್ವ ಕೊಡುವರು. ವಿದ್ಯಾರ್ಥಿಯು ಯಾವದೊಂದು ಬೇರೆ ವಿಷಯವನ್ನು ಕೇಳಿದರೆ ಶಿಕ್ಷಕರು ಅದು ಪರೀಕ್ಷೆಗೆ ಇರುವದಿಲ್ಲ ಎಂದು ಉತ್ತರ ಕೊಡುವರು. ಶಿಕ್ಷಕರು ಓದಿಸುವದು ಪರೀಕ್ಷೆಗಾಗಿ, ವಿದ್ಯಾರ್ಥಿಗಳು ಶಾಲೆಗೆ ಬರುವದು ಪರೀಕ್ಷೆಗಾಗಿ! ನಮ್ಮ ಶಿಕ್ಷಣದ ಗುರಿಯೇ ಪರೀಕ್ಷೆಯಾಗಿದೆ!! ಜ್ಞಾನದ ಬದಲು ಪರೀಕ್ಷೆಗಳೇ ಮಹತ್ವದವುಗಳಾಗಿವೆ.

ಶೀಲ, ಜ್ಞಾನಗಳೇ ಶಿಕ್ಷಣದ ಗುರಿಯಾಗಬೇಕು. ಎಳೆವಯಸ್ಸಿನಲ್ಲಿ ಜ್ಞಾನಾಭಿರುಚಿಯನ್ನು ಹುಟ್ಟಿಸಬೇಕು. ವಿದ್ಯಾರ್ಥಿಗಳು ಶಿಸ್ತು, ಸಂಯಮಗಳನ್ನು ಕಲಿಯಬೇಕು. ಇಲ್ಲದಿದ್ದರೆ ಅವರ ವಿದ್ಯೆಯಿಂದ ಯಾವ ಪ್ರಯೋಜನವೂ ಆಗಲಾರದು. ಪರೀಕ್ಷೆಗಳೇ ನಮ್ಮ ಗುರಿಯಾಗಿರುವದರಿಂದ ನಾವು ವಿದ್ಯಾರ್ಥಿಗಳ ಶೀಲ, ಚಾರಿತ್ರ್ಯಗಳನ್ನು ಬೆಳಿಸುವದಕ್ಕೆ ಪ್ರಯತ್ನಿಸುವದಿಲ್ಲ. ಜ್ಞಾನಾಭಿರುಚಿಯನ್ನು ಹುಟ್ಟಿಸುವದಕ್ಕೆ ಪರೀಕ್ಷೆಗಳಿಂದ ಸಹಾಯವಾಗುವದಿಲ್ಲ. ಪರೀಕ್ಷೆಯ ಚಿಂತೆಯಿಂದ ವಿದ್ಯಾರ್ಥಿಗಳ ದೇಹದ ಮೇಲೆ ಕೆಟ್ಟ ಪರಿಣಾಮವಾಗುತ್ತದೆ. ಆದ್ದರಿಂದ ನಮ್ಮ ಪರೀಕ್ಷೆಗಳಲ್ಲಿ ಸುಧಾರಣೆಯಾಗುವದು ಅವಶ್ಯವಿರುತ್ತದೆ. ರಾಧಾಕೃಷ್ಣನ್ ಸಮಿತಿಯವರು ಪರೀಕ್ಷೆಗಳಲ್ಲಿ ಅನೇಕ ಸುಧಾರಣೆಗಳನ್ನು ಸೂಚಿಸಿರುವರು.

ಕಾಗದಗಳ ಉಪಯೋಗವು ಗೊತ್ತಿಲ್ಲದ ಕಾಲದಲ್ಲಿ, ಈಗಿನಂತೆ ಬರೆಯುವ ಪರೀಕ್ಷೆಗಳಿರಲಿಲ್ಲ. ಪ್ರಾಚೀನ ಭಾರತದಲ್ಲಿ ವಿದ್ಯಾರ್ಥಿಗಳಾದವರು ವಿದ್ವಾಂಸರ ಸಭೆಯಲ್ಲಿ ತಮ್ಮ ವಿಷಯವನ್ನು ಪ್ರತಿಪಾದಿಸಬೇಕಾಗುತ್ತಿತ್ತು. ಆಗ ವಿದ್ವಾಂಸರು ವಿದ್ಯಾರ್ಥಿಗಳಿಗೆ ಅನೇಕ ಪ್ರಶ್ನೆಗಳನ್ನು ಕೇಳುತ್ತಿದ್ದರು ವಿದ್ವಾಂಸರು ಕೇಳಿದ ಪ್ರಶ್ನೆಗಳಿಗೆ ವಿದ್ಯಾರ್ಥಿಗಳು ಸರಿಯಾದ ಉತ್ತರಕೊಡಬೇಕಾಗುತ್ತಿತ್ತು. ಆದ್ದರಿಂದ ಆಗ ಪರೀಕ್ಷೆಗಳಿದ್ದರೂ ಈಗಿನಂತೆ ಸುಲಭವಾಗಿರಲಿಲ್ಲ. ವಿದ್ವಾಂಸರು ಅನೇಕ ಪ್ರಶ್ನೆಗಳನ್ನು ಕೇಳಿ ವಿದ್ಯಾರ್ಥಿಗಳನ್ನು ಪರೀಕ್ಷಿಸುತ್ತಿದ್ದರು. ಜ್ಞಾನಾರ್ಜನೆಯೇ ಅವರ ಗುರಿಯಾಗಿತ್ತು. ತಾವು ಕಲಿಯುತ್ತಿದ್ದ ವಿಷಯದಲ್ಲಿ ಪಂಡಿತರಾಗದ ಹೊರತು ಆಶ್ರಮವನ್ನು ಬಿಟ್ಟು ಹೋಗಲು ಗುರುಗಳು ಅಪ್ಪಣೆಕೊಡುತ್ತಿರಲಿಲ್ಲ. ಈಗಿನಂತೆ ವರ್ಷಕ್ಕೊಮ್ಮೆ

ಪರೀಕ್ಷೆ ತೆಗೆದುಕೊಳ್ಳದೆ ದಿನಾಲು ಪರೀಕ್ಷೆ ತೆಗೆದುಕೊಳ್ಳುತ್ತಿದ್ದರು. ಪ್ರತಿ ದಿವಸ ಎಷ್ಟು ಅಭ್ಯಾಸ ಮಾಡುತ್ತಾನೆ ಎಂಬುದು ಗುರುಗಳಿಗೆ ಗೊತ್ತಾಗುತ್ತಿತ್ತು. ಪ್ರತಿ ದಿವಸ ಪರೀಕ್ಷೆಯೆಂದರೆ ಅವನು ಈಗಿನಂತೆ ಮೂರು ತಾಸು ಕುಳಿತು ಪ್ರಶ್ನೆಗಳಿಗೆ ಉತ್ತರ ಬರೆಯುವದಲ್ಲ. ವಿದ್ಯಾರ್ಥಿಯು ಯಾವಾಗಲೂ ಗುರುವಿನ ಸಾನಿಧ್ಯದಲ್ಲಿರುತ್ತಿದ್ದನು. ಆದ್ದರಿಂದ ಗುರುಗಳು ವಿದ್ಯಾರ್ಥಿಯ: ಬುದ್ಧಿ ಶಕ್ತಿ, ಅವನ ಜ್ಞಾನಲಾಲಸೆ ಎಲ್ಲವನ್ನೂ ತಿಳಿದುಕೊಳ್ಳುತ್ತಿದ್ದರು.

ಇಂದು ನಾವು ಪರೀಕ್ಷೆಗಳಲ್ಲಿ ಬದಲಾವಣೆಯನ್ನು ಮಾಡಿಕೊಳ್ಳಬೇಕಾಗಿದೆ. ವರ್ಷಕ್ಕೊಮ್ಮೆ ಪರೀಕ್ಷೆ ತೆಗೆದುಕೊಂಡು ಅವನು ಮುಂದಿನ ವರ್ಗಕ್ಕೆ ಹೋಗಲು ಅರ್ಹನಾಗಿರುವನೋ ಇಲ್ಲವೋ ಎಂಬುದನ್ನು ನಿರ್ಣಯಿಸಬಾರದು. ಪ್ರತಿತಿಂಗಳಲ್ಲಿ ಎರಡು ಪರೀಕ್ಷೆಗಳನ್ನಾದರೂ ತೆಗೆದುಕೊಳ್ಳಬೇಕು. ವರ್ಷದಲ್ಲಿಯ ಎಲ್ಲ ಪರೀಕ್ಷೆಗಳ ಮೇಲಿಂದ ಅವನ ಯೋಗ್ಯತೆಯನ್ನು ನಿರ್ಣಯಿಸಬೇಕು. ಇದಲ್ಲದೆ ವಿದ್ಯಾರ್ಥಿಯು ವರ್ಗದಲ್ಲಿ ಯಾವ ರೀತಿಯಾಗಿ ಅಭ್ಯಾಸ ಮಾಡುವನು ಎಂಬುದನ್ನೂ ಗಮನದಲ್ಲಿ ತೆಗೆದುಕೊಳ್ಳಬೇಕು ಪರೀಕ್ಷೆಗಳಿಂದ ಎಷ್ಟೇ ಹಾನಿಯಿದ್ದರೂ ಅವುಗಳಿಲ್ಲದೆ ನಡೆಯುವಂತಿಲ್ಲ. ವಿದ್ಯಾರ್ಥಿಗಳ ಜ್ಞಾನವನ್ನು ಅರಿತುಕೊಳ್ಳಲಿಕ್ಕೆ ಅವು ಬೇಕೇಬೇಕು. ಆದರೆ ಕೇವಲ ಪರೀಕ್ಷೆಯ ಮೇಲೆಯೇ ವಿದ್ಯಾರ್ಥಿಯ ಜ್ಞಾನದ ಮಟ್ಟವನ್ನು ಅಳಿಯಲು ಬರಲಾರದು. ಆಧುನಿಕ ಮಾನಸ ಶಾಸ್ತ್ರಜ್ಞರು ಜ್ಞಾನದ ಜೊತೆಗೆ ವಿದ್ಯಾರ್ಥಿಯ ಬುದ್ಧಿ ಶಕ್ತಿಯನ್ನೂ ಅಳೆಯಬೇಕೆಂದು ಹೇಳುತ್ತಾರೆ. ಬುದ್ಧಿ ಶಕ್ತಿಯನ್ನು ಹೆಚ್ಚಿಗೆ ಪಡೆದವರು ವಿಷಯದಲ್ಲಿ ಹಿಂದೆ ಉಳಿದಿದ್ದರೂ ಬೇಗನೆ ಆ ವಿಷಯದಲ್ಲಿ ಪ್ರಗತಿಯನ್ನು ಸಾಧಿಸಬಹುದು. ಆದರೆ ಮಂದ ಬುದ್ಧಿಯವನು ಯಾವದೊಂದು ವಿಷಯದಲ್ಲಿ ಹಿಂದೆ ಉಳಿದಿದ್ದರೆ ಅವನು ಆ ವಿಷಯದಲ್ಲಿ ಪ್ರಗತಿಯನ್ನು ಸಾಧಿಸುವದು ಕಠಿಣವಾಗುವದು. ಆದ್ದರಿಂದ ವಿದ್ಯಾರ್ಥಿಗಳನ್ನು ಮೇಲಿನ ವರ್ಗಕ್ಕೆಸೇರಿಸಿಕೊಳ್ಳುವಾಗ ಅವನ ಬುದ್ಧಿ ಶಕ್ತಿಯನ್ನು ಅಳೆಯುವದೂ ಅವಶ್ಯವಾಗಿದೆ.

ಸರಕಾರವು ಪರೀಕ್ಷೆಗಳಿಂದಲೇ ಮನುಷ್ಯನ ಜ್ಞಾನದ ಅಳತೆಯನ್ನು ಮಾಡುವದು. ಯಾಕಂದರೆ ಅವನ ಜ್ಞಾನವನ್ನು ಅಳೆಯಲು ಬೇರೆ ಸಾಧನ

ಗಳು ಉಪಲಬ್ಧವಿಲ್ಲ. ಇತ್ತೀಚಿತ್ತಲಾಗಿ ಸರಕಾರದವರು ಪರೀಕ್ಷೆಗಳಿಗೆ ಎಷ್ಟು ಮಹತ್ವ ಕೊಡಬೇಕು ಎಂಬ ಬಗ್ಗೆ ವಿಚಾರ ಮಾಡುತ್ತಿರುವರು. ಅಮೇರಿಕಾ ದೇಶದಲ್ಲಿ ಸೈನ್ಯದಲ್ಲಿ ಜನರನ್ನು ಸೇರಿಸಿಕೊಳ್ಳುವಾಗ ಅವರ ಬುದ್ಧಿ ಶಕ್ತಿಯನ್ನು ಪರೀಕ್ಷಿಸುತ್ತಿದ್ದರು. ಇದರಿಂದ ಯೋಗ್ಯರಾದವರನ್ನೂ, ಕುಶಲರಾದವರನ್ನೂ ಸೈನ್ಯದಲ್ಲಿ ಸೇರಿಸಿಕೊಳ್ಳಲು ಬಹಳ ಸಹಾಯವಾಗಿದೆ. ನಮ್ಮ ಸರಕಾರವು ಈ ಧೋರಣವನ್ನು ಅನುಸರಿಸುವದೇ?

## ೨೭. ಮಕ್ಕಳ ಶಿಕ್ಷಣ ಮನೆಯಲ್ಲಿ

ವ್ಯಕ್ತಿಯು ವಾತಾವರಣದ ಕೂಸು. ಯಾವ ವಾತಾವರಣದಲ್ಲಿ ಮಗುವು ಬೆಳೆಯುವದೋ ಆ ವಾತಾವರಣದ ಪರಿಣಾಮವು ಮಕ್ಕಳ ಮೇಲಾಗುತ್ತದೆ. ಕಟುಕರ ಮನೆಯಲ್ಲಿದ್ದ ಗಿಳಿಯು ಹೊಡೆಯಿರಿ, ಬಡೆಯಿರಿ ಎಂದು ಯಾವಾಗಲೂ ಕಠೋರವಾದ ಮಾತುಗಳನ್ನು ಆಡುತ್ತಿತ್ತು, ಮಠದಲ್ಲಿದ್ದ ಗಿಳಿಯು ಬನ್ನಿರಿ, ಕುಳಿತುಕೊಳ್ಳಿರಿ ಎಂದು ಹೇಳುತ್ತಿತ್ತು ಎಂದು ಕಥೆಯಿದೆ. ಈ ಕಥೆಯಲ್ಲಿ ಬರುವ ಸಂಗತಿಗಳು ಬಹಳ ಮಾರ್ಮಿಕವಾಗಿವೆ. ಕಟುಕರ ಮನೆಯಲ್ಲಿರುವ ಗಿಳಿಯು ಯಾವಾಗಲೂ ಕಠೋರ ಮಾತುಗಳನ್ನು ಕೇಳುತ್ತಿದ್ದುದರಿಂದ ಅದರ ಸ್ವಭಾವವಾದರೂ ಕಠೋರವೇ ಆಗಿತ್ತು. ಮಠದಲ್ಲಿರುವ ಗಿಳಿಯು ಯಾವಾಗಲೂ ಸೌಮ್ಯವಾದ ಮಾತುಗಳನ್ನು ಕೇಳುತ್ತಿದ್ದುದರಿಂದ ಅದರ ಸ್ವಭಾವವಾದರೂ ಮೃದುವಾಗಿತ್ತು. ಆದ್ದರಿಂದ ವಾತಾವರಣದ ಪರಿಣಾಮವು ಎಷ್ಟು ಮಟ್ಟಿಗೆ ಆಗುತ್ತದೆಂಬುದು ಗೊತ್ತಾಗುವದು.

ಮಕ್ಕಳು ಶಾಲೆಗೆ ಹೋದರೂ ಅವರು ಬಹಳ ವೇಳೆಯನ್ನು ಮನೆಯಲ್ಲಿಯೇ ಕಳೆಯುತ್ತಾರೆ. ದಿನದಲ್ಲಿ ಆರು ತಾಸು ಮಾತ್ರ ಶಾಲೆಯಲ್ಲಿರುವರು. ಆರು ತಾಸಿನಲ್ಲಿ ಶಿಕ್ಷಕನು ಅವರ ನಡತೆಯನ್ನು ಎಷ್ಟು ಮಟ್ಟಿಗೆ ತಿದ್ದಬಹುದು. 'ಬೆಳೆಯ ಸಿರಿಯನ್ನು ಮೊಳಕೆಯಲ್ಲಿ ನೋಡು' ಎಂದು ಗಾದೆಯುಂಟಲ್ಲವೇ? ಸಣ್ಣವರಿರುವಾಗ ಕಲಿತ ಚಟಗಳು ಕೊನೆತನಕ ಉಳಿಯುವವು. ಆದ್ದರಿಂದ ತಂದೆ ತಾಯಿಗಳು ಮಕ್ಕಳಿಗೆ ಒಳ್ಳೇ ಚಟಗಳು ಅಂಟಿಕೊಳ್ಳುವಂತೆ ನೋಡಿಕೊಳ್ಳಬೇಕು.

ಮಕ್ಕಳು ಭಾವನಾಜೀವಿಗಳು. ಅವರಲ್ಲಿ ಬುದ್ಧಿ ಶಕ್ತಿಗಿಂತ ಭಾವನಾ ಶಕ್ತಿಯೇ ಪ್ರಬಲವಾಗಿರುತ್ತದೆ. ಮನುಷ್ಯನಲ್ಲಿ ಕೆಲವು ಮೂಲ ಭೂತವಾದ ಪ್ರವೃತ್ತಿಗಳುಂಟು. ಈ ಪ್ರವೃತ್ತಿಗನುಸಾರವಾಗಿಯೇ ಶಿಕ್ಷಣ ಕ್ರಮವು ಸಾಗಬೇಕು. ಇಲ್ಲದಿದ್ದರೆ ನಮ್ಮ ಶಿಕ್ಷಣವು ಸಫಲವಾಗಲಾರದು.

ಮಕ್ಕಳಲ್ಲಿ ಅನೇಕ ಪದಾರ್ಥಗಳನ್ನು ಕೂಡಿಸಬೇಕೆಂಬ ಪ್ರವೃತ್ತಿಯಿರುತ್ತದೆ. ಆದ್ದರಿಂದ ಅವರು ವೃತ್ತಪತ್ರಿಕೆಯಲ್ಲಿಯ ಚಿತ್ರಗಳನ್ನು ಕತ್ತರಿಸಿ ಇಡುವರು. ವಿಚಿತ್ರವಾಗಿ ಕಂಡ ವಸ್ತುಗಳನ್ನು ಸಂಗ್ರಹಿಸುವರು. ಈ ಸಂಗ್ರಹ ಮಾಡುವ ಬುದ್ಧಿಯೇ ಅವರನ್ನು ಕಳವು ಮಾಡುವದಕ್ಕೆ ಹಚ್ಚುತ್ತದೆ. ಈ ಪ್ರವೃತ್ತಿಯನ್ನು ಉಪಾಯದಿಂದ ನಾವು ಒಳ್ಳೇ ಮಾರ್ಗಕ್ಕೆ ಒಯ್ಯಬೇಕು.

ಮಕ್ಕಳನ್ನು ಶಿಕ್ಷಿಸಿದರೆ ಹಾದಿಗೆ ಬರುವರೆಂದು ಕೆಲವು ಜನರ ಭಾವನೆಯಿರುವದು. ಆದರೆ ಅವರನ್ನು ಶಿಕ್ಷಿಸಿದರೆ ಅವರು ಹಾದಿಗೆ ಬರಲಾರರು. ತುಡುಗು ಮಾಡುವದಕ್ಕೆ ಕಾರಣವೇನು ಎಂಬುದನ್ನು ಕಂಡು ಹಿಡಿದು ಅದನ್ನು ನಿವಾರಣ ಮಾಡಬೇಕು. ಶಿಕ್ಷಿಸುವದರಿಂದ ಬಾಲಕರು ತುಡುಗು ಮಾಡುವದನ್ನು ಬಿಡಲಾರರು. ಅತಿಯಾಗಿ ಶಿಕ್ಷಿಸುವದಾಗಲೀ, ಅತಿಯಾಗಿ ಪ್ರೀತಿಸುವದಾಗಲೀ ಒಳ್ಳೆಯದಲ್ಲ. ಮಕ್ಕಳಿಗೆ ತಾವು ಮಾಡಿದ ಕಾರ್ಯವನ್ನು ಕಂಡು ಜನರು ಮೆಚ್ಚಬೇಕೆಂದು ಇಚ್ಛೆಯಿರುವದು. ಅವರು ಮಾಡಿದ ಕಾರ್ಯದ ಬಗ್ಗೆ ಸಾಕಷ್ಟು ಉತ್ತೇಜನ ದೊರೆಯದಿದ್ದರೆ ಅವರು ನಿರಾಶರಾಗುವರು.

ಚಿಕ್ಕಮಕ್ಕಳಿಗೆ ಜ್ಞಾನವನ್ನು ಗಳಿಸಬೇಕೆಂಬ ತೀವ್ರವಾದ ಇಚ್ಛೆಯಿರುವದು. ಆದ್ದರಿಂದ ಅವರು ಹಲವಾರು ಪ್ರಶ್ನೆಗಳನ್ನು ಕೇಳುವರು. ಅಜ್ಞರಾದ ತಂದೆ ತಾಯಿಗಳು ಮಕ್ಕಳ ಪ್ರಶ್ನೆಗೆ ಉತ್ತರ ಕೊಡಲಾರದೆ ಅವರನ್ನು ಬೆದರಿಸುವರು. ಇದರಿಂದ ಮಕ್ಕಳ ಮೇಲೆ ಕೆಟ್ಟ ಪರಿಣಾಮವಾಗುವದು. ಬೆಳೆಯುವ ಚಿಗುರನ್ನು ಉಗುರಿನಿಂದ ಚಿವುಟಿದಂತಾಗುವದು.

ಬಾಲಕರು ಅನುಕರಣಪ್ರಿಯರು. ತಂದೆ ತಾಯಿಗಳು ಅಸತ್ಯದಿಂದ ನಡೆದು ಮಕ್ಕಳಿಗೆ ಸತ್ಯ ನುಡಿಯಲು ಹೇಳಿದರೆ ತಾಯಿ ತಂದೆಗಳ ಬಗ್ಗೆ

ಗೌರವ ಬುದ್ಧಿಯು ಅವರಲ್ಲಿ ಉಳಿಯಲಾರದು. ಮುಂದೆ ಅವರು ತಾಯಿ ತಂದೆಗಳು ಹೇಳಿದ್ದನ್ನು ಅಲಕ್ಷಿಸುವರು. ಬಾಲಕನ ಮನಸ್ಸು ಅತಿ ಕೋಮಲ ವಾಗಿರುವದು. ಮನೆಯಲ್ಲಿ ಒಂದೇಸವನೆ ಬಡಿದಾಟಗಳು ನಡೆದರೆ ಅವನ ಮೇಲೆ ಕೆಟ್ಟ ಪರಿಣಾಮವಾಗುವದು. ಸುಪ್ರಸಿದ್ಧ ಕಾದಂಬರಿಕಾರನಾದ ಗಾರ್ಕಿಯ ಜೀವನದಮೇಲೆ ಅವನ ಮನೆಯಲ್ಲಿ ನಡೆಯುತ್ತಿದ್ದ ಬಡಿದಾಟಗಳ ಪರಿಣಾಮವು ಎಷ್ಟು ಆಗಿತ್ತೆಂಬುದು ಅವನ ಲೇಖನಗಳಿಂದ ಗೊತ್ತಾಗುವದು. ಆದ್ದರಿಂದ ಮಕ್ಕಳು ಶೀಲವಂತರೂ, ಸತ್ಯಪ್ರಿಯರೂ, ಉದ್ಯೋಗಿಗಳೂ ಆಗಬೇಕಾದರೆ ತಂದೆ ತಾಯಿಗಳು ಬಹಳ ಎಚ್ಚರಿಕೆ ವಹಿಸಬೇಕಾಗುವದು. ಶಿವಾಜಿಯು ಸಣ್ಣವನಿರುವಾಗ ಜೀಜಾಬಾಯಿಯು ರಾಮಾಯಣ, ಮಹಾ ಭಾರತದಲ್ಲಿಯ ವೀರರ ಕತೆಗಳನ್ನು ಅವನಿಗೆ ಹೇಳುತ್ತಿದ್ದಳು. ಇದರಿಂದ ಶಿವಾಜಿಯು ಉತ್ಸಾಹಗೊಂಡು ಮರಾಠಾ ರಾಜ್ಯವನ್ನು ಸ್ಥಾಪಿಸಿದನು. ಇದರಿಂದ ಬಾಲ ಮನಸ್ಸಿನ ಮೇಲೆ ವೀರರ ಕತೆಗಳಿಂದ ಎಂಥ ಪರಿಣಾಮ ವಾಗುವದು ಎನ್ನುವದು ಗೊತ್ತಾಗುವದು. ಮಗುವಿಗೆ ತಾಯಿಯೇ ಮೊದಲನೆಯ ಗುರುವು. ಮಕ್ಕಳ ಶಿಕ್ಷಣವು ಸಂಪೂರ್ಣವಾಗಿ ತಂದೆ ತಾಯಿ ಗಳನ್ನೇ ಅವಲಂಬಿಸಿರುವದು.

## ೨೮. ನಾಗರಿಕನ ಹಕ್ಕುಗಳು

ಮನುಷ್ಯನ ಉನ್ನತಿಗಾಗಿಯೇ ಸರಕಾರವಿರುವದು. ಪ್ರಜೆಗಳ ಹಿತ ಮಾಡುವದೇ ಸರಕಾರದ ಕರ್ತವ್ಯವು. ವ್ಯಕ್ತಿಯ ವಿಕಾಸಕ್ಕಾಗಿ ಕೆಲವು ಅನುಕೂಲತೆಗಳನ್ನು ಸರಕಾರವು ಮಾಡಿಕೊಡಬೇಕಾಗುವದು. ಇವುಗಳಿಗೆ ಹಕ್ಕುಗಳೆನ್ನುವರು. ಪ್ರತಿಯೊಬ್ಬ ನಾಗರಿಕನಿಗೂ ಈ ಹಕ್ಕುಗಳನ್ನು ಪಡೆ ಯಲು ಅಧಿಕಾರವಿರುವದು. ಅತಿ ಅವಶ್ಯವಾದ ಹಕ್ಕುಗಳನ್ನಷ್ಟೇ ನಾವಿಲ್ಲಿ ವಿಚಾರ ಮಾಡೋಣ.

ಭಾಷಣ ಸ್ವಾತಂತ್ರ್ಯವೆಂದರೆ ಪ್ರತಿಯೊಬ್ಬ ವ್ಯಕ್ತಿಗೂ ಬರೆದು ಪ್ರಕಟ ಮಾಡುವ ಮತ್ತು ಭಾಷಣ ಸ್ವಾತಂತ್ರ್ಯವಿರುವದು. ಈ ಹಕ್ಕನ್ನು ಸರಕಾರವು ಪ್ರತಿಯೊಬ್ಬನಿಗೂ ದಯಪಾಲಿಸಿರುವದು. ಸರಕಾರವನ್ನು ನಾವು ಉಗ್ರವಾಗಿ ಟೀಕಿಸಬಹುದು. ನಾವು ಟೀಕಿಸಿದ ಮಾತ್ರಕ್ಕೆ ನಮ್ಮನ್ನು ಬಲುಂಧಿಸ

ಸರಕಾರಕ್ಕೆ ಬರುವದಿಲ್ಲ. ನಮ್ಮ ವಿಚಾರಗಳನ್ನು ಮತ್ತೊಬ್ಬರ ಮುಂದೆ ಇಡಲು ಭಾಷಣ ಮತ್ತು ಲೇಖನಗಳಿಂದ ಮಾತ್ರ ಸಾಧ್ಯ. ಇವೆರಡೂ ಸ್ವಾತಂತ್ರ್ಯಗಳನ್ನು ಕಸಿದುಕೊಂಡರೆ ಮನುಷ್ಯನ ವಿಕಾಸವೇ ಕುಂಠಿತ ವಾಗುವದು. ವಿಚಾರ ಸ್ವಾತಂತ್ರ್ಯವಿಲ್ಲದಿದ್ದರೆ ಅದು ಪ್ರಜಾಪ್ರಭುತ್ವವಾಗ ಲಾರದು. ಮಾನವನ ಉನ್ನತಿಗಾಗಿ ಇದು ಅತಿ ಅವಶ್ಯವಾಗಿರುವದು. ಆದ್ದರಿಂದ ಎಲ್ಲ ಪ್ರಜಾಪ್ರಭುತ್ವ ರಾಜ್ಯಗಳು ಈ ಹಕ್ಕನ್ನು ಮಾನ್ಯಮಾಡಿ ರುವವು. ಇದರಿಂದ ಸರಕಾರಕ್ಕೂ ಲಾಭವಿರುವದು. ತನ್ನ ವಿರೋಧಿಯ ಅಭಿ ಪ್ರಾಯಗಳನ್ನು ತಿಳಿದುಕೊಳ್ಳಲು ಸಹಾಯವಾಗುವದು. ಜಗತ್ತಿನಲ್ಲಿ ಪೂರ್ಣ ಜ್ಞಾನಿಗಳು ಯಾರೂ ಇರುವದಿಲ್ಲ. ಆದ್ದರಿಂದ ತಮ್ಮ ಮಾರ್ಗವೇ ಸರಿಯಾ ದದ್ದು; ಉಳಿದವರ ಮಾರ್ಗವು ತಪ್ಪು ಎಂದು ಯಾರೂ ಭಾವಿಸಬಾರದು. ಸರಕಾರವು ತನ್ನನ್ನು ಟೀಕಿಸುವವರನ್ನು ಸಹಾನುಭೂತಿಯಿಂದ ಕಾಣಬೇಕು. ಬೇರೆಯವರು ಟೀಕಿಸಬೇಕಾದರೆಸರಕಾರದವರುಏನಾದರೂತಪ್ಪುಮಾಡುತ್ತಿರ ಬೇಕಲ್ಲವೇ? ಆದ್ದರಿಂದಲೇ ಇಂಗ್ಲಂಡದಲ್ಲಿ ಮುಖ್ಯಮಂತ್ರಿಯಷ್ಟೇ ಮಹತ್ವವು ವಿರೋಧಿ ಗುಂಪಿನ ನಾಯಕನಿಗಿರುತ್ತದೆ. ತನ್ನ ಬೆನ್ನು ತನಗೆ ಕಾಣುವದಿಲ್ಲ. ಅದರಂತೆ ಸರಕಾರಕ್ಕೆ ತಾನು ಮಾಡಿದ ತಪ್ಪು ತನಗೆ ಗೊತ್ತಾಗುವದಿಲ್ಲ. ಭಾಷಣ ಸ್ವಾತಂತ್ರ್ಯವಿದ್ದರೆ ವಿರೋಧಿ ಗುಂಪುಗಳು ಸರಕಾರದ ತಪ್ಪನ್ನು ಬಯಲಿಗೆಳೆಯುತ್ತವೆ. ಭಾಷಣ ಸ್ವಾತಂತ್ರ್ಯವೆಂದರೆ ಬೇರೆಯವರನ್ನು ನಿಂದಿ ಸುವದಲ್ಲ. ವಿಧಾಯಕ ರೀತಿಯಿಂದ ಟೀಕೆ ಮಾಡುವದಕ್ಕೆ ಪ್ರತಿಯೊಬ್ಬನಿಗೂ ಸ್ವಾತಂತ್ರ್ಯವಿರುವದು. ಜನರನ್ನು ಹಿಂಸಾಚಾರ ಮಾಡುವಂತೆ ಪ್ರಚೋದಿ ಸುವದಕ್ಕಾಗಲೀ, ಜಾತಿ ಜಾತಿಗಳಲ್ಲಿ ಬಡಿದಾಟ ಹುಟ್ಟಿಸುವಂತೆ ಮಾಡುವದ ಕ್ಕಾಗಲೀ ಭಾಷಣ ಸ್ವಾತಂತ್ರ್ಯವಿಲ್ಲ. ಇದರಿಂದ ಲಾಭಕ್ಕಿಂತ ಹಾನಿಯೇ ಹೆಚ್ಚಾಗುತ್ತದೆ. ಆದ್ದರಿಂದ ಭಾಷಣ ಸ್ವಾತಂತ್ರ್ಯದ ಉಪಯೋಗವನ್ನು ದೇಶದ ಉನ್ನತಿಗಾಗಿಯೂ ಲೋಕೋಪಕಾರಕ್ಕಾಗಿಯೂಮಾಡಿಕೊಳ್ಳಬೇಕು.

ಧಾರ್ಮಿಕ ಸ್ವಾತಂತ್ರ್ಯವೆಂದರೆ ನಮ್ಮ ಭಾವನೆಯಂತೆ ದೇವರನ್ನು ಪೂಜಿಸುವದಕ್ಕೆ ಸ್ವಾತಂತ್ರ್ಯ. ದೇವರನ್ನು ಇದೇ ರೀತಿಯಾಗಿ ಪ್ರಾರ್ಥಿಸ ಬೇಕು ಎಂದು ಹೇಳುವ ಅಧಿಕಾರವು ಸರಕಾರಕ್ಕಿರುವದಿಲ್ಲ. ಧರ್ಮದಲ್ಲಿ ಸರಕಾರವು ಕೈಹಾಕಲಾರದು. ಆದರೆ ಮೂಢನಂಬಿಕೆಗಳನ್ನು ಹೋಗಲಾಡಿ

ಸುವದಕ್ಕಾಗಿ ಸರಕಾರವು ಧರ್ಮದಲ್ಲಿ ಕೈಹಾಕಬಹುದು. ಲಾರ್ಡ ವಿಲಿಯಮ್ ಬೆಂಟಿಂಕನು ಸತಿಹೋಗುವದನ್ನು ಕಾಯಿದೆಯಿಂದ ಪ್ರತಿಬಂಧಿಸಿದನು. ಅಲ್ಪವಯಸ್ಸಿನಲ್ಲಿ ವಿವಾಹ ಮಾಡುವ ಪದ್ಧತಿಯನ್ನು ಸರಕಾರವು ಕಾಯಿದೆಯಿಂದ ಪ್ರತಿಬಂಧಿಸಿತು. ಈ ರೀತಿಯಾಗಿ ಅವಶ್ಯಕಂಡಲ್ಲಿ ಸರಕಾರವು ಧರ್ಮದಲ್ಲಿಯೂ ಕೈಹಾಕಬಹುದು. ಆದರೆ ಇದರಿಂದ ಅವನ ಧಾರ್ಮಿಕ ಸ್ವಾತಂತ್ರ್ಯಕ್ಕೆ ಅಡ್ಡಿಯಾಗಲಾರದು.

ಪ್ರತಿಯೊಬ್ಬ ವ್ಯಕ್ತಿಗೆ ತಾನು ಗಳಿಸಿದ ಆಸ್ತಿಯ ಮೇಲೆ ಹಕ್ಕಿರುವದು ಒತ್ತಾಯದಿಂದ ಸರಕಾರವು ಯಾವನ ಆಸ್ತಿಯನ್ನೂ ಕಸಿದುಕೊಳ್ಳಲಾರದು. ಒಂದು ವೇಳೆ ಅದಕ್ಕೆ ಒಂದು ಮಿತಿಯನ್ನು ಮಾಡಬಹುದು. ದೊಡ್ಡ ದೊಡ್ಡ ಶ್ರೀಮಂತರು ಕಾರಖಾನೆಗಳನ್ನು ನಡಿಸಿ ವರ್ಷಂಪ್ರತಿ ಕೋಟಿಗಟ್ಟಲೆ ಹಣವನ್ನು ಸಂಪಾದಿಸುವರು. ಆದರೆ ಅದೇ ಕಾರಖಾನೆಯಲ್ಲಿ ದುಡಿಯುವ ಕೂಲಿಕಾರನ ಪರಿಸ್ಥಿತಿಯಲ್ಲಿ ಯಾವ ಬದಲಾವಣೆಯೂ ಆಗುವದಿಲ್ಲ. ಇಂಥ ಪ್ರಸಂಗಗಳಲ್ಲಿ ಸರಕಾರವು ನಡುವೆ ಬಂದು ಕೂಲಿಕಾರನಿಗೂ ಲಾಭದಲ್ಲಿ ಕೆಲವು ಅಂಶವು ಸಿಗುವಂತೆ ಮಾಡಬಹುದು. ಅಥವಾ ಕಾಯಿದೆ ಮಾಡಿ ಕಾರಖಾನೆಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳಬಹುದು. ಕಾರಖಾನೆಗಳನ್ನು ವಶಪಡಿಸಿಕೊಳ್ಳುವಾಗ ಕೆಲವು ಹಣವನ್ನು ಪರಿಹಾರಧನವೆಂದು ಕಾರಖಾನೆಗಳ ಒಡೆಯರಿಗೆ ಕೊಡುವದು. ಉತ್ತರ ಪ್ರದೇಶದಲ್ಲಿ ಸರಕಾರವು ಜಮೀನುದಾರರ ಭೂಮಿಯನ್ನು ಕಸಿದುಕೊಂಡು ರೈತರಿಗೆ ಕೊಡುತ್ತಿರುವದು.

ಪ್ರಜಾಪ್ರಭುತ್ವವೆಂದರೆ ಜನತೆಯ ರಾಜ್ಯ. ಪ್ರಜೆಗಳ ಪ್ರತಿನಿಧಿಗಳೇ ರಾಜ್ಯಕಾರಭಾರವನ್ನು ಸಾಗಿಸುವರು ಆದ್ದರಿಂದ ತಮ್ಮ ಪ್ರತಿನಿಧಿಗಳನ್ನು ಆರಿಸುವ ಹಕ್ಕು ಪ್ರತಿಯೊಬ್ಬನಿಗೂ ಇರುತ್ತದೆ. ಮತದಾನದ ಹಕ್ಕು ಅತಿ ಮಹತ್ವದ್ದೆಂದು ಗಣಿಸಲ್ಪಡುತ್ತದೆ.

ಪುಕ್ಕಟೆಯಾಗಿ ಪ್ರತಿಯೊಬ್ಬನೂ ಶಿಕ್ಷಣವನ್ನು ಪಡೆಯುವಂತೆ ಸರಕಾರವು ವ್ಯವಸ್ಥೆ ಮಾಡಬೇಕು ಮುಂದುವರಿದ ರಾಷ್ಟ್ರಗಳಲ್ಲಿ ಒತ್ತಾಯದ ಪ್ರಾಥಮಿಕ ಶಿಕ್ಷಣವನ್ನು ಬಳಕೆಯಲ್ಲಿ ತಂದಿರುವರು. ಇದಲ್ಲದೆ ದೇಶದಲ್ಲಿ ಚಾರಮಾಡುವ ಸ್ವಾತಂತ್ರ್ಯ, ತನ್ನ ಮನಸ್ಸು ಸಂಬಂದಲ್ಲಿ ಇರುವ

ಸ್ವಾತಂತ್ರ್ಯ, ಇವೂ ಮನುಷ್ಯನ ಹಕ್ಕುಗಳಾಗಿವೆ. ನ್ಯಾಯದಾನ ಮಾಡು ವದರಲ್ಲಿ ಸರಕಾರವು ಪಕ್ಷಪಾತ ಮಾಡಲಾರದು. ತಪ್ಪು ಇಲ್ಲದೆ ಯಾರ ನ್ನಾದರೂ ಬಂಧಿಸಿದರೆ ನ್ಯಾಯಾಧೀಶನ ಮುಂದೆ ಅವನ ವಿಚಾರಣೆಯಾಗ ಬೇಕಾಗುವದು. ನಿರಪರಾಧಿಯನ್ನು ಬಂಧಿಸಲು ಸರಕಾರಕ್ಕೆ ಯಾವ ಅಧಿ ಕಾರವೂ ಇರುವದಿಲ್ಲ. ಯುದ್ಧನಡೆದಾಗ ಸರಕಾರವು ಉಗ್ರ ಕ್ರಮಗಳನ್ನು ಕೈಕೊಳ್ಳುವದರಿಂದ ಆಗ ನಾಗರಿಕನ ಹಕ್ಕುಗಳು ಅಸ್ತಿತ್ವದಲ್ಲಿ ಇರುವದಿಲ್ಲ. ಸಾಮಾನ್ಯ ಪರಿಸ್ಥಿತಿಯಲ್ಲಿ ಎಲ್ಲ ಹಕ್ಕುಗಳೂ ನಾಗರಿಕನಿಗೆ ದೊರೆಯುತ್ತವೆ.

## ೨೯. ನಾನು ಶಿಕ್ಷಣಮಂತ್ರಿಯಾದರೆ

ನಮ್ಮ ಶಿಕ್ಷಣವು ದೋಷಪೂರಿತವಾಗಿದೆ ಎಂದು ಎಲ್ಲರೂ ಹೇಳುವರು. ನಮ್ಮ ಶಿಕ್ಷಣಪದ್ಧತಿಯ ಮೂಲ ತಳಹದಿಯನ್ನು ಹಾಕಿದವನು ಮೆಕಾಲೆ. ಸರಕಾರಕ್ಕೆ ಬೇಕಾಗುವ ಕಾರಕೂನರನ್ನು ತಯಾರಿಸುವದೇ ಮೆಕಾಲೆಯ ಗುರಿಯಾಗಿತ್ತು. ಆದ್ದರಿಂದ ಅವನು ಕಾರಕೂನರನ್ನು ತಯಾರಿಸುವದಕ್ಕಾಗಿ ಯೋಗ್ಯವಾದ ಶಿಕ್ಷಣವನ್ನೇ ಪ್ರಾರಂಭಿಸಿದನು. ಆ ಶಿಕ್ಷಣ ಪದ್ಧತಿಯು ಇನ್ನೂ ಹಾಗೆಯೇ ಸಾಗಿದೆ. ಕಾರಕೂನರನ್ನು ತಯಾರಿಸುವದೇ ನಮ್ಮ ಶಿಕ್ಷಣದ ಗುರಿಯಲ್ಲ. ಇಂದು ಭಾರತವು ಸ್ವತಂತ್ರವಾಗಿದೆ. ನಮಗಿಂದು ಪ್ರಾಮಾಣಿಕರೂ, ಒಳ್ಳೇ ಶೀಲವುಳ್ಳವರೂ, ದೇಶಾಭಿಮಾನಿಗಳೂ, ಕಾರ್ಯಕುಶಲರೂ, ಸಧೃಡರೂ ಆದ ಕಾರ್ಯಕರ್ತರು ಬೇಕಾಗಿರುವರು. ವ್ಯಕ್ತಿಯ ಮತ್ತು ಸಮಾಜದ ಉದ್ಧಾರವೇ ಶಿಕ್ಷಣದ ಗುರಿಯು. ವ್ಯಕ್ತಿಯ ವಿಕಾಸವಾಗದೆ ಸಮಾಜದ ಉನ್ನತಿಯಾಗಲಾರದು, ಸಮಾಜದ ಉದ್ಧಾರ ವಾಗದೆ ವ್ಯಕ್ತಿಯ ವಿಕಾಸಕ್ಕೆ ಅವಕಾಶವಿಲ್ಲ. ವ್ಯಕ್ತಿ ಮತ್ತು ಸಮಾಜ ಇವು ಒಂದಕ್ಕೊಂದು ಪೂರಕವಾದವುಗಳು. ವ್ಯಕ್ತಿಯ ವಿಕಾಸಕ್ಕಾಗಿ ನಾನು ಹೆಚ್ಚಿಗೆ ಲಕ್ಷ್ಯಕೊಡುವೆನು.

ಮಾತೃಭಾಷೆಯ ಮುಖಾಂತರವೇ ಎಲ್ಲ ಶಿಕ್ಷಣವನ್ನು ಕೊಡಬೇಕು ಎಂಬ ತತ್ವವನ್ನು ಎಲ್ಲ ಶಿಕ್ಷಣ ಶಾಸ್ತ್ರಜ್ಞರೂ ಒಪ್ಪಿಕೊಂಡಿರುವರು. ಕೂಸು ತಾಯಿಯ ಮೊಲೆಯ ಹಾಲನ್ನು ಕುಡಿದು ಪುಷ್ಟಿಯನ್ನು ಪಡೆಯುವಂತೆ ಮಾತೃಭಾಷೆಯ ಮುಖಾಂತರವೇ ಕಲಿತ ವಿಷಯವು ಮಕ್ಕಳಿಗೆ ಚೆನ್ನಾಗಿ

ತಿಳಿಯುವದು. ನಮ್ಮ ದೇಶದಲ್ಲಿ ಮಾತ್ರ ಈ ತತ್ವವು ತಿರುವುಮುರುವಾಗಿದೆ. ಇದಕ್ಕೆ ಬಹುಮಟ್ಟಿಗೆ ಕಾರಣವೆಂದರೆ ಇಂಗ್ಲಿಷ ಭಾಷೆಯ ಮೇಲಿನ ನಮ್ಮ ಮೋಹವೇ ಇದೆ. ನಮ್ಮ ವಿದ್ಯಾರ್ಥಿಗಳು ಸಂಸ್ಕೃತವನ್ನು ಕೂಡ ಇಂಗ್ಲಿಷ ಭಾಷೆಯ ಮುಖಾಂತರವೇ ಕಲಿಯುವರು. ಇದರಿಂದ ಅವರು ಬಹಳ ವೇಳೆಯನ್ನು ಇಂಗ್ಲಿಷ ಭಾಷೆಯನ್ನು ಕಲಿಯುವದರಲ್ಲಿಯೇ ಕಳೆಯುವರು. ಗುಜರಾತಿ ಭಾಷೆಯಲ್ಲಿ ಒಂದು ವಿಷಯವನ್ನು ಕಲಿಯುವದಕ್ಕೆ ಮೂರು ವರ್ಷ ಹಿಡಿದರೆ ಅದೇ ವಿಷಯವನ್ನು ಇಂಗ್ಲಿಷಿನಲ್ಲಿ ಕಲಿಯುವದಕ್ಕೆ ನೂರು ವರ್ಷಗಳು ಹಿಡಿಯುತ್ತವೆ ಎಂದು ಗಾಂಧೀಜಿಯವರು ಹೇಳಿದ್ದಾರೆ. ಇದರಮೇಲಿಂದ ನಮ್ಮ ವಿದ್ಯಾರ್ಥಿಗಳ ವೇಳೆಯು ಯಾವ ರೀತಿಯಿಂದ ಹಾಳಾಗುತ್ತಿರುವದ್ಯ ಎಂಬುದು ಗೊತ್ತಾಗುವದು. ಆದ್ದರಿಂದ ನಾನು ಶಾಲೆ - ಕಾಲೇಜುಗಳಲ್ಲಿ ಮಾತೃಭಾಷೆಯನ್ನೇ ಮಾಧ್ಯಮವನ್ನಾಗಿ ಮಾಡುವೆನು. ಹೀಗೆ ಮಾಡುವದರಿಂದ ಹಲವರು ನನ್ನನ್ನು ಟೀಕಿಸಬಹುದು. ಆದರೆ ನಾನು ಮಾಡಿದ್ದು ಸರಿಯಾದದ್ದು ಎಂದು ನನ್ನ ಮನಸ್ಸಿಗೆ ತೋರಿದರೆ ನಾನು ಬೇರೆಯವರಿಗೆ ಹೆದರಬೇಕಾಗಿಲ್ಲ. "ಮನಮೆಚ್ಚಿ ನಡೆದುಕೊಂಡರೆ ಶಿವನುಂಟು" ಎಂದು ಬಸವಣ್ಣನವರು ಹೇಳಿಲ್ಲವೇ ?

ವಿದ್ಯಾರ್ಥಿಗಳು ಎಷ್ಟು ಪುಸ್ತಕಗಳನ್ನು ಓದುತ್ತಾರೆ ಎನ್ನುವದಕ್ಕಿಂತಲೂ ಓದಿದ್ದನ್ನು ಎಷ್ಟರಮಟ್ಟಿಗೆ ಆಚರಣೆಯಲ್ಲಿ ತರುತ್ತಾರೆ ಎಂಬದಕ್ಕೆ ನಾವು ಹೆಚ್ಚಿಗೆ ಮಹತ್ವ ಕೊಡಬೇಕು. ವಿದ್ಯಾರ್ಥಿಗಳಲ್ಲಿ ಶಿಸ್ತು ಇಲ್ಲದಿದ್ದರೆ ಅವರ ಶಿಕ್ಷಣದಿಂದ ಯಾವ ಪ್ರಯೋಜನವೂ ಆಗಲಾರದು. ಶಿಸ್ತು ಎಂದರೆ ಯಾವದೊಂದು ಕೆಲಸವನ್ನು ಯೋಗ್ಯ ರೀತಿಯಿಂದ ಮಾಡುವದು. ಶಿಸ್ತು ಬೆಳೆಯಬೆ ಕಾದರೆ ವಿದ್ಯಾರ್ಥಿಗಳಿಗೆ ಸ್ಕೌಟ್ ಶಿಕ್ಷಣವನ್ನು ಕೊಡಬೇಕು.

ವಿದ್ಯಾರ್ಥಿಗಳು ದೇಶಕ್ಕೂ, ಸಮಾಜಕ್ಕೂ ಉಪಯುಕ್ತವಾದ ಸೇವೆಯನ್ನು ಸಲ್ಲಿಸಬೇಕು ಎಂಬ ದೃಷ್ಟಿಯಿಂದಲೇ ಸ್ಕೌಟ ಶಿಕ್ಷಣವು ಪ್ರಾರಂಭವಾಗಿದೆ. ಸ್ಕೌಟನು ಯಾವಾಗಲೂ ಪರೋಪಕಾರ ಮಾಡುವದೇ ತನ್ನ ಧ್ಯೇಯವೆಂದು ತಿಳಿದಿರುವನು. ಯಾವ ಕಷ್ಟಬಂದರೂ ಅವನು ಎದೆಗುಂದುವದಿಲ್ಲ. ಕಷ್ಟಬಂದಾಗ ಅವುಗಳಿಂದ ಪಾರಾಗುವದಕ್ಕಾಗಿ ಹಂಚಿಕೆಗಳನ್ನು ಹುಡುಕುವನು.

ಸ್ಕೌಟನು ಪ್ರಾಮಾಣಿಕನು. ಯಾರಿಗೂ ಅವನು ಮೋಸಮಾಡ ಲಾರನು. ರಾಷ್ಟ್ರಕ್ಕಾಗಿ ಪ್ರಾಣವನ್ನು ಕೊಡಲು ಅವನು ಹಿಂಜರಿಯ ಲಾರನು. ಜಾತಿಭೇದಗಳು ಅವನಿಗೆ ಗೊತ್ತಿಲ್ಲ. ಎಲ್ಲ ರಾಷ್ಟ್ರಗಳ ನಾಗರಿಕರು ತನ್ನ ಅಣ್ಣತಮ್ಮಂದಿರೆಂದು ಅವನು ಭಾವಿಸುವನು. ಬೇರೆದೇಶದ ಜನರು ಸಂಕಟದಲ್ಲಿದ್ದಾಗ ಅವರಿಗೆ ಸಹಾಯ ಮಾಡುವನು. ನಾಯಕನ ಅಜ್ಞೆಯನ್ನು ಪಾಲಿಸುವದು ಅವನ ಮುಖ್ಯ ಕರ್ತವ್ಯಗಳಲ್ಲಿ ಒಂದಾಗಿರುವದು. ಇಷ್ಟೆಲ್ಲ ಗುಣಗಳಿಂದ ಕೂಡಿದ ಸ್ಕೌಟ ಶಿಕ್ಷಣವು ನಮ್ಮ ಶಾಲೆಯಲ್ಲಿ ದುರ್ಲಕ್ಷಿಸಲ್ಪಟ್ಟಿದೆ. ಪ್ರತಿಯೊಬ್ಬ ವಿದ್ಯಾರ್ಥಿಯು ಕಡ್ಡಾಯವಾಗಿ ಸ್ಕೌಟ ಶಿಕ್ಷಣವನ್ನು ಪಡೆಯಬೇಕೆಂದು ನಿಯಮಮಾಡುವೆನು.

ನಮ್ಮ ವಿದ್ಯಾರ್ಥಿಗಳ ಜ್ಞಾನವು ಬಹಳ ಸಂಕುಚಿತವಾಗಿದೆ. ಯಾಕಂದರೆ ಅವರು ಪಠ್ಯಪುಸ್ತಕಗಳನ್ನು ಬಿಟ್ಟು ಉಳಿದ ಪುಸ್ತಕಗಳನ್ನು ಓದುವದಿಲ್ಲ. ಪರೀಕ್ಷೆಗಾಗಿಯೇ ಅವರು ಪುಸ್ತಕಗಳನ್ನು ಓದುವರು. ಪರೀಕ್ಷೆಯಾದಕೂಡಲೇ ಆ ವಿಷಯವನ್ನು ಮರೆತುಬಿಡುವರು. ಅವರಿಗೆ ಸಾಹಿತ್ಯದಲ್ಲಿ ಅಭಿರುಚಿಯಿಲ್ಲದಂತಾಗಿದೆ. ಸಾಹಿತ್ಯದಲ್ಲಿ ಅಭಿರುಚಿಯನ್ನು ನಿರ್ಮಾಣ ಮಾಡುವದೇ ನಮ್ಮ ಶಿಕ್ಷಣದ ಮೂಲ ಗುರಿಯಾಗಿರಬೇಕು. ಶಾಲೆಯೆಂದರೆ ವಿದ್ಯಾರ್ಥಿಗಳು ಹೆದರುವಂತಾಗಬಾರದು. ಶಾಲೆಯಲ್ಲಿ ವಿಷಯಗಳು ಮನೋರಂಜಕವಾಗಿರಬೇಕು. ಮೇಲಿಂದಮೇಲೆ ಸಂಗೀತ, ಸಾಹಿತ್ಯ ಚರ್ಚೆಗಳನ್ನು ಏರ್ಪಡಿಸಿ ವಿಷಯಗಳನ್ನು ಮನೋರಂಜಕವಾಗಿ ಕಲಿಸುವ ವ್ಯವಸ್ಥೆಯಾಗಬೇಕು. ಆಟ-ನೋಟಗಳಿಂದಲೇ ವಿದ್ಯಾರ್ಥಿಗಳು ಹೆಚ್ಚು ವಿಷಯವನ್ನು ಕಲಿಯುವರು.

ಪ್ರತಿಯೊಂದು ಶಾಲೆಯಲ್ಲಿಯೂ ವಾಚನಾಲಯವನ್ನು ಸ್ಥಾಪಿಸಲು ಪ್ರಯತ್ನಿಸುವೆನು. ಇದರಿಂದ ವಿದ್ಯಾರ್ಥಿಗಳು ಅನೇಕ ಪುಸ್ತಕಗಳನ್ನು ಓದಿ ಜ್ಞಾನವನ್ನು ಸಂಪಾದಿಸಲು ಸಹಾಯವಾಗುವದು. ವಿದ್ಯಾರ್ಥಿಗಳಿಗೆ ಪಠ್ಯವಲ್ಲದ ಬೇರೆಪುಸ್ತಕಗಳನ್ನು ಓದಲು ಪ್ರೋತ್ಸಾಹಿಸುವಂತೆ ಮಾಡುವೆನು. ಸಂಗೀತ, ಸಾಹಿತ್ಯ, ಚಿತ್ರಕಲೆ ಮುಂತಾದವುಗಳಲ್ಲಿ ವಿದ್ಯಾರ್ಥಿಗಳಿಗೆ ಆಸಕ್ತಿಯುಂಟಾಗುವಂತೆ ಮಾಡುವೆನು.

ಸೊವ್ಹಿಯೆಟ್ ರಶಿಯಾದಲ್ಲಿ ಡಾಕ್ಟರರಿಗೂ, ವಕೀಲರಿಗೂ, ಶಿಕ್ಷಕರಿಗೂ ಸಮನಾದ ಸಂಬಳವನ್ನು ಕೊಡುವರು. ಯಾಕೆಂದರೆ ಅಲ್ಲಿಯ ಸರಕಾರದವರು ಶಿಕ್ಷಣ ಕೊಡುವ ಕೆಲಸವು ಉಳಿದ ಕೆಲಸಗಳಷ್ಟೇ ಮಹತ್ವದ್ದೆಂದು ತಿಳಿದಿರುವರು. ಇಂದಿನ ಬಾಲಕರೇ ನಾಳಿನ ರಾಷ್ಟ್ರದ ನಾಯಕರಾಗುವರು. ನಾಳಿನ ನಾಗರಿಕರನ್ನು ತಯಾರು ಮಾಡುವ ಅತಿ ಮಹತ್ವದ ಕೆಲಸವನ್ನು ಶಿಕ್ಷಕರು ಮಾಡುವರು. ಆದ್ದರಿಂದ ಅವರಿಗೆ ಆಕರ್ಷಕವಾದ ಸಂಬಳವನ್ನು ಕೊಡದಿದ್ದರೆ ಶಿಕ್ಷಣ ಶಾಖೆಯಲ್ಲಿ ದುಡಿಯಲು ಬುದ್ಧಿವಂತರಾದ ಜನರು ಮುಂದೆ ಬರಲಾರರು. ನಮ್ಮ ದೇಶದಲ್ಲಿ ಶಿಕ್ಷಕರಾದವರಲ್ಲಿ ಬಹಳ ಜನರು ಉಳಿದ ಎಲ್ಲ ಖಾತೆಗಳಲ್ಲಿ ಪ್ರಯತ್ನ ಮಾಡಿ ಅಲ್ಲಿ ಯಾವ ನೌಕರಿಯೂ ದೊರೆಯದಿದ್ದರೆ ಶಿಕ್ಷಣ ಖಾತೆಗೆ ಬರುವರು. ಇದಕ್ಕೆ ಕಾರಣವೆಂದರೆ, ಉಳಿದ ಖಾತೆಗಳಲ್ಲಿ ಹೆಚ್ಚಿಗೆ ಸಂಬಳ, ಮಾನ, ಮರ್ಯಾದೆಗಳು ದೊರೆಯುತ್ತವೆ. ಶಿಕ್ಷಣ ಖಾತೆಯೆಂದರೆ ಅತಿಕಡಿಮೆ ಮಹತ್ವದ ಉದ್ಯೋಗವೆಂದು ಜನರ ಭಾವನೆಯಾಗಿದೆ. ಈ ಭಾವನೆಯು ಹೋಗಬೇಕಾದರೆ ಬುದ್ಧಿವಂತರಾದವರು ಶಿಕ್ಷಕರಾಗಬೇಕು. ಬುದ್ಧಿವಂತರಾದವರು ಶಿಕ್ಷಕರಾಗಬೇಕಾದರೆ, ಸರಕಾರವು ಅವರಿಗೆ ಯೋಗ್ಯವಾದ ಸಂಬಳವನ್ನು ಕೊಡಬೇಕು. ನಾನು ಶಿಕ್ಷಣ ಮಂತ್ರಿಯಾದರೆ ಶಿಕ್ಷಕರ ಪಗಾರವನ್ನು ಹೆಚ್ಚು ಮಾಡುವೆನು ಮತ್ತು ಬುದ್ಧಿವಂತರೂ, ಕಾರ್ಯಕುಶಲರೂ ಆದ ತರುಣರು ಈ ಉದ್ಯೋಗದಲ್ಲಿ ಮನಸ್ಸು ಹಾಕುವಂತೆ ಮಾಡುವೆನು.

## ೩೦. ನಿರುದ್ಯೋಗ ಸಮಸ್ಯೆ

ಭಾರತ ದೇಶದಲ್ಲಿ ನಿರುದ್ಯೋಗಿಗಳಾದವರ ಸಂಖ್ಯೆಯು ಅತಿಯಾಗಿ ಹೆಚ್ಚಾಗಿದೆ. ಅದರಲ್ಲಿಯೂ ಸುಶಿಕ್ಷಿತರಾದವರು ಹೆಚ್ಚು ಸಂಖ್ಯೆಯಲ್ಲಿ ನಿರುದ್ಯೋಗಿಗಳಾಗತೊಡಗಿರುವರು. ಸರಕಾರದವರು ಈ ಪ್ರಶ್ನೆಯನ್ನು ಬಿಡಿಸಲು ಬಹಳ ಆತುರರಾಗಿರುವರು. ಆದರೆ ಈ ಪ್ರಶ್ನೆಯು ಬಹು ಬೇಗನೆ ಬಿಡಸಲಿಕ್ಕೆ ಸಾಧ್ಯವಾಗುವಂತಹದಲ್ಲ. ಶಾಸನ ಸಭೆಯಲ್ಲಿ ಕೆಲವು ಸದಸ್ಯರು ನಿರುದ್ಯೋಗಿಗಾಳದವರಿಗೆ ಪರಿಹಾರ ಕೊಡಬೇಕೆಂದು ಸೂಚಿಸಿರುವರು. ಈ ಸೂಚನೆಯು ಅವ್ಯವಹಾರ್ಯವಾಗಿದೆ. ನಿರುದ್ಯೋಗಿಗಳಿಗೆ ಕೊಡಲು

ಸಾಕಷ್ಟು ಹಣವು ಸರಕಾರದ ಬಳಿಯಲ್ಲಿ ಇರುವದಿಲ್ಲ. ಇದಲ್ಲದೆ ನಿರುದ್ಯೋಗಿಗಳಾದವರಿಗೆ ಪರಿಹಾರ ಕೊಡುವದರಿಂದ ನಿರುದ್ಯೋಗಿಗಳ ಸಂಖ್ಯೆಯು ಬೆಳೆಯಬಹುದು!

ನಮ್ಮ ದೇಶದಲ್ಲಿ ಒಕ್ಕಲಿಗರ ಸಂಖ್ಯೆಯು ಹೆಚ್ಚಾಗಿರುವದು. ಒಕ್ಕಲಿಗರು ವರ್ಷದಲ್ಲಿ ೮ ತಿಂಗಳು ಕೆಲಸ ಮಾಡುವರು. ನಾಲ್ಕು ತಿಂಗಳು ಅವರು ಉದ್ಯೋಗವಿಲ್ಲದೆ ಇರುವರು. ಆದ್ದರಿಂದ ಅವರ ಜೀವನ ಮಟ್ಟವನ್ನು ಏರಿಸ ಬೇಕಾದರೆ ಅವರಿಗೆ ನಾಲ್ಕು ತಿಂಗಳು ಉದ್ಯೋಗ ಒದಗಿಸಬೇಕಾಗಿದೆ. ಅದಕ್ಕಾಗಿಯೇ ಗಾಂಧೀಜಿಯವರು ರೈತರು ತಮ್ಮ ಬಟ್ಟೆಗಳನ್ನು ತಾವೇ ತಯಾರಿಸಿಕೊಳ್ಳಬೇಕೆಂದು ಹೇಳಿದರು. ಪ್ರತಿಯೊಬ್ಬ ಭಾರತೀಯನೂ ನೂಲಬೇಕೆಂದು ಅವರ ಮನೀಷೆಯಾಗಿತ್ತು. ಇಂದು ಹಳ್ಳಿಗಳಲ್ಲಿ ಬಹಳ ಜನರು ನಿರುದ್ಯೋಗಿಗಳಾಗಿರುವರು. ನಿರದ್ಯೋಗಿಗಳಾದವರು ಪಟ್ಟಣದ ಕಡೆಗೆ ಹೋಗುತ್ತಿರುವರು. ಈ ಪ್ರವಾಹವು ದಿನ ದಿನಕ್ಕೆ ಹೆಚ್ಚಾಗುತ್ತಿರುವದು. ಹಿಂದುಸ್ತಾನವು ಕೃಷಿ ಪ್ರಧಾನ ದೇಶವು ಮತ್ತು ಬಹು ಸಂಖ್ಯಾಕರು ಹಳ್ಳಿಗಳಲ್ಲಿಯೇ ವಾಸಿಸುವರು. ಆದ್ದರಿಂದ ಹೊಸ ಹೊಸ ಕಾರಖಾನೆಗಳನ್ನು ಸ್ಥಾಪಿಸುವದು ಸಾಧ್ಯವಿಲ್ಲ. ಯಂತ್ರ ಸಾಮುಗ್ರಿಗಳಿಂದ ರೈತರು ಬಿತ್ತುವ ಕೆಲಸವನ್ನು ಮಾಡಬಹುದು. ಆದರೆ ಪಾಶ್ಚಾತ್ಯ ದೇಶಗಳಂತೆ ಕಾರಖಾನೆಗಳು ಬೆಳೆಯುವದಕ್ಕೆ ನಮಗೆ ಅನುಕೂಲತೆಗಳಿಲ್ಲ. ಕಾರಖಾನೆಗಳನ್ನು ಬೆಳೆಸುವದಕ್ಕಿಂತಲೂ, ಒಕ್ಕಲತನಕ್ಕೆ ನಾವು ಹೆಚ್ಚು ಮಹತ್ವಕೊಡಬೇಕು. ಆಹಾರದ ದೃಷ್ಟಿಯಿಂದ ನಾವು ಪರಾವಲಂಬಿಗಳಾಗಿರುವೆವು. ಆಹಾರ ಧಾನ್ಯದ ವಿಷಯದಲ್ಲಿ ಮೊದಲು ನಾವು ಸ್ವಾವಲಂಬಿಗಳಾಗಬೇಕು. ಹೊಲಯಿಲ್ಲದವರಿಗೆ ಹೊಲವನ್ನು ಕೊಟ್ಟು ಅವರಿಗೆ ಒಕ್ಕಲತನವನ್ನು ಸುಧಾರಿಸಿದ ಪದ್ಧತಿಯಂತೆ ಮಾಡಲು ಉತ್ತೇಜನ ಕೊಡಬೇಕು. 'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು' ಎಂದು ನಮ್ಮ ಪೂರ್ವಜರು ಹೇಳಿಲ್ಲವೇ?

ಸುಶಿಕ್ಷಿತರಾದವರಿಗೆ ಯಾವ ಉದ್ಯೋಗವನ್ನು ಒದಗಿಸಬೇಕು? ಇದೇ ಅತಿ ಮಹತ್ವದ ಸಮಸ್ಯೆಯಾಗಿದೆ. ಯಾಕೆಂದರೆ ಸುಶಿಕ್ಷಿತರಾದವರು ಸರಕಾರದ ನೌಕರಿಯನ್ನು ದೊರಕಿಸಬೇಕೆಂಬ ಇಚ್ಛೆಯುಳ್ಳವರಾಗಿರುವರು. ಆದರೆ

ಸುಶಿಕ್ಷಿತರಾದವರೆಲ್ಲರಿಗೂ ಸರಕಾರವು ನೌಕರಿಯನ್ನು ಒದಗಿಸಲಾರದು. ಸುಶಿಕ್ಷಿತ ತರುಣರು ಶಾರೀರಿಕ ಶ್ರಮ ಮಾಡುವದೆಂದರೆ ತಮ್ಮ ಯೋಗ್ಯತೆಗೆ ಕುಂದು ಬರುವದೆಂದು ತಿಳಿಯುವರು. ನಿಜವಾಗಿ ಶಾರೀರಿಕ ಶ್ರಮ ಮಾಡುವದು ಕೀಳೆಂದು ಭಾವಿಸಬೇಕಾದ ಕಾರಣವಿಲ್ಲ. ಸ್ವತಂತ್ರ ಉದ್ಯೋಗ ಮಾಡಲು ಇವರಿಗೆ ಯೋಗ್ಯತೆಯಿಲ್ಲ. ಬೇರೆ ಯಾವ ಉದ್ಯೋಗ ಮಾಡಲೂ ಇವರಿಗೆ ಬರುವದಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ನಮ್ಮ ಶಿಕ್ಷಣ ಪದ್ಧತಿಯಲ್ಲಿಯ ದೋಷ. ನಮ್ಮ ಶಿಕ್ಷಣ ಪದ್ಧತಿಯೇ ದೋಷಯುತವಾಗಿದೆ. ಶಿಕ್ಷಣದಲ್ಲಿ ಆಮೂಲಾಗ್ರ ಬದಲಾವಣೆಯಾಗಬೇಕಾಗಿದೆ. ಯೋಗ್ಯತೆಯಿಲ್ಲದವರೂ ಕಾಲೇಜಿಗೆ ಹೋಗುವದರಿಂದ ಜ್ಞಾನದ ಮಟ್ಟವು ಕಡಿಮೆಯಾಗಿದೆ. ಸರಕಾರೀ ನೌಕರಿಯ ಸಲುವಾಗಿಯೇ ನಾವು ಶಿಕ್ಷಣ ಪಡೆಯುವ ಕಾರಣವಿಲ್ಲ. ಶಿಕ್ಷಣವನ್ನು ಪಡೆದವನು ಸ್ವತಂತ್ರವಾಗಿ ಉದ್ಯೋಗ ಮಾಡಲು ಸಮರ್ಥನಾಗುವಂತಾಗಬೇಕು. ಆ ತರದ ಕಲಾಕೌಶಲ್ಯಗಳನ್ನು ಶಾಲೆಯಲ್ಲಿ ಕಲಿಸಬೇಕು. ನಮ್ಮ ಶಿಕ್ಷಣದಲ್ಲಿ ಸುಧಾರಣೆಯಾದರೆ ನಿರುದ್ಯೋಗ ಸಮಸ್ಯೆಯು ಎಷ್ಟೋ ಮಟ್ಟಿಗೆ ಕಡಿಮೆಯಾಗುವದು. ಈ ಉದ್ದೇಶದಿಂದಲೇ ಸರಕಾರದವರು ಅನೇಕತಾಂತ್ರಿಕ ಶಾಲೆಗಳನ್ನು ತೆಗೆದಿರುವರು. ಮಾಧ್ಯಮಿಕಶಾಲಾಂತ್ಯ ಪರೀಕ್ಷೆಯಲ್ಲಿ ಟಾಯಿಪ, ಶೀಘ್ರಲಿಪಿ ಇವುಗಳಿಗೂ ಇಂದು ಸ್ಥಾನ ದೊರೆತಿರುವದು. ಮಾಧ್ಯಮಿಕ ಶಾಲೆಯನ್ನು ಮುಗಿಸಿದವರು ಸ್ವತಂತ್ರವಾಗಿ ಯಾವದೊಂದು ಉದ್ಯೋಗ ಮಾಡಲು ಸಮರ್ಥರಾಗಬೇಕು. ಗಾಂಧೀಜಿಯವರ ವರ್ಧಾಯೋಜನೆಯು ಕಲಾಕೌಶಲ್ಯಗಳಿಗೆ ಬಹಳ ಮಹತ್ವ ಕೊಟ್ಟಿರುತ್ತದೆ. ಶಾಲೆಯಲ್ಲಿ ವಿದ್ಯಾರ್ಥಿಗಳು ಜ್ಞಾನವನ್ನು ಗಳಿಸುವದಲ್ಲದೆ ಒಂದು ಉದ್ಯೋಗವನ್ನು ಕಲಿತುಕೊಳ್ಳುವರು. ಇದರಿಂದಲೇ ನಮ್ಮ ನಿರುದ್ಯೋಗದಸಮಸ್ಯೆಯು ಪರಿಹಾರವಾಗಬಲ್ಲದು.

## ೩೧. ವನಮಹೋತ್ಸವ

ಭಾರತಕ್ಕೆ ಸ್ವಾತಂತ್ರ್ಯ ಬಂದಂದಿನಿಂದ ವನಮಹೋತ್ಸವದ ಮಹತ್ವವು ಹೆಚ್ಚಾಗಿದೆ. ಪೂರ್ವಕಾಲದಲ್ಲಿ ನಮ್ಮ ದೇಶವು ಅರಣ್ಯಗಳಿಂದ ತುಂಬಿತ್ತು. ನಾವು ಗಿಡಗಳನ್ನು ನಾಶಮಾಡುತ್ತ ಹೊರಟಿರುವೆವು. ನಾವು

ಹೀಗೆಯೇ ನಾಶಮಾಡುತ್ತ ಹೋದರೆ ಒಂದಿಲ್ಲೊಂದು ದಿವಸ ಭಾರತವು ಬಂಜೆಭೂಮಿಯಾಗಬಹುದು. ಆದ್ದರಿಂದ ಹೊಸ ಗಿಡಗಳನ್ನು ಹಚ್ಚುವದು ನಮ್ಮ ಆದ್ಯಕರ್ತವ್ಯವಾಗಿದೆ. ಕೇವಲ ಒಂದು ಗಿಡವನ್ನು ಹಚ್ಚಿದರೆ ನಮ್ಮ ಕೆಲಸ ತೀರಿದಂತೆ ಆಗಲಿಲ್ಲ. ಅವುಗಳನ್ನು ಜೋಪಾನ ಮಾಡುವದು ಬಹಳ ಕಠಿಣವಾದದ್ದು. ಮಕ್ಕಳನ್ನು ಜೋಪಾನ ಮಾಡಿದಂತೆ ಅವುಗಳನ್ನು ಜೋಪಾನ ಮಾಡಬೇಕು. ಸರಕಾರದವರು ವನಗಳ ಮಹತ್ವವನ್ನು ನಮಗೆ ತಿಳಿಸಿಕೊಟ್ಟು ಪ್ರತಿಯೊಬ್ಬರೂ ಗಿಡಗಳನ್ನುನೆಡಬೇಕೆಂದು ಒತ್ತಾಯ ಪಡಿಸುತ್ತಿರುವರು.

ಜರ್ಮನಿ ದೇಶದಲ್ಲಿ ಒಂದು ಗಿಡವನ್ನು ಕಡಿದರೆ ಮತ್ತೊಂದು ಗಿಡವನ್ನು ನೆಡುವರು. ಇದರಿಂದ ಅಲ್ಲಿಯ ಅರಣ್ಯವು ನಾಶವಾಗದೆ ಹಾಗೆಯೇ ಇರುವದು. ಜರ್ಮನ್ ಸರಕಾರವು ಅರಣ್ಯವನ್ನು ಬಹಳ ಜಾಗರೂಕತೆಯಿಂದ ಕಾಯ್ದುಕೊಂಡು ಬಂದಿರುವದು. ಇದಲ್ಲದೆ ಜರ್ಮನ್ನರು ಬಹಳದೀರ್ಘೋದ್ಯೋಗಿಗಳಾಗಿರುವದರಿಂದ ಅವರು ಶ್ರಮಪಟ್ಟು ಗಿಡಗಳನ್ನು ಬೆಳೆಸುವರು. ಹಾಲಂಡದೇಶದಲ್ಲಿ ಹೆಚ್ಚಾಗಿ ಗಿಡಗಳನ್ನು ಬೆಳೆಸುವರು. ಗಿಡಗಳನ್ನು ಹಚ್ಚುವದೂ, ಅವುಗಳನ್ನು ಬೆಳೆಸುವದೂ ಅವರ ಒಂದು ಮುಖ್ಯಪ್ರವೃತ್ತಿಯಾಗಿದೆ.

ಮಹಾಜ್ಞಾನಿಗಳಾದ ನಮ್ಮ ಪೂರ್ವಜರು ಅರಣ್ಯದಲ್ಲಿ ವಾಸಮಾಡುತ್ತಿದ್ದರು. ಅವರು ಸೃಷ್ಟಿದೇವಿಯ ಆರಾಧಕರಾಗಿದ್ದರು ನಯನಮನೋಹರವಾದ ಆಶ್ರಮಗಳಲ್ಲಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ಅವರಿಗೆ ಯಾವ ತರದ ಕಟ್ಟಡಗಳ ಅವಶ್ಯಕತೆಯೂ ಇರಲಿಲ್ಲ. ಗಿಡದ ನೆರಳಿನಲ್ಲಿ ಗುರು-ಶಿಷ್ಯರು ಕುಳಿತುಕೊಂಡು ಅಭ್ಯಾಸ ಮಾಡುತ್ತಿದ್ದರು. ಇಂದು ನಾವು ಪಾಶ್ಚಾತ್ಯ ನಾಗರಿಕತೆಗೆ ಮರುಳಾಗಿ ಪಟ್ಟಣದಲ್ಲಿ ವಾಸಿಸುತ್ತಿರುವೆವು. ಸೃಷ್ಟಿಸೌಂದರ್ಯವೆಂದರೇನು ಎಂಬುದೇ ನಮಗೆ ಗೊತ್ತಿಲ್ಲದಂತಾಗಿದೆ. ಆದ್ದರಿಂದಲೇ ನಾವು ಗಿಡಗಳನ್ನು ನಾಶಮಾಡುತ್ತಿರುವೆವು. ಗಿಡಗಳಿಲ್ಲದಿದ್ದರೆ ನಮಗೆ ಸಕಾಲಕ್ಕೆ ಮಳೆಯು ಸಾಕಷ್ಟು ಆಗುವದಿಲ್ಲ. ಮಳೆಯು ಕಡಿಮೆ ಬೀಳುವದರಿಂದ ನಮಗೆ ಬೆಳೆಯು ಬರಲಾರದು. ಹಿಂದುಸ್ತಾನವು ಕೃಷಿಪ್ರಧಾನದೇಶವು. ನಮ್ಮ ಬೆಳೆಯು ಮಳೆಯನ್ನೇ ಅವಲಂಬಿಸಿರುವದು. ಆದ್ದರಿಂದ ನಾವು ಈಗಲಾದರೂ ಎಚ್ಚರಾಗಿ ಗಿಡಗಳನ್ನು ಹಚ್ಚಿ, ನಮ್ಮ

ಅರಣ್ಯವನ್ನು ಬೆಳೆಸಬೇಕು. ಇಲ್ಲದಿದ್ದರೆ ನಮ್ಮ ದೇಶದ ಪರಿಸ್ಥಿತಿಯು ಬಹಳ ಕರುಣಾಜನಕವಾಗುವದು. ಬಹಳ ಜನರಿಗೆ ಇದರ ಕಲ್ಪನೆಯೇ ಇರುವದಿಲ್ಲ. ಗಿಡಗಳು ನಾಶವಾಗುವದರಿಂದ ನಮಗೆ ಬಹಳ ಹಾನಿಯಾಗುವದು ಎಂಬುದರ ವಿಚಾರವೇ ನಮಗಿರುವದಿಲ್ಲ. ಗಿಡಗಳು ಹವೆಯನ್ನು ತಂಪು ಮಾಡುತ್ತವೆ. ಇದರಿಂದ ಮೋಡಗಳು ಕರಗಿ ನಮಗೆ ಮಳೆಯನ್ನು ಕೊಡುವವು.

ಹಿಂದುಸ್ಥಾನದಲ್ಲಿಯ ಬಹುಭಾಗದ ಹವಾಮಾನವು ಬಹಳ ಉಷ್ಣವಾಗಿದೆ. ಬೇಸಿಗೆ ಕಾಲದಲ್ಲಿ ಉಷ್ಣತೆಯು ತಡೆಯಲಾರದಷ್ಟು ಸೆಕೆಯಿಂದ ಕೂಡಿರುತ್ತದೆ. ಗಿಡಗಳಿಂದ ಎಷ್ಟೋ ಉಷ್ಣತೆಯು ಕಡಿಮೆಯಾಗುವದು. ತಂಪಾದ ಗಾಳಿಯುಬೀಸುವದರಿಂದ ಸೆಕೆಯನ್ನು ಕಡಿಮೆಮಾಡಲು ಸಹಾಯವಾಗುವದು. ಬೇಸಿಗೆಕಾಲದಲ್ಲಿ ಸಂಜೆಯ ಮುಂದೆ ಗಿಡಗಳ ಬುಡದಲ್ಲಿ ಹೋಗಿ ಕುಳಿತರೆ ಅವರಿಂದದೊರೆಯುವ ಆನಂದವನ್ನು ಬಣ್ಣಿಸುವದು ಸಾಧ್ಯವಿಲ್ಲ. ಹಾದಿಕಾರರು ಮಳೆ–ಬಿಸಿಲುಗಳಿಂದ ಪಾರಾಗಲು ಗಿಡದ ನೆರಳನ್ನು ಆಶ್ರಯಿಸುವರು. ಒಬ್ಬ ಸಂಸ್ಕೃತ ಕವಿಯು ಗಿಡಗಳನ್ನು ಸಜ್ಜನರಿಗೆ ಹೋಲಿಸಿರುವನು. ಗಿಡಗಳು ನಮಗೆ ನೆರಳನ್ನುಕೊಡುವವಲ್ಲದೆ ತಿನ್ನಲುಹಣ್ಣನ್ನೂ ಕೊಡುವವು.

ತೆಂಗಿನಗಿಡವು ಭೂಲೋಕದ ಕಲ್ಪವೃಕ್ಷವೆಂದು ಹೆಸರಾಗಿರುವದು. ತೆಂಗಿನಗಿಡದ ಪ್ರತಿಯೊಂದು ಭಾಗವೂ ಉಪಯುಕ್ತವಾಗಿರುವದು. ಇದರಂತೆ ವರ್ಷದಲ್ಲಿ ಒಮ್ಮೆ ಬರುವ ಮಾವಿನಹಣ್ಣನ್ನು ಯಾರು ಮರೆಯುವರು? ಮಾವಿನಹಣ್ಣು ಮಧುರವಾಗಿರುವದಲ್ಲದೆ, ಆರೋಗ್ಯದೃಷ್ಟಿಯಿಂದಲೂ ಹಿತಕಾರಿಯಾದುದು. ಈ ಗಿಡಗಳನ್ನು ನಾವು ಬೆಳೆಸಬಾರದೇ? ಈ ಗಿಡಗಳ ವಿಷಯದಲ್ಲಿ ನಮಗೆ ಸ್ವಲ್ಪಾದರೂ ಕೃತಜ್ಞೆಯಿರಬಾರದೇ? ಈ ಗಿಡಗಳ ಮಹತ್ವವು ನಮಗೆ ಗೊತ್ತಿದ್ದರೂ ನಾವು ಅವರ ಕಡೆಗೆ ಲಕ್ಷ ಕೊಡುವದಿಲ್ಲ. ಇದಕ್ಕೆ ನಮ್ಮ ಆಲಸ್ಯತನವೇ ಮುಖ್ಯ ಕಾರಣವು. ಸುಖಬೇಕಾದರೆ ಆಲಸ್ಯತನವನ್ನು ಬಿಡಲೇಬೇಕು. ಈ ಗಿಡಗಳ ಅಭಿವೃದ್ಧಿಯ ಸಲುವಾಗಿ ನಾವು ಯಾವಾಗಲೂ ಪ್ರಯತ್ನಿಸಬೇಕು.

ಆಂಗ್ಲ ಮಹಾಕವಿಯಾದ ಷೇಕ್ಸಪಿಯರನು 'As you like it' ಎಂಬ ನಾಟಕದಲ್ಲಿ ಪದಚ್ಯುತನಾದ ಅರಸನೊಬ್ಬನು ಅರಣ್ಯದಲ್ಲಿ ಹೇಗೆ ಸುಖವಾಗಿದ್ದನೆಂಬುವನ್ನು ಬಹಳ ಮನೋಹರವಾಗಿ ವರ್ಣಿಸಿರುವನು. ತನ್ನ ಸಿಂಹಾಸನವನ್ನು ಕಳೆದುಕೊಂಡ ಅರಸನು ತನ್ನ ಐಶ್ವರ್ಯವು ಹೋಯಿತೆಂದು ದುಃಖಪಡದೆ ಆ ಅರಣ್ಯದಲ್ಲಿ ಸುಖವಾಗಿದ್ದನಂತೆ! ಆ ಅರಣ್ಯದಲ್ಲಿ ಪಶುಪಕ್ಷಿಗಳೇ ಅವನ ಮಿತ್ರರು!! ಹರಿಯುತ್ತಿರುವ ಪ್ರವಾಹಗಳು ಅವನಿಗೆ ನೀತಿಯ ಮಾತನ್ನು ಕಲಿಸುತ್ತಿದ್ದವಂತೆ!!! ಆ ನಿಶಾಂತರಮಣೀಯವಾದ ಅರಣ್ಯದಲ್ಲಿ ಅವನು ಎಷ್ಟು ಸುಖಿಯಾಗಿದ್ದನು! ಅವನು ಎಂದೂ ತಿರುಗಿ ರಾಜ್ಯವನ್ನು ಆಳಬೇಕೆಂದು ಇಚ್ಛೆಮಾಡಲಿಲ್ಲ! ಗಿಡಗಳು ಕೊಡುತ್ತಿದ್ದ ಹಣ್ಣುಗಳನ್ನು ಸೇವಿಸಿ, ಹಸಿರಾದ ಹುಲ್ಲಿನಮೇಲೆ ಮಲಗಿಕೊಂಡು ಸೃಷ್ಟಿ ಸೌಂದರ್ಯವನ್ನು ನೋಡುತ್ತ ಕಾಲಕಳೆಯುವದೇ ಅವನಜೀವನದ ಉದ್ದೇಶವಾಗಿತ್ತು. ವರ್ಡ್ಸ್‌ವರ್ಥಕವಿಯು ಪುಸ್ತಕಗಳಿಂದ ದೊರೆಯುವ ಜ್ಞಾನಕ್ಕಿಂತಲೂ ಸೃಷ್ಟಿದೇವಿಯಿಂದ ದೊರೆಯುವ ಜ್ಞಾನವು ಬಹಳ ಮಹತ್ವದ್ದೆಂದು ಹೇಳಿರುವನು. ನಾವು ಗಿಡಗಳನ್ನು ಬೆಳಸಬೇಕು. ಆನಂದ ಮತ್ತು ಜ್ಞಾನ ಇವೆರಡನ್ನೂ ಸೃಷ್ಟಿಯಿಂದ ಪಡೆಯುತ್ತೇವೆ. ವೃಕ್ಷಗಳಿಲ್ಲದೆ ನಮ್ಮ ಪ್ರಪಂಚವು ನಡೆಯಲಾರದು. ಇನ್ನಾದರೂ ನಾವು ವೃಕ್ಷಗಳ ಅಭಿವೃದ್ಧಿಗಾಗಿ ಶ್ರಮಪಡುವದು ಅವಶ್ಯವಲ್ಲವೇ?

## ೩೨. ಸ್ವಾತಂತ್ರ್ಯೋತ್ಸವ

೧೮೫೭ನೇ ಇಸ್ವಿಯಲ್ಲಿ ಪ್ರಾರಂಭವಾದಸ್ವಾತಂತ್ರ್ಯ ಸಮರವು ೧೯೪೭ ರಲ್ಲಿ ಕೊನೆಗೊಂಡಿತು. ೧೮೫೭ ರಲ್ಲಿ ನಮ್ಮಲ್ಲಿ ಒಕ್ಕಟ್ಟಿರದ್ದರಿಂದ ಸ್ವಾತಂತ್ರ್ಯವು ದೊರೆಯಲಿಲ್ಲ. ಸ್ವಾತಂತ್ರ್ಯವನ್ನು ಪಡೆಯುವದಕ್ಕಾಗಿ ಸಾವಿರಾರು ಜನರು ತಮ್ಮ ಪ್ರಾಣವನ್ನು ತೊರೆದರು. ನೂರಾರು ಕುಟುಂಬಗಳು ಸರಕಾರದ ದಬ್ಬಾಳಿಕೆಗೆ ಈಡಾಗಬೇಕಾಯಿತು! ಅನೇಕ ನಿರಪರಾಧಿಗಳು ಕೊಲ್ಲಲ್ಪಟ್ಟರು!! ಭಾರತಕ್ಕೆ ಸ್ವಾತಂತ್ರ್ಯಬೇಕು ಎಂದು ಭಾಷಣ ಮಾಡಿದ್ದಕ್ಕಾಗಿ ಸರಕಾರವು ಭಾರತೀಯರನ್ನು ಸೆರೆಮನೆಗೆ ಕಳಿಸಿತು. ರಾಷ್ಟ್ರಗೀತೆಯನ್ನು ಹಾಡಿದ್ದಕ್ಕಾಗಿ ಶಿಕ್ಷೆಯಾಯಿತು! ಸತ್ಯಾಗ್ರಹದಲ್ಲಿ ಭಾಗವಹಿಸಿದ್ದ

ಕ್ಕಾಗಿ ಎಷ್ಟೋ ಕುಟುಂಬಗಳು ಹಾನಿಗೊಳಗಾದವು! ಬೇಕಾದಷ್ಟು ಹಣವನ್ನು ಗಳಿಸುತ್ತಿದ್ದ ಕಾಯಿದೆ ಪಂಡಿತರು ತಮ್ಮ ಉದ್ಯೋಗವನ್ನು ಬಿಟ್ಟುಬಿಟ್ಟರು! ಸರಕಾರದ ಉನ್ನತಾಧಿಕಾರದಲ್ಲಿದ್ದ ಅನೇಕರು ಸರಕಾರದ ನೌಕರಿಯನ್ನು ತ್ಯಜಿಸಿದರು!! ಲಾಲಾ ಲಜಪತರಾಯ, ಲೋಕಮಾನ್ಯ ಟಿಳಕ, ಅರವಿಂದ ಘೋಷ, ಮಹಾತ್ಮಾಗಾಂಧಿ, ಸುಭಾಸಚಂದ್ರ ಬೋಸ, ಪಂಡಿತ ಜವಾಹರ ಲಾಲ ನೆಹರುಮುಂತಾದ ರಾಷ್ಟ್ರವೀರರ ತ್ಯಾಗ, ತಪಸ್ಸಿನಿಂದ ನಮಗೆ ಸ್ವಾತಂತ್ರ್ಯವು ದೊರಕಿರುವದು. ಸ್ವಾತಂತ್ರ್ಯದ ಸಲುವಾಗಿ ಅವರು ತ್ಯಾಗ ಮಾಡಿದರು. ಅದರ ಫಲವನ್ನು ಪಡೆಯುವ ಪುಣ್ಯವು ನಮ್ಮದಾಯಿತು. ೨೦೦ ವರ್ಷಗಳಿಂದ ಗುಲಾಮಗಿರಿಯಲ್ಲಿದ್ದ ರಾಷ್ಟ್ರವು ಸ್ವತಂತ್ರವಾಯಿತು. ಆ ದಿನದ ಆನಂದವನ್ನು ಅನುಭವಿಸಿಯೇ ತಿಳಿಯಬೇಕು.

ಆಗಸ್ಟ ೧೫ ನೇ ದಿನಾಂಕ ಭಾರತವು ಸ್ವತಂತ್ರವಾಯಿತು. ಸ್ವಾತಂತ್ರ್ಯೋತ್ಸವವನ್ನು ಜರುಗಿಸಲು ಮೊದಲಿನಿಂದಲೇ ಸಿದ್ಧತೆಗಳು ನಡೆದಿದ್ದವು. ಎಲ್ಲಕಡೆಗಳಲ್ಲಿಯೂ ತಳಿರು ತೋರಣಗಳಿಂದ ನಮ್ಮ ಪಟ್ಟಣ ವನ್ನು ಸಿಂಗರಿಸಿದ್ದರು. ಮಧ್ಯರಾತ್ರಿಯಲ್ಲಿ ನಾವು ರಾಷ್ಟ್ರಧ್ವಜವನ್ನು ಏರಿಸಿದೆವು. ನಡುರಾತ್ರಿಯಲ್ಲಿ ಎಲ್ಲಕಡೆಗೂ ಗದ್ದಲವೇ ಗದ್ದಲ! ಪ್ರತಿ ಯೊಂದು ಮನೆಯ ಮೇಲೆ ಭಾರತೀಯ ರಾಷ್ಟ್ರಧ್ವಜವು ಹಾರಾಡುತ್ತಿತ್ತು ಎಲ್ಲರ ಮುಖದಮೇಲೆ ಆನಂದದ ಕಳೆಯು ಕಾಣುತ್ತಿತ್ತು. ಸಾರ್ವಜನಿಕ ಮತ್ತು ಸರಕಾರೀ ಕಟ್ಟಡಗಳಲ್ಲಿ ದೀಪೋತ್ಸವವನ್ನು ಮಾಡಿದ್ದರು. ಊರ ತುಂಬ ಎಲ್ಲಿ ನೋಡಿದಲ್ಲಿ ವಿದ್ಯುತ್ ದೀಪಗಳೇ ಕಾಣುತ್ತಿದ್ದವು.

ಮುಂಜಾನೆ ಮಿಲಟರಿ ಮತ್ತು ಪೋಲೀಸರು ಕವಾಯತು ಮಾಡಿದರು. ಕವಾಯತು ಮುಗಿದಮೇಲೆ ಜಿಲ್ಹಾಧಿಕಾರಿಗಳು ಸ್ವಾತಂತ್ರ್ಯದ ಮಹತ್ವವನ್ನು ಕುರಿತು ಭಾಷಣಮಾಡಿದರು. ಇದನ್ನು ನೋಡುವದಕ್ಕಾಗಿ ಊರೊಳಗಿನ ಜನರೆಲ್ಲರೂ ಬಂದಿದ್ದರು. ಆಮೇಲೆ ನಾವು ಶಾಲೆಗೆ ಹೋಗಿ ಧ್ವಜವಂದನೆ ಮಾಡಿದೆವು. ಶಾಲೆಯಲ್ಲಿ ಎಲ್ಲರಿಗೂ ಮಿಠಾಯಿ ಹಂಚಿದರು. ಧ್ವಜವಂದನೆ ಮಾಡಿ ವಿದ್ಯಾರ್ಥಿಗಳು ಸಾಲು ಸಾಲಾಗಿ ಹಾಡುಗಳನ್ನು ಹಾಡುತ್ತ ಊರಲ್ಲಿ ತಿರುಗಾಡಿದೆವು. ಊರಲ್ಲಿಯ ಅಂಗಡಿಗಳೆಲ್ಲವನ್ನೂ ನಾನಾಬಗೆಯಾಗಿ

ಶೃಂಗರಿಸಿದ್ದರು. ಎಲ್ಲಿ ನೋಡಿದರೂ ಉತ್ಸಾಹವೇ ತೋರುತ್ತಿತ್ತು. ೨೦೦ ವರ್ಷಗಳ ನಿದ್ದೆಯಿಂದ ಎಚ್ಚರವಾದಂತೆ ಭಾಸವಾಗುತ್ತಿತ್ತು.

ಅಲ್ಲಲ್ಲಿಗೆ ಬಾಳೆಯ ಕಂಬಗಳನ್ನು ನಿಲ್ಲಿಸಿದ್ದರು. ಬಾಳೆಯ ಕಂಬಗಳನ್ನು ನಿಲ್ಲಿಸಿ ಬಾಗಿಲುಗಳನ್ನು ಮಾಡಿದ್ದರು. ಈ ಬಾಗಿಲುಗಳಿಗೆ ಭಾರತದ ಸ್ವಾತಂತ್ರ್ಯದ ಸಲುವಾಗಿ ಮಡಿದವರ ಹೆಸರುಗಳನ್ನು ಇಡಲಾಗಿತ್ತು. ಈ ಪುಣ್ಯ ದಿವಸದಲ್ಲಿ ಹುತಾತ್ಮರಾದ ಆ ಮಹನೀಯರನ್ನು ನೆನೆಯುವದು ನಮ್ಮ ಕರ್ತವ್ಯವಲ್ಲವೇ?

ಸಂಜೆಯ ಮುಂದೆ ಸಾರ್ವಜನಿಕ ಸಭೆಯಾಯಿತು ಆ ಸಭೆಯಲ್ಲಿ ರಾಷ್ಟ್ರೀಯ ನಾಯಕರನೇಕರು ಭಾಷಣ ಮಾಡಿದರು. ಭಾಷಣಕಾರರು ಭಾರತದ ಸ್ವಾತಂತ್ರ್ಯದ ಇತಿಹಾಸವನ್ನು ಕುರಿತು ವೀರ ಶೈಲಿಯಲ್ಲಿ ಭಾಷಣ ಮಾಡಿದರು. ಭಾರತದ ಸ್ವಾತಂತ್ರ್ಯೋತ್ಸವದಲ್ಲಿ ಭಾಗವಹಿಸುವದಕ್ಕೆ, ಅದನ್ನು ನೋಡುವದಕ್ಕೆ ಪುಣ್ಯಬೇಕು. ಕೆಲವರು ಸುಶ್ರಾವ್ಯವಾಗಿ ಲಾವಣಿಗಳನ್ನು ಹಾಡಿದರು. ಸತ್ಯಾಗ್ರಹಗಳ ಬಗ್ಗೆ ಬರೆದ ಪದ್ಯಗಳನ್ನು ಓದಿದರು. ಆ ಸತ್ಯಾಗ್ರಹಗಳ ಸಂಗತಿಯು ಎಷ್ಟು ರೋಮಾಂಚಕಾರಿಯಾದುದು! ಆ ಘಟನೆಗಳನ್ನು ಕುರಿತು ಓದುವದಕ್ಕೆ ಇಂದು ಮನಸ್ಸು ಹಾತೊರೆಯುತ್ತಿದೆ! ಅವು ಎಷ್ಟು ಭಯಂಕರವಾದ ಘಟನೆಗಳಾದರೂ ನಮಗೆ ದುಃಖವಾಗುವದಿಲ್ಲ. ಹುತಾತ್ಮರ ಸ್ಮರಣೆ ಮಾಡುವದರಿಂದ ದುಃಖವಾಗದೆ ಸ್ಫೂರ್ತಿ ದೊರೆಯುತ್ತದೆ! ಅವರ ಜೀವನದಿಂದ ದುಃಖವಾಗುತ್ತಿದ್ದರೆ ಯಾರೂ ಅವರ ಸ್ಮರಣೆ ಮಾಡುತ್ತಿರಲಿಲ್ಲ. ಆ ಹೊತ್ತಿನ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸವು ನಮ್ಮ ಕಣ್ಣುಮುಂದೆ ಕಟ್ಟಿದಂತಾಯಿತು. 'ಜನಗಣಮನ ಅಧಿನಾಯಕ' ಗೀತೆಯೊಂದಿಗೆ ಕಾರ್ಯಕ್ರಮವು ಕೊನೆಗೊಂಡಿತು. ಇಂದ್ರನ ಅಮರಾವತಿಯಂತೆ ಪಟ್ಟಣವೆಲ್ಲವೂ ವಿದ್ಯುತ್ತಿನ ದೀಪಗಳಿಂದ ಹೊಳೆಯುತ್ತಿತ್ತು.

## ೩೩. ಬಾಲವೀರರು

ಇಂಗ್ಲಿಷಿನಲ್ಲಿಯ ಸ್ಕೌಟ ಎಂಬ ಪದಕ್ಕೆ ನಾವು ಕನ್ನಡದಲ್ಲಿ 'ಬಾಲವೀರ' ಎಂದು ಅರ್ಥಮಾಡಿದ್ದೇವೆ. ಬಾಲವೀರ ಸಂಸ್ಥೆಯನ್ನು ದಕ್ಷಿಣ

ಆಫ್ರಿಕೆಯಲ್ಲಿ ಬೆಡೆನ್ ಪಾವೆಲ್ ಎಂಬವನು ಸ್ಥಾಪಿಸಿದನು. ವಿದ್ಯಾರ್ಥಿ ಗಳಲ್ಲಿ ಶಿಸ್ತು ನೆಲೆಗೊಳಿಸುವದೇ ಅವನ ಮುಖ್ಯ ಉದ್ದೇಶವಾಗಿತ್ತು. ಬಾಲ ವೀರರು ಆಫ್ರಿಕೆಯ ಯುದ್ಧದಲ್ಲಿ ಗಾಯಾಳುಗಳಾದವರಿಗೆ ಬಹಳ ಸಹಾಯ ಮಾಡಿದರು. ಇದರಿಂದ ಬಾಲವೀರರ ಪಡೆಯು ಬಹಳ ಲೋಕಪ್ರಿಯ ವಾಯಿತು. ಎಲ್ಲ ಶಾಲೆಗಳಲ್ಲಿಯೂ ಬಾಲವೀರರ ಪಡೆಯನ್ನು ಸ್ಥಾಪಿಸ ಲಾಯಿತು. ಯುದ್ಧಸಮಯದಲ್ಲಿಯೂ, ಶಾಂತಪರಿಸ್ಥಿತಿಯಲ್ಲಿಯೂ ಬಾಲ ವೀರರ ಸಂಸ್ಥೆಯು ಬಹಳ ಉಪಯುಕ್ತವಾದುದು.

ಪರೋಪಕಾರವೇ ಬಾಲವೀರರ ಗುರಿಯಾಗಿರುತ್ತದೆ. ಸಮಾಜದ ಸೇವೆಯನ್ನು ಯಾವರೀತಿ ಮಾಡಬೇಕು ಎಂಬುದನ್ನು ಬಾಲಕನು ಇಲ್ಲಿ ಕಲಿಯುತ್ತಾನೆ. ಹಾದಿ ತಪ್ಪಿದವರಿಗೆ ಹಾದಿಯನ್ನು ತೋರಿಸುವದು, ರೋಗಿಗಳನ್ನು ದವಾಖಾನೆಗೆ ಮುಟ್ಟಿಸುವದು, ಎಲ್ಲಿಯಾದರೂ ಬೆಂಕಿ ಹತ್ತಿದರೆ ತನ್ನ ಜೀವದ ಪರಿವೆಯನ್ನು ತೊರೆದು ಬೆಂಕಿಯನ್ನು ಆರಿಸಲು ಪ್ರಯತ್ನಿಸುವದು, ಜಾತ್ರೆಯಲ್ಲಿ ಜನರು ನೂಕುನುಗ್ಗಾಡದಂತೆ ಪ್ರಯತ್ನಿಸು ಸವದು, ಗಂಡಾಂತರ ಸಮಯದಲ್ಲಿ ಪರರಿಗೆ ಸಹಾಯ ಮಾಡುವದು ಇವೇ ಬಾಲವೀರರ ಕರ್ತವ್ಯಗಳು. ಪರೋಪಕಾರವೇ ಬಾಲವೀರನ ಮುಖ್ಯ ಉದ್ದೇಶವಾಗಿರುವದು ಇಂಗ್ಲಂಡದಲ್ಲಿ ಬಾಲವೀರರ ಪಡೆಯು ಬಹಳ ಉಪಯುಕ್ತವಾದ ಕಾರ್ಯವನ್ನು ಮಾಡಿರುವದರಿಂದ ಜನರ ಪ್ರಶಂಸೆಗೆ ಪಾತ್ರವಾಗಿದೆ. ಪ್ರತಿದಿವಸ ಒಂದಾದರೂ ಪರೋಪಕಾರದ ಕಾರ್ಯವನ್ನು ಮಾಡಲೇಬೇಕೆಂದು ನಿಯಮವಿರುವದು. ಬಾಲವೀರನು ಇಂಥ ಸಂಧಿಯು ತನಗೆ ದೊರಕಬೇಕೆಂದು ಇಚ್ಛಿಸುವನು.

ಬಾಲವೀರನು ಜಾತಿ-ಜಾತಿಗಳಲ್ಲಿ ಭೇದವನ್ನು ಮಾಡುವದಿಲ್ಲ. ಮಾನವರೆಲ್ಲರೂ ಬಾಂಧವರೆಂದು ಅವನು ತಿಳಿಯುವನು. ಬೇರೆ ದೇಶದಲ್ಲಿ ಭೂಕಂಪವಾದರೆ ಅವನು ಸಹಾಯಮಾಡುವದಕ್ಕಾಗಿ ಅಲ್ಲಿಗೆ ಹೋಗುವನು. ಬೇರೆ ದೇಶದವರು ಎಂಬ ಭಾವನೆಯೇ ಅವನಿಗೆ ಬರುವದಿಲ್ಲ. ಅವನು ತನ್ನ ವೈರಿಗಳನ್ನು ಪ್ರೀತಿಸುವನು. ಅವನು ಶಾಂತಿಪ್ರಿಯನು.

ಬಾಲವೀರರಾಗುವವರು ಕೆಲವು ಪ್ರತಿಜ್ಞೆಗಳನ್ನು ಮಾಡಬೇಕಾಗು ವದು. ತನ್ನ ರಾಷ್ಟ್ರಕ್ಕೂ, ದೇವರಿಗೂ ನಿಷ್ಠೆಯನ್ನು ವ್ಯಕ್ತಪಡಿಸಬೇಕಾಗು

ವದು. ನಾನು ಯಾವಾಗಲೂ ಸತ್ಯವನ್ನೇ ನುಡಿಯುವೆನೆಂದು ಪ್ರತಿಜ್ಞೆ ಮಾಡಬೇಕಾಗುವದು. ಸೇವೆಯೇ ಅವನ ಪರಮ ಧ್ಯೇಯವಾಗಿರುವದು. ಬಾಲವೀರರು ಊರಹೊರಗೆ ಹತ್ತು ಹದಿನೈದು ದಿವಸಗಳವರೆಗೆ ವಾಸಿಸು ವರು. ಎಂಟು ಹುಡುಗರಿಗೆ ಒಬ್ಬನು ನಾಯಕನಾಗಿರುವನು. ಈ ನಾಯ ಕರಮೇಲೆ ಒಬ್ಬ ಮುಖ್ಯಸ್ತನಿರುವನು. ಬಾಲವೀರರು ಒಂದೇ ಸ್ಥಳದಲ್ಲಿ ವಾಸಿಸುವರು. ಎಂಟು ಅಥವಾ ಹತ್ತುಮಂದಿ ಬಾಲಕರು ಒಂದು ಗುಡಿಸ ಲನ್ನು ಕಟ್ಟಿಕೊಳ್ಳುವರು. ಈ ಹತ್ತುಮಂದಿಗೆ ದಿನಾಲು ಒಬ್ಬನು ನಾಯಕ ನಾಗುವನು. ಅವನ ಅಪ್ಪಣೆಯಂತೆ ಅವರೆಲ್ಲರೂ ನಡೆಯುವರು. ಪ್ರತಿ ದಿವಸ ಅವರೊಳಗಿನವನೊಬ್ಬನೇ ನಾಯಕನಾಗುವನು. ಹೊಣೆಗಾರಿಕೆಯಿಂದ ಹೇಗೆ ವರ್ತಿಸಬೇಕು ಎಂಬುವದು ಇದರಿಂದ ಗೊತ್ತಾಗುವದು. ಬಾಲವೀರ ರೆಲ್ಲರೂ ಖಾಕಿಯ ಬಟ್ಟೆಗಳನ್ನು ಹಾಕಿಕೊಳ್ಳುವರು. ಖಾಕಿಯ ಅಂಗಿ, ಟೊಪ್ಪಿಗೆ ಮತ್ತು ಪ್ಯಾಂಟ ಇವಿಷ್ಟೇ ಅವರ ಬಟ್ಟೆಗಳು. ಅವರೆಲ್ಲರೂ ಒಂದೇ ತರದ ಬಟ್ಟೆಗಳನ್ನು ಧರಿಸುವದರಿಂದ ಅವರಲ್ಲಿ ತಾವೆಲ್ಲರೂ ಒಂದೇ ಕುಟುಂಬ ದವರು ಎಂಬ ಭಾವನೆ ಬರುವದು. ಕೊರಳಿಗೆ ಒಂದು ವಸ್ತ್ರವನ್ನು ಸುತ್ತಿ ಕೊಳ್ಳುವರು. ಕೈಯಲ್ಲಿ ಬಡಿಗೆಯನ್ನು ಹಿಡಿಯುವರು. ಆತ್ಮರಕ್ಷಣೆಗಾಗಿಯೂ, ಪರರನ್ನು ರಕ್ಷಿಸುವದಕ್ಕಾಗಿಯೂ ಈ ಬಡಿಗೆಯ ಉಪಯೋಗವಿರುವದು.

ಶಿಸ್ತು ಮತ್ತು ನಿಯಮಿತತನಕ್ಕೆ ಬಾಲವೀರರು ಬಹಳ ಮಹತ್ವಕೊಡು ವರು. ನಮ್ಮ ದೇಶದಲ್ಲಿಯಾವದೊಂದು ಕಾರ್ಯಕಲಾಪವನ್ನು ಮಾಡಬೇಕಾ ದರೆ ಅರ್ಧ ತಾಸು ತಡವೇ ಆಗುವದು. ನಿರ್ದಿಷ್ಟ ವೇಳೆಗೆ ಯಾರೂ ಬರುವ ದಿಲ್ಲ! ಆರು ಘಂಟೆಗೆ ಸಭೆಯೆಂದರೆ ಆರು ಹೊಡೆದು ಮೂವತ್ತು ನಿಮಿಷಕ್ಕೆ ನಮ್ಮ ಸಭೆಯು ಪ್ರಾರಂಭವಾಗುತ್ತದೆ. ಇದಕ್ಕೆ ಕಾರಣವೆಂದರೆ ನಮ್ಮಲ್ಲಿ ನಿಯಮಿತತನವಿಲ್ಲದೆ ಇರುವದು. ಸಭೆಯಿಂದ ಬರುವಾಗಲೂ ನೂಕುತ್ತ ಒಮ್ಮೆಲೇ ಎಲ್ಲರೂ ಹೊರಗೆ ಬರಲು ಪ್ರಯತ್ನಿಸುವೆವು! ಶಿಸ್ತುಯಿಲ್ಲದೆ ಇರು ವದರಿಂದ ನಾವು ಹೀಗೆ ವರ್ತಿಸುವೆವು. ಬಾಲವೀರರು ತಮ್ಮ ಜೀವನದಲ್ಲಿ ಶಿಸ್ತು ಮತ್ತು ನಿಯಮಿತತನವನ್ನು ಅಳವಡಿಸಿಕೊಳ್ಳುವವರು. ಚಿಕ್ಕವರಿರ ವಾಗಲೇ ಶಿಸ್ತಿನಿಂದ ವರ್ತಿಸತೊಡಗಿದರೆಂದರೆ ಕಡೆತನಕ ಅವರು ಅದೇ ಪ್ರಕಾರ ನಡೆಯುವರು.

ಶಿಸ್ತು ಬರಬೇಕಾದರೆ ನಮ್ಮಲ್ಲಿ ಸಂಯಮಬೇಕು. ಬಾಲವೀರನು ತನ್ನ ಮೇಲಧಿಕಾರಿಯ ಆಜ್ಞೆಯನ್ನು ಪಾಲಿಸುವನು. ಎಂಥ ಗಂಡಾಂತರ ಸಮಯದಲ್ಲಿಯೂ ಅವನು ತನ್ನ ಮೇಲಧಿಕಾರಿಯ ಆಜ್ಞೆಯನ್ನು ಮೀರ ಲಾರನು. ಇದರಿಂದ ಅವನು ಸಂಯಮಿಯಾಗಿರುವನು. ವ್ಯಕ್ತಿಯ ಹಿತ ಕ್ಕಿಂತಲೂ ಸಮಾಜದ ಹಿತವೇ ಮಹತ್ವಂವೆಬದನ್ನು ತಿಳಿದುಕೊಳ್ಳುವನು. ಸಮಾಜಕ್ಕಾಗಿ ವ್ಯಕ್ತಿಯು ತ್ಯಾಗ ಮಾಡಬೇಕಾಗುವದು. ಸ್ವಾರ್ಥವು ಕಡಿಮೆ ಯಾದರೆ ಸಂಯಮವು ಬರುವದು. ಬಾಲವೀರನು ತನ್ನ ಹಿತಕ್ಕಿಂತಲೂ ಪರೋಪಕಾರ ಮಾಡುವದೇ ಹೆಚ್ಚು ಶ್ರೇಯಸ್ಕರವಾದದ್ದೆಂದು ಭಾವಿಸುವನು.

ಬಾಲವೀರರು ಸಾಂಘಿಕ ಜೀವನವನ್ನು ನಡಿಸುವದರಿಂದ ಅವರಲ್ಲಿ ತಾನಾಗಿಯೇ ಸಹಕಾರವು ಬೆಳೆದುಬರುವದು. ಪರರ ಸುಖ ದುಃಖಗಳನ್ನು ಹೇಗೆ ಅರಿತುಕೊಳ್ಳಬೇಕು ಎಂಬುದು ತಾನಾಗಿಯೇ ಗೊತ್ತಾಗುವದು. ಎಂಥ ಗಂಡಾಂತರ ಪರಿಸ್ಥಿತಿ ಬಂದರೂ ಅವರು ಹೆದರಲಾರರು. ತೊಂದರೆಗಳು ಬಂದಾಗ ಅವುಗಳನ್ನು ನಿವಾರಿಸುವ ಉಪಾಯಗಳನ್ನು ಹುಡುಕುವರು. ಯಾವ ಕೆಲಸವೂ ಕೀಳೆಂದು ಅವರು ಭಾವಿಸಲಾರರು. ಕಷ್ಟವೆಂದರೇನು ಎನ್ನುವದನ್ನು ಅನುಭವದಿಂದಲೇ ಅವರು ಕಲಿಯುವದರಿಂದ ಕಷ್ಟಗಳು ಬಂದಾಗ ಅವರು ಹೆದರುವ ಕಾರಣವಿಲ್ಲ. ನಮ್ಮ ದೇಶದಲ್ಲಿ ಸಾಹಸವು ಇಂದು ಕಡಿಮೆಯಾಗಿದೆ; ಅಲ್ಪದರಲ್ಲಿಯೇ ನಾವು ತೃಪ್ತರಾಗುತ್ತೇವೆ. ಇದ ರಿಂದ ನಾವು ಹಿಂದುಳಿದಿರುವೆವು. ನಮ್ಮ ತರುಣರಲ್ಲಿ ಸಾಹಸವು ಬೇಕು. ಬೇರೆ ದೇಶಗಳನ್ನು ಸಂಶೋಧಿಸುವ, ವಿಜ್ಞಾನದಲ್ಲಿ ಹೊಸ ಹೊಸ ಸಂಶೋ ಧನೆಗಳನ್ನು ಮಾಡುವ ಪರಿಸ್ಥಿತಿಯು ಪ್ರತಿಕೂಲವಿರುವಾಗ ತಮ್ಮ ಧ್ಯೇಯ ವನ್ನು ಈಡೇರಿಸಿಕೊಳ್ಳುವ ಸಾಹಸಿಗರುಬೇಕು. ಇಂಥ ಸಾಹಸವನ್ನು ಬಾಲ ವೀರರು ಕಲಿತುಕೊಳ್ಳುವರು.

ಎಲ್ಲರೂ ಕೂಡಿ ಒಂದು ಉದಾತ್ತವಾದ ಧ್ಯೇಯಕ್ಕಾಗಿ ಹೇಗೆ ಕೆಲಸ ಮಾಡಬಹುದು ಎಂಬುದಕ್ಕೆ ಬಾಲವೀರರ ಸಂಸ್ಥೆಯೇ ಉತ್ತಮ ಉದಾಹರ ಣೆಯಾಗಿದೆ. ಸಮಾಜ ಸೇವೆಯೇ ಬಾಲವೀರನ ಗುರಿಯಾಗಿದ್ದರೂ ಅವನು

ಎಂದೂ ಜನರಿಂದ ಹಣವನ್ನು ಅಪೇಕ್ಷಿಸುವದಿಲ್ಲ. ಹೊಗಳಿಕೆ ನಿಂದೆಗಳಿಗೆ ಅವನು ಲಕ್ಷ್ಯಕೊಡುವದಿಲ್ಲ. ತನ್ನ ಕರ್ತವ್ಯವನ್ನು ಮಾಡುವದರಲ್ಲಿ ತಪ್ಪುವದಿಲ್ಲ. ಗೀತೆಯಲ್ಲಿ ಕೃಷ್ಣನು ಹೇಳಿದಂತೆ ಫಲದಾಸೆಯಿಲ್ಲದೆ ಅವನು ಸಮಾಜ ಸೇವೆಮಾಡುವನು. ಶಿಸ್ತು, ಸಂಯಮ, ನಿಯಮಿತತನ, ಸಾಹಸ, ಪರೋಪಕಾರ ಬುದ್ಧಿ, ರಾಷ್ಟ್ರನಿಷ್ಠೆ, ಇವೆಲ್ಲವೂ ಬಾಲವೀರನಲ್ಲಿರುವ ಗುಣಗಳು.

## ೩೪. ನಾನು ಮಾಡಿದ ಯಾತ್ರೆ

ನಮ್ಮ ಊರಿಂದ ಬಂಡಿಯಲ್ಲಿ ಕುಳಿತು ಎಲ್ಲಮ್ಮನಗುಡ್ಡದ ಜಾತ್ರೆಗೆ ನಡೆದೆವು. ಸುಮಾರು ಇಪ್ಪತ್ತು ಜನರು ಕೂಡಿದ್ದೆವು. ಯಾತ್ರೆಗೆ ಹೋಗಬೇಕಾದರೆ ಬಹಳ ಜನರು ಕೂಡಿ ಹೊರಟರೆ ಮಾತ್ರ ಅದರಲ್ಲಿ ಆನಂದವಿರುವದು. ಆದ್ದರಿಂದಲೇ ನಾವು ಇಷ್ಟು ಜನರನ್ನು ಕೂಡಿಸಿದೆವು. ಕೂಡಿಸಿದೆವು ಅನ್ನುವದಕ್ಕಿಂತ ಅವರೇ ಕೂಡಿದರು ಎಂದು ಹೇಳುವದೇ ವಿಹಿತವಾದದ್ದು. ನಾವು ಹೋಗುತ್ತೇವೆ ಎಂದು ಸುದ್ದಿಮಾಡಿದ ಕೂಡಲೇ ನಮ್ಮ ಆಪ್ತೇಷ್ಟರೆಲ್ಲರೂ ತಾವು ಬರುವದಾಗಿ ತಿಳಿಸಿದರು. ನಾವು ಮೂರು ಚಕ್ಕಡಿಗಳನ್ನು ಗೊತ್ತು ಮಾಡಿದೆವು. ಒಂದೊಂದು ಚಕ್ಕಡಿಯಲ್ಲಿ ಆರು ಏಳು ಜನರಂತೆ ಕುಳಿತುಕೊಂಡೆವು. ನಡುವೆ ನದಿ ಬಂದ ಕೂಡಲೇ ಇಳಿದು ಊಟ ಮಾಡತಕ್ಕದ್ದೆಂದು ಮೊದಲೇ ನಿರ್ಣಯಿಸಿದ್ದೆವು. ಸಾಧಾರಣವಾಗಿ ಹನ್ನೊಂದು ಘಂಟೆಗೆ ಮಲಪ್ರಭಾನದಿಯ ದಂಡೆಗೆ ಹೋಗಿ ಮುಟ್ಟಬಹುದೆಂದು ನಮ್ಮ ವಿಚಾರ.

ಮುಂಜಾನೆ ಇನ್ನೂ ಎರಡು ತಾಸು ಹೊತ್ತು ಇರುವಾಗಲೇ ಊರನ್ನು ಬಿಟ್ಟೆವು. ಎರಡುಮೈಲು ಹೋಗುವಷ್ಟರಲ್ಲಿ ನಮ್ಮ ಚಕ್ಕಡಿಯ ಗಾಲಿಯು ಮುರಿಯಿತು. ದೈವಯೋಗದಿಂದ ಯಾರಿಗೂ ಪೆಟ್ಟು ಬೀಳಲಿಲ್ಲ. ಬಂಡಿಯು ಉರುಳುವದರಲ್ಲಿಯೇ ನಾವು ಬಂಡಿಯಿಂದ ಜಿಗಿದೆವು. ಆದ್ದರಿಂದ ನಮ್ಮ ಚಕ್ಕಡಿಯನ್ನು ನಿಲ್ಲಿಸಿ ಊರಿಗೆ ಹೋಗಿ ಬೇರೊಂದು ಬಂಡಿಯನ್ನು ತರಬೇಕಾಯಿತು. ಮೊದಲನೇ ತುತ್ತಿಗೆ ಹರಳು ಬಂದಂತಾಯಿತು. ಆದರೂ ನಮ್ಮಲ್ಲಿ ಹುಮ್ಮಸ್ಸು ಬಹಳವಾಗಿದ್ದರಿಂದ ನಾವು ಬೇರೆ ಬಂಡಿಯನ್ನು ತೆಗೆದುಕೊಂಡು ಬಂದೆವು. ಇಷ್ಟರಲ್ಲಿ ಉಳಿದ ಎರಡೂ ಬಂಡಿಗಳು ಮುಂದೆ

ಹೋಗಿದ್ದವು. ಬುತ್ತಿಯು ಗಂಟು ನಮ್ಮ ಹತ್ತಿರಯಿರಲಿಲ್ಲ. ನಮ್ಮ ಬಂಡಿ ಯಲ್ಲಿದ್ದವರೆಲ್ಲರೂ ತರುಣರಾದ್ದರಿಂದ ನಮಗೆ ಹಸಿವೆಯನ್ನು ತಡೆಯುವದ್ದು ಸಾಧ್ಯವಾಗಲಿಲ್ಲ. ಬಂಡಿಯನ್ನು ಜೋರಿನಿಂದ ಹೊಡೆದೆವು. ನಮ್ಮ ಉಳಿದ ಬಂಡಿಗಳು ಬಹಳ ಮುಂದೆ ಹೋಗಿದ್ದರಿಂದ ಅವು ನಮ್ಮ ಕಣ್ಣಿಗೆ ಬೀಳಲಿಲ್ಲ. ಬಂಡಿಯ ತುಂಬ ಹುಡುಕಾಡಿದೆವು. ಆದರೆ ಬಂಡಿಯಲ್ಲಿ ತಿನ್ನುವ ಪದಾರ್ಥ ಗಳೇನೂ ಇರಲಿಲ್ಲ, ನಿರುಪಾಯರಾಗಿ ಸುಮ್ಮನೆ ಕುಳಿತುಕೊಂಡೆವು.

ನಾವು ನದಿಯ ತೀರವನ್ನು ಮುಟ್ಟಿದಾಗ ಎರಡು ಹೊಡೆದುಹೋಗಿತ್ತು. ನಮ್ಮ ಹಿರಿಯರು ಜಳಕ ಮಾಡಿ ಊಟ ಮಾಡಿರಿ ಎಂದರು. ನಮಗೆ ಬಹಳ ಹಸಿವೆಯಾಗಿತ್ತು. ಊಟ ಮಾಡಿಯೇ ಜಳಕ ಮಾಡುವದಾಗಿ ಹಟ ಹಿಡಿ ದೆವು. ಆದಕ್ಕೆ ನಮ್ಮ ಹಿರಿಯರು ಒಪ್ಪಿಕೊಳ್ಳಲಿಲ್ಲ. ಬುತ್ತಿಯಗಂಟು ಅವರ ಕಡೆಗಿದ್ದುದರಿಂದ ನಾವು ಸೋಲಬೇಕಾಯಿತು. ನದಿಯಲ್ಲಿ ಮುಣಿಗಿಬಂದೆವು. ಮನದಣಿ ಈಸಬೇಕೆಂದು ನಾವು ಇಚ್ಛಿಸಿದ್ದೆವು. ಆದರೆ ಹಸಿವೆಯು ನಮ್ಮನ್ನು ತೀವ್ರವಾಗಿ ಬಾಧಿಸುತ್ತಿದ್ದುದರಿಂದ ಕಾಕಸ್ನಾನ ಮಾಡಿದೆವು.

ಊಟಮಾಡಿ ಅಲ್ಲಿಯೇ ವಿಶ್ರಮಿಸಿದೆವು. ಸಂಜೆಯ ಹೊತ್ತಿಗೆ ಅಲ್ಲಿಂದ ಹೊರಟೆವು. ಸ್ವಲ್ಪ ಹೊತ್ತಿನಲ್ಲಿಯೇ ಜೋಗುಳಬಾವಿಗೆ ಬಂದೆವು. ಆಗ ರಾತ್ರಿಯ ಸಮಯವಾದ್ದರಿಂದ ಎಲ್ಲ ಕಡೆಗೂ ಬೆಳದಿಂಗಳು ಬಿದ್ದಿತ್ತು. ತಂಪಾದಗಾಳಿಯು ಸುವಾಸನೆಯನ್ನು ಎಲ್ಲಕಡೆಗೂ ಹರಡಿತ್ತು. ರಾತ್ರಿಯ ಹೊತ್ತು ನಾವು ಅಲ್ಲಿಯೇ ಇಳಿದುಕೊಂಡೆವು.

ಮುಂಜಾನೆ ಎದ್ದು ಯಾರಿಗೂ ತಿಳಿಯದಂತೆ ಜೋಗುಳಬಾವಿಯಲ್ಲಿ ಮನದಣಿಯುವಷ್ಟು ಈಸಾಡಿದೆವು. ಆಗ ಜಾತ್ರೆಯ ದಿವಸವಾಗಿದ್ದರಿಂದ ಬಹಳೇ ಗದ್ದಲವಿತ್ತು. ದೇವಿಯ ದರ್ಶನವಾಗುವದು ಕಷ್ಟ ಸಾಧ್ಯವಾಗಿತ್ತು. ದೇವಸ್ಥಾನದಲ್ಲಿರಬೇಕಾದ ಶಾಂತತೆಯು ಅಲ್ಲಿರಲಿಲ್ಲ. ಎಲ್ಲಿ ನೋಡಿದಲ್ಲಿ ಹೊಲಸು. ನಮ್ಮ ಜನರಿಗೆ ಪವಿತ್ರ ಸ್ಥಾನವನ್ನು ಸ್ವಚ್ಛವಾಗಿಡಬೇಕೆಂಬ ಕಲ್ಪನೆಯೂ ಬರುದದಿಲ್ಲ. ದೇವಸ್ಥಾನಕ್ಕೆ ಬರುವವರೆಲ್ಲರೂ ಬಾಳೆಯಹಣ್ಣಿನ ಸಿಪ್ಪೆಗಳನ್ನು ಗುಡಿಯ ತುಂಬ ಒಗೆದಿದ್ದರು.

ಎಲ್ಲಮ್ಮನ ಗುಡಿಯು ವಿಸ್ತಾರವಾಗಿರುವದು. ಇಲ್ಲಿ ನೀರಿನ ಸಣ್ಣಸಣ್ಣ ಹೊಂಡಗಳಿರುವವು. ಎಲ್ಲಮ್ಮನ ಗುಡಿಯ ಸಮೀಪದಲ್ಲಿಯೇ ಪರಶುರಾಮನ ಗುಡಿಯಿರುವದು. ಇಲ್ಲಿಯ ದೃಶ್ಯವು ನಯನಮನೋಹರವಾಗಿರುವದು. ಜಾತ್ರೆಯು ನಡೆದಾಗ ಇಲ್ಲಿಗೆ ಬರದೆ ಉಳಿದ ವೇಳೆಯಲ್ಲಿ ಇಲ್ಲಿಗೆ ಬಂದರೆ ಮನಸ್ಸಿಗೆ ಶಾಂತಿ ದೊರೆಯುವದು. ಎತ್ತರವಾದ ಪ್ರದೇಶದಲ್ಲಿ ಎಲ್ಲಮ್ಮನ ಗುಡಿಯಿರುವದು. ನಾವು ದೇವಿಗೆ ಕಾಯಿ ಒಡಿಸಿಕೊಂಡು ಹಿಂದಿರುಗಿದೆವು. ದೇವಿಗಾಗಿ ತಂದ ಬಾಳೆಯ ಹಣ್ಣುಗಳನ್ನು ತೃಪ್ತಿಯಾಗುವತನಕ ತಿಂದೆವು.

ಎಲ್ಲಮ್ಮನ ಗುಡ್ಡದಿಂದ ಬೆಳದಿಂಗಳಲ್ಲಿ ನಮ್ಮ ಊರಿಗೆ ತಿರುಗಿದೆವು. ಬಂಡಿಯಲ್ಲಿ ತುದಿಮೊದಲಿಲ್ಲದ ಹರಟೆ ಹೊಡೆಯುತ್ತ ಕುಳಿತುಕೊಂಡಿದ್ದೆವು. ಇದರಿಂದ ರಾತ್ರಿ ಹಗಲುಗಳ ಕಲ್ಪನೆಯೇ ನಮಗಿರಲಿಲ್ಲ. ಚಂದ್ರನು ಆಕಾಶದಲ್ಲಿಯ ಮೋಡಗಳ ಸಂಗಡ ಆಟವಾಡುತ್ತ ಸಾಗುತ್ತಿದ್ದನು. ಕ್ಷಣಕಾಲ ನಾವು ಜಗತ್ತನ್ನು ಮರೆತು ಹರಟೆಯಲ್ಲಿ ಮಗ್ನರಾಗಿದ್ದೆವು. ಬಂಡಿಯಲ್ಲಿ ಕುಳಿತಾಗ ಬಹುದೂರದ ಗಿಡಗಳು ಸಾಲುಸಾಲಾಗಿ ನಿಂತು ಸ್ವಾಗತಿಸುತ್ತಿರುವ ಸಿಪಾಯಿಗಳಂತೆ ನಮಗೆ ತೋರುತ್ತಿದ್ದವು. ಎಲ್ಲ ಕಡೆಗೆ ಶಾಂತತೆಯು ಪಸರಿಸಿತ್ತು. ನಮ್ಮ ಬಂಡಿಯ ಸಪ್ಪಳವನ್ನು ಬಿಟ್ಟು ಬೇರೆ ಯಾವ ಸಪ್ಪಳವೂ ಇರಲಿಲ್ಲ. ಬಂಡಿಯು ಸಾವಕಾಶವಾಗಿ ಹೋಗುತ್ತಿತ್ತು. ಗಾಳಿ ಬೀಸಿದಾಗ ಗಿಡಗಳ ಎಲೆಗಳು ತೂಗಾಡುವದರಿಂದ ಒಂದು ತರದ ಸಪ್ಪಳವು ಆಗಾಗ್ಗೆ ಆ ನೀರವತೆಯನ್ನು ಕಲಕುತ್ತಿತ್ತು. ಸುತ್ತುಮುತ್ತಲು ಹಸಿರುಬಿಳಿಯು ಕಾಣುತ್ತಿತ್ತು. ಸಾವಕಾಶವಾಗಿ ಬಂಡಿಯು ಸಾಗಿದ್ದರಿಂದ ಸೃಷ್ಟಿಸೌಂದರ್ಯವನ್ನು ಆ ಬೆಳದಿಂಗಳಲ್ಲಿ ಸವಿಯಲು ಅನುಕೂಲವಾಗಿತ್ತು. ಇಂದು ನಾವು ಮೋಟಾರು, ಉಗಿಬಂಡಿಗಳಲ್ಲಿ ಕುಳಿತು ಸಂಚಾರ ಮಾಡುವದರಿಂದ ಸೃಷ್ಟಿಸೌಂದರ್ಯದ ಮಹತ್ವವೇ ನಮಗೆ ಗೊತ್ತಿಲ್ಲದಂತಾಗಿದೆ. ಬಂಡಿಯಲ್ಲಿ ಪ್ರವಾಸ ಮಾಡಿದರೆ ಸೃಷ್ಟಿಯಗೂಡ ನಮ್ಮ ಸಂಬಂದ ಬರುತ್ತದೆ. ಯಾವದೊಂದು ಪ್ರದೇಶವನ್ನು ನೋಡಬಯಸುವವರು ಚಕ್ಕಡಿಯಲ್ಲಿ ಪ್ರವಾಸ ಮಾಡಬೇಕು. ಅಂದರೆ ನಿಜವಾದ ಯಾತ್ರೆಯ ಆನಂದವನ್ನು ಪಡೆಯಬಲ್ಲರು. ಆ ಆನಂದವು ನಮಗೆ ಈ ಯಾತ್ರೆಯಲ್ಲಿ ದೊರೆಯಿತು.

# ೩೫. ಜಾತೀಯ ಸಮಸ್ಯೆ

ಧರ್ಮದ ತಪ್ಪು ತಿಳುವಳಿಕೆಯಿಂದ ಜಗತ್ತಿನಲ್ಲಿ ಅನೇಕ ಅನರ್ಥಗಳಾಗಿವೆ. ಧರ್ಮದ ಸರಿಯಾದ ಕಲ್ಪನೆಯಿರದ್ದರಿಂದಲೇ ಕ್ರಿಸ್ತ ಧರ್ಮದ ಸಂಸ್ಥಾಪಕನಾದ ಯೇಸುವನ್ನು ಗಲ್ಲಿಗೇರಿಸಲಾಯಿತು. ಸಾಕ್ರೇಟೀಸನು ಧರ್ಮದಲ್ಲಿ ವಿಶ್ವಾಸವಿಲ್ಲದವನೆಂದು ನಿರ್ಣಯಿಸಿ ಆಗಿನ ಜನರು ಅವನಿಗೆ ವಿಷಪ್ರಾಶನ ಮಾಡಿಸಿದರು. ಜನರಿಗೆ ಧರ್ಮವನ್ನು ಬೋಧಿಸುವದಕ್ಕಾಗಿ ಅನೇಕ ಮಹಾಪುರುಷರು ಪ್ರಯತ್ನಿಸಿದ್ದಾರೆ. ಆದರೂ ಜಗತ್ತು ಈ ಮಹಾಪುರುಷರಿಂದ ಯಾವ ಪಾಠಗಳನ್ನೂ ಕಲಿಯಲಿಲ್ಲ. ಎಲ್ಲ ಧರ್ಮಗಳೂ ದೇವರು ಒಬ್ಬನೇ ಎಂದು ಸಾರಿರುವವು. ಹಿಂದೂ ಧರ್ಮದಲ್ಲಿ 'ಏಕಂ ಸದ್ವಿಪ್ರಾ ಬಹುದಾ ವದಂತಿ' ಎಂದು ಹೇಳಲಾಗಿದೆ. ಆದರೂ ನಾವು ಕೋಟ್ಯಾನುಕೋಟಿ ದೇವರುಗಳನ್ನು ನಿರ್ಮಿಸಿಕೊಂಡಿದ್ದೇವೆ. ಎಲ್ಲ ಧರ್ಮಗಳೂ ಸತ್ಯ, ಪ್ರೀತಿ, ಪರೋಪಕಾರ, ಅನಾಸಕ್ತಿ, ಅಹಿಂಸೆ ಇವುಗಳನ್ನೇ ಬೋಧಿಸುತ್ತವೆ. ಆದರೆ ಯಾರೂ ಈ ತತ್ವಗಳಂತೆ ಆಚರಿಸುವದಿಲ್ಲ. ನಿಜವಾದ ಧರ್ಮದ ತತ್ವಗಳು ನಮಗೆ ಗೊತ್ತಿಲ್ಲದ್ದರಿಂದಲೇ ನಾವು ಒಬ್ಬರಿಗೊಬ್ಬರು ಬಡಿದಾಡುತ್ತೇವೆ. ವಿಚಾರ ಮಾಡಿ ನೋಡಿದರೆ ಧರ್ಮ ಧರ್ಮಗಳಲ್ಲಿ ವಿರೋಧವು ಇರುವದಿಲ್ಲ. ದೇವರ ಸಾಕ್ಷಾತ್ಕಾರವನ್ನು ಪಡೆಯುವದಕ್ಕೆ ಅವು ಬೇರೆ ಬೇರೆ ಮಾರ್ಗಗಳನ್ನು ತೋರಿಸುತ್ತವೆ. ನಾವು ಯಾವದೊಂದು ಧರ್ಮದಿಂದ ನಡೆದರೂ ಮುಕ್ತಿ ಲಭಿಸುವದು. ಪರಧರ್ಮದವರನ್ನು ನಿಂದಿಸುವ ಕಾರಣವಿಲ್ಲ.

ಕ್ರಿಸ್ತನು ವೈರಿಗಳನ್ನು ಪ್ರೀತಿಸಬೇಕೆಂದು ಹೇಳಿರುವನು. ಹಿಂದೂ ಧರ್ಮ ಗ್ರಂಥಗಳಲ್ಲಿಯೂ ಈ ತತ್ವವನ್ನೇ ಉಪದೇಶಿಸಲಾಗಿದೆ. ಶ್ರೀ ರಾಮಕೃಷ್ಣ ಪರಮಹಂಸರು ಬೇರೆ ಬೇರೆ ಧರ್ಮಗಳಲ್ಲಿ ಹೇಳಿದ ತತ್ವಗಳಂತೆ ನಡೆದು ಯಾವ ರೀತಿ ಮುಕ್ತಿಯನ್ನು ಸಂಪಾದಿಸಬಹುದು ಎಂಬುದನ್ನು ಪ್ರತ್ಯಕ್ಷವಾಗಿ ತೋರಿಸಿಕೊಟ್ಟಿದ್ದಾರೆ. ಅವರ ಶಿಷ್ಯರಾದ ಸ್ವಾಮಿ ವಿವೇಕಾನಂದರು ಚಿಕಾಗೋ ಉಪನ್ಯಾಸದಲ್ಲಿ ಎಲ್ಲ ಧರ್ಮಗಳೂ ಸರಿಯಾದವುಗಳು ಎಂದು ಹೇಳಿದ್ದಾರೆ. ಆದರೂ ನಾವು ಧರ್ಮದ ಹೆಸರಿನಲ್ಲಿ ಕೊಲೆ ಸುಲಿಗೆ

ಗಳನ್ನು ಮಾಡುತ್ತೇವೆ. ಬಂಗಾಲ ಮತ್ತು ಪಂಜಾಬ ಪ್ರಾಂತಗಳಲ್ಲಿ ಹಿಂದೆ ಎಂದೂ ನಡೆಯದಷ್ಟು ಕೊಲೆ ಸುಲಿಗೆಗಳು ಧರ್ಮದ ಹೆಸರಿನಲ್ಲಿ ನಡೆದವು. ಇದಕ್ಕೆ ತಪ್ಪು ತಿಳುವಳಿಕೆಯೇ ಕಾರಣ. ಈ ಕೊಲೆ ಸುಲಿಗೆಗಳಿಂದ ದೇವರು ಸಂತುಷ್ಟನಾಗುವನೇ ಎಂಬುದನ್ನು ನಾವು ವಿಚಾರಿಸಬೇಕು. 'ತನ್ನಂತೆ ಪರರ ಬಗೆದೊಡೆ ಕೈಲಾಸಬಿನ್ನಣವಕ್ಕು' ಎಂದು ಸರ್ವಜ್ಞನು ಹೇಳಿರುವನು. ನಮ್ಮಂತೆ ಎರಡನೆಯವನಿಗೂ ತನ್ನ ಧರ್ಮದಂತೆ ನಡೆಯುವ ಸ್ವಾತಂತ್ರ್ಯವಿರುವದು. ನಾವು ನಮ್ಮ ಧರ್ಮದಂತೆ ನಡೆಯೋಣ. ಬೇರೆಯ ವರು ತಮ್ಮ ಧರ್ಮದಂತೆ ನಡೆಯಲಿ.

ರಾಜಕಾರಣದಲ್ಲಿ ಧರ್ಮವು ಬಂದದ್ದರಿಂದ ನಮಗೆ ಬಹಳ ಹಾನಿ ಯಾಗಿದೆ. ಧರ್ಮವೆಂದರೆ ಅನೇಕ ಅರ್ಥಗಳಿವೆ. ಧರ್ಮ ಎಂದರೆ ಸತ್ಯ, ಕರ್ತವ್ಯ, ತತ್ವಗಳು, ಸಂಪ್ರದಾಯ ಎಂದು ಅನೇಕ ಬಗೆಯಾಗಿ ಅರ್ಥ ಮಾಡಬಹುದು. ಜಾತಿ ಅನ್ನುವ ಪದವು ಸಂಕುಚಿತವಾದುದು. ಜಾತಿಯು ವ್ಯಕ್ತಿಗೆ ಸಂಬಂಧಿಸಿದ್ದು. ರಾಜಕಾರಣ, ಶಿಕ್ಷಣ, ಸಾರ್ವಜನಿಕ ಇವುಗಳಲ್ಲಿ ಜಾತಿಯು ಪ್ರವೇಶಿಸಬಾರದು. ಆದರೆ ಈ ವಿಷವು ಇಂದು ಎಲ್ಲ ರಂಗಗಳ ಲ್ಲಿಯೂ ಪ್ರವೇಶಿಸಿರುವದು. ಶಿಕ್ಷಣ ಸಂಸ್ಥೆಗಳಲ್ಲಿಯೂ ಜಾತೀಯತೆ ಇಷ್ಟು ಪ್ರಬಲವಾದರೆ ಮುಂದೆ ನಮ್ಮ ಉನ್ನತಿಯು ಹೇಗೆ ಆದೀತು? ಇದರಿಂದ ಜಾತಿಗಳಲ್ಲಿ ಒಳಜಗಳಗಳು ಉತ್ಪನ್ನವಾಗಿ ನಮ್ಮ ದೇಶವು ಅಧೋಗತಿಗೆ ಹೋಗುವದು. ರಾಜಕಾರಣದಲ್ಲಿಯೂ ಜಾತೀಯತೆಯು ಪ್ರವೇಶ ಮಾಡಿರು ವದು. ನಾವು ಇದನ್ನು ಸಕಾಲದಲ್ಲಿ ನಾಶಮಾಡದಿದ್ದರೆ ನಮ್ಮ ಸಂಸ್ಕೃತಿಯು ಹಾಳಾಗುವದರಲ್ಲಿ ಸಂದೇಹವಿಲ್ಲ. ಪ್ರತಿಯೊಬ್ಬನೂ ತನ್ನಮನಸ್ಸಿಗೆ ತಿಳಿದಂತೆ ದೇವರನ್ನು ಪೂಜಿಸಬಹುದು; ತನ್ನ ಮನಸ್ಸಿಗೆಬಂದ ಧರ್ಮವನ್ನು ಅನುಸರಿಸ ಬಹುದು. ಆದರೆ ತನ್ನ ಧರ್ಮವನ್ನಾಗಲಿ, ಜಾತಿಯನ್ನಾಗಲಿ ಒತ್ತಾಯದಿಂದ ಪ್ರಸಾರ ಮಾಡಲು ಪ್ರಯತ್ನಿಸಬಾರದು. ಮತ್ತು ಸಾರ್ವ ಜನಿಕ ಜೀವನದಲ್ಲಿ ಜಾತಿಗೆ ಸ್ಥಾನವಿರಬಾರದು. ಶಿಕ್ಷಣ ಸಂಸ್ಥೆಗಳಲ್ಲಿ ಜಾತೀ ಯತೆಯು ಪ್ರವೇಶಿಸಬಾರದು. ಭಗವದ್ ಗೀತೆಯಲ್ಲಿ ಕೃಷ್ಣನು ಬೇರೆ ಬೇರೆ ಉದ್ಯೋಗ ಮಾಡುವದರಿಂದ ಬೇರೆ ಬೇರೆ ಜಾತಿಗಳು ಉತ್ಪನ್ನವಾದವು ಎಂದು ಹೇಳಿರುವನು. ಆದರೆ ಆ ತತ್ವವನ್ನು ನಾವು ಮರೆತು ಬಿಟ್ಟಿದ್ದೇವೆ.

ಒಂದು ಜಾತಿಯಲ್ಲಿ ಹುಟ್ಟಿದ ಮಾತ್ರಕ್ಕೆ ಅವನು ಅಧಮನೆಂದು ಭಾವಿಸ ಬಾರದು. ಗುಣಗಳಿಂದ ಮನುಷ್ಯನು ಪೂಜ್ಯನಾಗುವನು. ಒಳ್ಳೇ ಶೀಲವುಳ್ಳ ವನು ಯಾವ ಜಾತಿಯಲ್ಲಿ ಹುಟ್ಟಿದರೇನು? ದುರ್ಗುಣಿಯಾದವನು ಯಾವ ಜಾತಿಯಲ್ಲಿ ಹುಟ್ಟಿದರೂ ಸಮಾಜದ ಮನ್ನಣೆಗೆ ಪಾತ್ರನಾಗಲಾರನು. ಜಾತಿ ಜಾತಿಗಳಲ್ಲಿ ಹೆಚ್ಚಿನ ಸಂಪರ್ಕವು ಬೆಳೆಯಬೇಕು. ಅಂತರ ಜಾತೀಯ ವಿವಾಹಗಳು ರೂಢಿಯಲ್ಲಿ ಬರಬೇಕು. ಸಾಮೂಹಿಕವಾಗಿ ಭೋಜನ ಸಮಾ ರಂಭಗಳು ಪ್ರಚಾರದಲ್ಲಿ ಬರಬೇಕು. ಜನರಿಗೆ ನಿಜವಾದ ಧರ್ಮತತ್ವಗಳನ್ನು ತಿಳಿಸಿ ಹೇಳಬೇಕು.

ಭಾರತ ಸರಕಾರವು ಜಾತ್ಯಾತೀತ ರಾಷ್ಟ್ರವಾಗಿದೆ. ಸರಕಾರವು ಜಾತಿ ಜಾತಿಗಳಲ್ಲಿಯ ಭೇದಗಳನ್ನು ಮನ್ನಿಸುವದಿಲ್ಲ; ಎಲ್ಲರನ್ನೂ ಒಂದೇ ಭಾವನೆ ಯಿಂದ ನಡಿಸಿಕೊಳ್ಳುವದು. ಪ್ರತಿಯೊಬ್ಬರಿಗೂ ಧಾರ್ಮಿಕ ಸ್ವಾತಂತ್ರ್ಯ ವನ್ನು ಕೊಡಲಾಗಿದೆ. ಆದರೆ ಧರ್ಮವನ್ನು ಸಾರ್ವಜನಿಕ ಜೀವನದಲ್ಲಿ ತರ ಬಾರದು. ಜಾತಿಗೂ ರಾಜಕಾರಣಕ್ಕೂ ಯಾವ ಸಂಬಂಧವೂ ಇರುವದಿಲ್ಲ. ಜಾತಿಯ ಮೇಲಿಂದ ರಾಜಕೀಯ ಪಕ್ಷಗಳನ್ನು ಕಟ್ಟಿಕೊಳ್ಳುವದು ಬಹಳ ಗಂಡಾಂತರಕರವಾದದ್ದು. ಜಾತೀಯತೆಯ ಪ್ರಚಾರ ಮಾಡುವವರನ್ನು ಸರ ಕಾರವು ಉಗ್ರವಾಗಿ ದಂಡಿಸಬೇಕು ನಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ಜಾತೀ ಯತೆಗೆ ಆಸ್ಪದ ಕೊಡಬಾರದು. ಎಲ್ಲ ಧರ್ಮದವರೂ ಕೂಡಿ ಕೆಲಸ ಮಾಡ ಬೇಕು. ಯಾವದೊಂದು ಸ್ಥಳಕ್ಕೆ ಉಮೇದುವಾರನನ್ನು ನೇಮಿಸಿಕೊಳ್ಳು ವಾಗ ಅವನ ಜಾತಿಯನ್ನು ನೋಡದೆ ಅವನ ಯೋಗ್ಯತೆಯನ್ನು ಪರೀಕ್ಷಿಸ ಬೇಕು. ನಮ್ಮ ಜನತೆಯಲ್ಲಿ ತಿಳುವಳಿಕೆ ಉತ್ಪನ್ನವಾಗದೆ ಈ ಕೆಲಸವಾಗ ಲಾರದು. ದೇಶವತ್ಸಲರಾದವರು ಜಾತೀಯತೆಯ ಈ ವಿಷವನ್ನು ಸಮಾಜ ದಿಂದ ತೆಗೆದೊಗೆಯಲು ಇಂದು ಕಂಕಣಬದ್ಧರಾಗಬೇಕಾಗಿದೆ. ಜಾತೀಯ ತೆಯು ನಾಶವಾಗದಿದ್ದರೆ ನಮಗೆ ದೊರೆತ ಸ್ವಾತಂತ್ರ್ಯದ ಫಲವನ್ನು ಉಪ ಭೋಗಿಸಲು ನಾವು ಸಮರ್ಥರಾಗಲಾರೆವು.

## ೩೬. ನಮ್ಮ ಶಾಲೆಯ ವಾರ್ಷಿಕೋತ್ಸವ

ನಮ್ಮ ಶಾಲೆಯ ವಾರ್ಷಿಕೋತ್ಸವದ ಸಲುವಾಗಿ ನಾವು ಒಂದುತಿಂಗಳ ವರೆಗೆ ಶ್ರಮಿಸಿದೆವು. ಅಭ್ಯಾಸಕ್ಕಿಂತಲೂ ಹೆಚ್ಚಿನ ಉತ್ಸಾಹವನ್ನು ನಾವಿಲ್ಲಿ

ಕಾಣಬಹುದಾಗಿತ್ತು. ಅಭ್ಯಾಸದಲ್ಲಿ ಹಿಂದೆ ಉಳಿದವರು ತಮ್ಮ ಕಾರ್ಯ ಕುಶಲತೆಯಿಂದ ಬಹಳ ಪ್ರಶಂಸೆಗೆ ಪಾತ್ರರಾದರು. ನಾವು ಅಭ್ಯಾಸವನ್ನು ಮರೆತು ಬಹಳ ವೇಳೆಯನ್ನು ವಾರ್ಷಿಕೋತ್ಸವದ ಸಿದ್ಧತೆಗಾಗಿ ವೆಚ್ಚಮಾಡಿದೆವು. ಕೈಲಾಸಂರವರ 'ಟೊಳ್ಳುಗಟ್ಟಿ' ಮತ್ತು ಶ್ರೀರಂಗರ "ಹರಿಜನ್ವಾರ" ನಾಟಕಗಳನ್ನು ಈ ಸಮಾರಂಭಕ್ಕಾಗಿ ಸಿದ್ಧಪಡಿಸಿದೆವು.

ಮೊದಲನೇ ದಿವಸ ಓಡುವದು, ಜಿಗಿಯುವದು ಮೊದಲಾದಸಂದ್ಯಾಟಗಳನ್ನು ಏರ್ಪಡಿಸಿದ್ದರು. ಈ ಸಂದ್ಯಾಟಗಳಲ್ಲಿ ಬಹಳ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಜಿಗಿಯುವಾಗ ಕೆಲವು ವಿದ್ಯಾರ್ಥಿಗಳು ನೆಲಕ್ಕುರುಳಿದರು. ಇದರಿಂದ ಪ್ರೇಕ್ಷಕರಿಗೆ ಬಹಳ ವಿನೋದವಾಯಿತು. ಆ ಹೊತ್ತು ರಾತ್ರಿ ನಾವು "ಟೊಳ್ಳುಗಟ್ಟಿ" ನಾಟಕವನ್ನು ಆಡಿದೆವು. ಈ ನಾಟಕವನ್ನು ನೋಡಿದವರೆಲ್ಲರೂ ನಮ್ಮನ್ನು ಬಹಳವಾಗಿ ಹೊಗಳಿದರು. ಈ ನಾಟಕದಲ್ಲಿ ಕೈಲಾಸಂರವರು ಕೇವಲ ಪುಸ್ತಕ ವಿದ್ಯೆಯು ಮಹತ್ವದ್ದಲ್ಲವೆಂಬ ತತ್ವವನ್ನು ಬಹಳ ಮನೋಹರವಾದ ರೀತಿಯಲ್ಲಿ ಪ್ರತಿಪಾದಿಸಿದ್ದಾರೆ. ನಾಟಕವಾಡುವದಕ್ಕೆ ಬೇಕಾಗುವ ಎಲ್ಲ ಸಾಮುಗ್ರಿಗಳನ್ನು ನಾವೇ ದೊರಕಿಸಿದ್ದೆವು. ಹಂದರವನ್ನು ನಾವೇ ನಿರ್ಮಾಣ ಮಾಡಿದ್ದೆವು. ಮರುದಿವಸ ಶ್ರೀರಂಗರ "ಹರಿಜನ್ವಾರ" ನಾಟಕವನ್ನಾಡಿದೆವು. ಈ ನಾಟಕದಲ್ಲಿ ಶ್ರೀರಂಗರು ಹಾಸ್ಯಮಯವಾದ ಶೈಲಿಯಲ್ಲಿ ಜಾತೀಯತೆಯನ್ನು ಖಂಡಿಸಿದ್ದಾರೆ. ಈ ನಾಟಕವು ಮುಗಿದ ಬಳಿಕ ವಿವಿಧ ವಿನೋದಾವಳಿಗಳಿಂದ ಜನರನ್ನು ಸಂತೋಷಪಡಿಸಿದೆವು. ನಮ್ಮ ನಾಟಕವನ್ನು ನೋಡುವದಕ್ಕಾಗಿ ಊರಲ್ಲಿಯ ಪ್ರಮುಖರೆಲ್ಲರೂ ಬಂದಿದ್ದರು. ಈ ನಾಟಕಗಳನ್ನು ನೋಡಿ ಊರಲ್ಲಿಯ ಜನರಿಗೆ ನಮ್ಮ ಶಾಲೆಯ ಬಗ್ಗೆ ಆದರ ಅಭಿಮಾನಗಳು ಉಂಟಾಗಿರಬೇಕು. ನಮ್ಮ ಕಾರ್ಯಕುಶಲತೆಯನ್ನು ಅಂದು ವ್ಯಕ್ತಪಡಿಸಿದೆವು.

ಇದಾದಬಳಿಕ ನಮ್ಮ ಶಾಲೆಯ ಮುಖ್ಯಾಧ್ಯಾಪಕರು ಶಾಲೆಯ ವಿಷಯವಾಗಿ ಕೆಲವು ಮಾತುಗಳನ್ನು ಹೇಳಿದರು. ಅವರು ತಮ್ಮ ಭಾಷಣದಲ್ಲಿ ನಮ್ಮ ಕಾರ್ಯ ಕುಶಲತೆಯನ್ನು ಬಹಳವಾಗಿ ಕೊಂಡಾಡಿದರು. ಆಮೇಲೆ ಮುಖ್ಯ ಅತಿಥಿಗಳಿಂದ ಪಾರಿತೋಷಕ ವಿತರಣೆಯು ನಡೆಯಿತು. ಸಂದ್ಯಾಟಗಳಲ್ಲಿ ಗೆದ್ದಂಥವರಿಗೆ ಮುಖ್ಯ ಅತಿಥಿಗಳಿಂದ ಪಾರಿತೋಷಕವನ್ನು ಕೊಡಿಸಿ

ಲಾಯಿತು. ಅತಿಥಿಗಳು ನಾವು ಶೃಂಗಾರ ಮಾಡಿದ ಕೋಣೆಗಳನ್ನು ಪರೀಕ್ಷಿಸಿ ಹತ್ತನೆಯ ವರ್ಗದವರ ಕೋಣೆಗೆ ಬಹುಮಾನ ಕೊಟ್ಟರು. ಪ್ರತಿಯೊಂದು ವರ್ಗದವರೂ ತಮ್ಮ ತಮ್ಮ ಕೋಣೆಗಳನ್ನು ಸಿಂಗರಿಸಿದ್ದರು. ಗೋಡೆಗಳಿಗೆ ವಿದ್ಯಾರ್ಥಿಗಳೇ ಸುಣ್ಣವನ್ನು ಹಚ್ಚಿದ್ದರು. ಹಲವು ವಿದ್ಯಾರ್ಥಿಗಳು ತಮ್ಮ ಕೋಣೆಗಳನ್ನು ಬಾಳೆಯ ಕಂಬಗಳಿಂದಲೂ, ತಳಿರು ತೋರಣಗ ಳಿಂದಲೂ ಸಿಂಗರಿಸಿದ್ದರು. ಈ ಬಗೆಯ ಉತ್ಸಾಹವನ್ನು ಕಂಡು ತಮಗೆ ಬಹಳ ಆನಂದವಾಗಿದೆಯೆಂದು ಅತಿಥಿಗಳು ಹೇಳಿದರು. ಎಲ್ಲರಿಗೂ ಬಹು ಮಾನ ಕೊಡುವದು ಸಾಧ್ಯವಿಲ್ಲದ್ದಕ್ಕಾಗಿ ಅವರು ವಿಷಾದವನ್ನು ವ್ಯಕ್ತಪಡಿ ಸಿದರು. ಮುಖ್ಯ ಅತಿಥಿಗಳು ತಮ್ಮ ಭಾಷಣದಲ್ಲಿ ನಮ್ಮ ಕಲಾಪ್ರೇಮಕ್ಕಾ ಗಿಯೂ, ಸಂಘಟನಾ ಚಾತುರ್ಯಕ್ಕಾಗಿಯೂ ತಮ್ಮ ಆನಂದವನ್ನು ವ್ಯಕ್ತ ಪಡಿಸಿದರು.

ಅತಿಥಿಗಳು ತಮ್ಮ ಭಾಷಣದಲ್ಲಿ ಓದು-ಬರಹಗಳಿಗಿಂತಲೂ ಕಲಾ ಪ್ರೇಮವು ಶ್ರೇಷ್ಠವಾದದ್ದೆಂದು ಹೇಳಿದರು. ವಿದ್ಯಾರ್ಥಿಗಳು ಸಾಹಿತ್ಯ, ಸಂಗೀತ ಕಲೆಗಳಲ್ಲಿ ಅಭಿರುಚಿಯುಳ್ಳವರಾಗಬೇಕೆಂದು ಉಪದೇಶಿಸಿದರು. ಅತಿಥಿಗಳ ಭಾಷಣದ ತರುವಾಯ 'ಜನಗಣಮನ ಅಧಿನಾಯಕ' ಗೀತ ದೊಂದಿಗೆ ಕಾರ್ಯಕ್ರಮವು ಕೊನೆಗೊಂಡಿತು. ಮರುದಿವಸ ಶಾಲೆಗೆ ಬಿಡುವು ಕೊಡಲಾಯಿತು. ನಾವು ಮಾಡಿದ ಕಾರ್ಯವನ್ನು ಬಹಳ ಜನರು ಹೊಗಳಿದ್ದರಿಂದ ನಾವು ಮನಸ್ಸಿನಲ್ಲಿಯೇ ನಮ್ಮನ್ನು ಅಭಿನಂದಿಸಿಕೊಂಡೆವು. ನಮ್ಮ ಕಾರ್ಯಕುಶಲತೆಯನ್ನು ತೋರಿಸುವದಕ್ಕೆ ಅದೊಂದು ಸುಸಂಧಿ ಯಾಗಿತ್ತು. ಊರಲ್ಲಿಯ ಪ್ರಮುಖರನೇಕರು ನಮ್ಮ ಶಾಲೆಯ ಬಗ್ಗೆ ಪ್ರೇಮಾ ದರವುಳ್ಳವರಾಗಿ ವಿದ್ಯಾರ್ಥಿಗಳಿಗೆ ಪ್ರೋತ್ಸಾಹನ ಕೊಡುವದರ ಸಲುವಾಗಿ ಅನೇಕ ಬಹುಮಾನಗಳನ್ನು ಕೊಟ್ಟರು. ನಮ್ಮ ಶಾಲೆಯ ವಾರ್ಷಿಕೋತ್ಸ ವದ ದಿವಸವನ್ನು ನಾನು ಎಂದಿಗೂ ಮರೆಯಲಾರೆನು. ಈ ವಾರ್ಷಿಕೋತ್ಸ ವವು ಶಾಲೆಯ ಬಗ್ಗೆ ನನ್ನಲ್ಲಿ ಪ್ರೀತಿಯನ್ನುಂಟುಮಾಡಿತು. ಇದು ನನ್ನ ಶಾಲೆ ಎಂದು ಅಭಿಮಾನ ತಾಳುವಂತಾಯಿತು. ಇಂಥ ವಾರ್ಷಿಕೋತ್ಸವವು ದಿನಾಲು ಬರಬಾರದೇ ಎಂದು ಮನಸ್ಸು ಹಾತೊರೆಯುವದು.

## ೩೭. ಸ್ತ್ರೀ ಶಿಕ್ಷಣ

'ಯತ್ರ ನಾರ್ಯಸ್ತು ರಮಂತೆ ಪೂಜ್ಯಂತೆ ತತ್ರ ದೇವತಾಃ' ಎಂದು ನಮ್ಮ ಪೂರ್ವಜರು ಹೇಳಿದ್ದಾರೆ. ಉಪನಿಷತ್ತಿನಲ್ಲಿಯೂ ಸ್ತ್ರೀಯರು ತತ್ವ ಜ್ಞಾನ, ದೇವರ ಸ್ವರೂಪ ಮುಂತಾದ ಗಹನ ವಿಷಯಗಳ ಬಗ್ಗೆ ಚರ್ಚೆ ಮಾಡುವದನ್ನು ನೋಡುತ್ತೇವೆ. ಶಂಕರಾಚಾರ್ಯರು ಮಂಡನಮಿಶ್ರ ರೊಂದಿಗೆ ವಾದ ಮಾಡುವಾಗ ಮಂಡನಮಿಶ್ರರ ಹೆಂಡತಿಯೇ ನ್ಯಾಯಾಧೀ ಶಳಾಗಿದ್ದಳಂತೆ! ಭಾರತೀಯ ಸ್ತ್ರೀಯರು ವಿದ್ಯೆಯಲ್ಲಿ ಹಿಂದೆ ಉಳಿದಿರಲಿಲ್ಲ. ಈ ಹೊತ್ತು ಸ್ತ್ರೀಯರೂ ಪುರುಷರೂ ವಿದ್ಯೆಯಲ್ಲಿ ಹಿಂದೆ ಉಳಿದಿದ್ದಾರೆ. ಸ್ತ್ರೀ ಪುರುಷರೆಂದರೆ ರಥದ ಎರಡು ಗಾಲಿಗಳಿದ್ದಂತೆ. ಅವು ಒಂದಕ್ಕೊಂದು ಪೂರಕವಾದವುಗಳಲ್ಲವೇ? ಒಂದೇ ಗಾಲಿಯಿಂದ ರಥವು ನಡೆಯಲಾರದು. ಸಂಸಾರವು ಸರಿಯಾಗಿ ಸಾಗಬೇಕಾದರೆ ಗೃಹಿಣಿಯಾದವಳು ಸುಶಿಕ್ಷಿತಳಾಗಿ ರಬೇಕು. ಮನೆಯಲ್ಲಿ ಅವಳದೇ ಅಧಿಕಾರವಿರುವದು. ಸ್ತ್ರೀಯೆಂದರೆ ಕೇವಲ ವಿಲಾಸದ ವಸ್ತುವಲ್ಲ. ತನ್ನ ಪತಿಯಾದವನಿಗೆ ಅವನ ಕೆಲಸದಲ್ಲಿ ಸಹಾಯ ಮಾಡುವಳು. ಮನೆಯಲ್ಲಿ ಮಕ್ಕಳ ಶಿಕ್ಷಣವೆಲ್ಲವೂ ಅವಳನ್ನೇ ಅವಲಂಬಿ ಸಿರುವದು. ಮಕ್ಕಳಿಗೆ ತಾಯಿಯೇ ಮೊದಲನೆಯ ಗುರುವು. ಇಂಥವಳು ಅಶಿ ಕ್ಷಿತಳಾಗಿದ್ದರೆ ಎಷ್ಟು ಹಾನಿಯಾಗುವದು?

ಓದು-ಬರಹ ಬರದೆ ಇದ್ದ ಮನುಷ್ಯನು ಕಣ್ಣು ಇದ್ದರೂ ಕುರುಡ ನಿದ್ದಂತೆ. ಜ್ಞಾನವನ್ನು ಗಳಿಸುವದಕ್ಕೆ ಪುಸ್ತಕಗಳಿಂದ ಬಹಳ ಸಹಾಯ ವಾಗುತ್ತದೆ. ಸುಶಿಕ್ಷಿತಳಾದ ಸ್ತ್ರೀಯು ಅನೇಕ ಪುಸ್ತಕಗಳನ್ನು ಓದಿ ಜ್ಞಾನ ವನ್ನು ಪಡೆಯುವಳು. ಇದರಿಂದ ಮನೆಯಲ್ಲಿ ಮಕ್ಕಳಿಗೆ ಜ್ಞಾನವನ್ನು ಪಡೆ ಯಲು ಸುಲಭವಾಗುವದು. ತಾಯಿಯಾದವಳು ಅಶಿಕ್ಷಿತಳಾಗಿದ್ದರೆ ಮಕ್ಕಳು ಬೇಗನೆ ಓದು ಬರಹವನ್ನು ಕಲಿಯಲಾರರು. ಚಿಕ್ಕವರಿರುವಾಗಲೇ ಮಕ್ಕಳಲ್ಲಿ ಜ್ಞಾನಲಾಲಸೆಯನ್ನು ಉತ್ಪನ್ನ ಮಾಡಬೇಕು. ಒಳ್ಳೇ ಸಂಗತಿಯ ಲಾಭ ವನ್ನು ತಿಳಿಸಿಹೇಳಬೇಕು. ಇದನ್ನು ಸುಶಿಕ್ಷಿತಳಾದ ತಾಯಿಯು ಮಾತ್ರ ಮಾಡಬಲ್ಲಳು. ಶಿವಾಜಿಯ ತಾಯಿಯು ಅವನಿಗೆ ರಾಮಾಯಣ,ಮಹಾಭಾರ ತದಲ್ಲಿಯ ವೀರರ ಕತೆಗಳನ್ನು ಹೇಳುತ್ತಿದ್ದಳು. ಆ ಕತೆಗಳ ಪರಿಣಾಮವು

ಶಿವಾಜಿಯನ್ನು ವೀರನನ್ನಾಗಿ ಮಾಡಿತು. ತಾನೂ ಅವರಂತೆ ವೀರನಾಗ ಬೇಕೆಂದು ಹವಣಿಸಹತ್ತಿದನು. ಮುಂದೆ ಅವನೇ ಮರಾಠಾ ರಾಜ್ಯವನ್ನು ಸ್ಥಾಪಿಸಿದನು. ಮಕ್ಕಳ ಭವಿತವ್ಯವು ಸಂಪೂರ್ಣವಾಗಿ ತಾಯಿಯನ್ನೇ ಅವ ಲಂಬಿಸಿರುವದು. ವೀರಜನನಿ ಇದ್ದರೆ ಮಾತ್ರ ವೀರಪುತ್ರರಾಗುವರು. ಸ್ವಾಮಿ ವಿವೇಕಾನಂದರು ತಮ್ಮ ಶ್ರೇಯಸ್ಸಿಗೆ ತಾಯಿಯೇ ಕಾರಣವೆಂದು ಹೇಳಿರುವರು. ಇತಿಹಾಸದಲ್ಲಿ ಇಂಥ ಅನೇಕ ಉದಾಹರಣೆಗಳನ್ನು ನೋಡಬಹುದು.

ಬಹಳವಾಗಿ ರೋಗಗಳು ಅಜೀರ್ಣ ಮತ್ತು ಮನೆಯಲ್ಲಿಯ ಸ್ವಚ್ಛತೆಯ ಅಭಾವದ ಮೂಲಕವಾಗಿ ಬರುತ್ತವೆ. ತಾಯಿಯು ಸುಶಿಕ್ಷಿತಳಾಗಿದ್ದರೆ ಅವಳು ಮನೆಯಲ್ಲಿ ಸ್ವಚ್ಛತೆಯ ಬಗ್ಗೆ ಹೆಚ್ಚು ಲಕ್ಷಕೊಡುವಳು. ಇದರಿಂದ ರೋಗಗಳು ಕಡಮೆಯಾಗುವವು. ಬಾಲಕರಿಗೆ ಆರೋಗ್ಯಕರವಾದ ಆಹಾರವನ್ನು ಕೊಡು ವಳು. ಇದರಿಂದ ಬಾಲಕರು ಆರೋಗ್ಯಶಾಲಿಗಳಾಗುವರು. ಚಿಕ್ಕಂದಿನಲ್ಲಿಯೇ ಧೃಡಕಾಯರಾಗಿದ್ದರೆ ಅವರು ತಮ್ಮ ಶರೀರವನ್ನು ಬಹಳ ದಿವಸದ ವರೆಗೆ ಗಟ್ಟಿಮುಟ್ಟಾಗಿ ಇಟ್ಟುಕೊಳ್ಳಬಲ್ಲರು. ಆರೋಗ್ಯಕ್ಕಿಂತಲೂ ಮತ್ತೊಂದು ಭಾಗ್ಯವು ಯಾವದಿರುವದು?

ಸಣ್ಣ ಮಕ್ಕಳಿಗೆ ಅನೇಕ ವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವಿರುವದು. ಅದ್ದರಿಂದ ಅವರು ಅನೇಕ ಪ್ರಶ್ನೆಗಳನ್ನು ಕೇಳುವರು; ತಾಯಿಯು ಸುಶಿಕ್ಷಿತಳಾಗಿದ್ದರೆ ಮಕ್ಕಳಿಗೆ ಸರಿಯಾದ ಉತ್ತರ ಕೊಡುವಳು. ಇಲ್ಲದಿದ್ದರೆ ಅವರನ್ನು ಬೆದರಿಸುವಳು. ಇದರಿಂದ ಅವರ ಜಿಜ್ಞಾಸೆಯು ಕಡಿಮೆಯಾಗುವದು. ಜಿಜ್ಞಾಸೆಯು ಕಡಿಮೆಯಾದರೆ ಅವರು ಹೆಚ್ಚು ವಿಷಯಗಳನ್ನು ಕಲಿತುಕೊಳ್ಳಲಾರರು. ಅವರ ಜ್ಞಾನಲಾಲಸೆಯನ್ನು ಬೆಳೆಸುವದಕ್ಕೆ ಸುಶಿಕ್ಷಿತಳಾದ ತಾಯಿಯಿಂದ ಮಾತ್ರ ಸಾಧ್ಯ.

ಶಿಕ್ಷಣದಿಂದ ನಮ್ಮ ದೃಷ್ಟಿಯು ವಿಸ್ತಾರವಾಗುವದು. ಅಶಿಕ್ಷಿತ ಸ್ತ್ರೀಯರು ಸುಮ್ಮನೆ ಕುಳಿತು ವೇಳೆ ಕಳೆಯುವರು. ಅವರಿಗೆ ಮನೋರಂಜನೆ ಮಾಡಿಕೊಳ್ಳುವದಕ್ಕೆ ಬೇರೆ ಸಾಧನವಿರುವದಿಲ್ಲ. ಸುಶಿಕ್ಷಿತಳಾದವಳು ಕತೆ-ಕಾದಂಬರಿಗಳನ್ನು ಓದಿ ಮನೋರಂಜನೆ ಮಾಡಿಕೊಳ್ಳಬಹುದು. ಮನೋ ರಂಜನೆಯೊಂದಿಗೆ ಜ್ಞಾನವನ್ನೂ ಗಳಿಸಬಹುದು. ತನ್ನ ಮಕ್ಕಳಿಗೂ ಓದು–

ಬರಹವನ್ನು ಕಲಿಸಬಲ್ಲಳು. ಸಂಗೀತವನ್ನು ಕಲಿಯಬಹುದು. ಜಗತ್ತಿನಲ್ಲಿ ನಡೆದಿರತಕ್ಕ ಅನೇಕ ಸಂಗತಿಗಳನ್ನು ತಿಳಿದುಕೊಳ್ಳಬಹುದು. ಮನೆಯಲ್ಲಿ ಮಕ್ಕಳಿಗೆ ಶಿಸ್ತು ಕಲಿಸಬಲ್ಲಳು. ಮನುಷ್ಯನು "ಹಾಸಿಗೆಯಿದ್ದಷ್ಟು ಕಾಲು ಚಾಚಬೇಕು". ಸುಶಿಕ್ಷಿತಳಾದವಳು ಇದ್ದದರಲ್ಲಿಯೇ ಸಂಸಾರ ಸಾಗಿಸುವಳು. ಸಂಸಾರ ಸುಖವು ಸುಶಿಕ್ಷಿತಳಾದ ಗೃಹಿಣಿಯನ್ನೇ ಅವಲಂಬಿಸಿರುವದು.

ಸ್ತ್ರೀಯರು ಸುಶಿಕ್ಷಿತರಾಗಿರಬೇಕು ಎಂಬ ಬಗ್ಗೆ ವಾದವಿಲ್ಲ. ಆದರೆ ಪುರುಷರಿಗೂ ಸ್ತ್ರೀಯರಿಗೂ ಒಂದೇ ಬಗೆಯ ಶಿಕ್ಷಣವಿರಬೇಕೋ ಎಂಬ ಬಗ್ಗೆ ಭಿನ್ನಾಭಿಪ್ರಾಯವಿದೆ. ಸ್ತ್ರೀಯರ ಕೆಲಸವು ಮನೆಯಲ್ಲಿರುವದು. ಬಾಲಕರ ಆರೋಗ್ಯ, ಮಕ್ಕಳ ಮಾನಸಶಾಸ್ತ್ರ ಇವುಗಳನ್ನು ಅವಳು ಅರಿತಿರಬೇಕು. ಸಂಗೀತ, ಹೊಲಿಯುವದು ಇವು ಅವಳಿಗೆ ಗೊತ್ತಿರಬೇಕು. ಆರೋಗ್ಯಶಾಸ್ತ್ರವನ್ನು ಅರಿತಿದ್ದರೆ ಮನೆಯಲ್ಲಿಯ ಎಲ್ಲರೂ ಆರೋಗ್ಯವಾಗಿರುವಂತೆ ಪ್ರಯತ್ನಿಸುವಳು. ಮಕ್ಕಳ ಮಾನಸಶಾಸ್ತ್ರವನ್ನು ಬಲ್ಲವಳಾಗಿದ್ದರೆ ಮಕ್ಕಳನ್ನು ಸರಿಯಾದ ರೀತಿಯಿಂದ ಪೋಷಿಸುವಳು. ಅವರ ಮಾನಸಿಕ ಬೆಳವಣಿಗೆಯನ್ನ ಮಾಡುವಳು. ಇವು ಸ್ತ್ರೀಯಾದವಳಿಗೆ ಹೆಚ್ಚು ಉಪಯುಕ್ತವಾದವುಗಳು. ಪತಿಯಾದವನು ಹೊರಗೆ ದುಡಿದು ಮನೆಗೆ ಬಂದನೆಂದರೆ ಸಂಗೀತದಿಂದ ಅವನ ಮನಸ್ಸನ್ನು ಆನಂದಗೊಳಿಸಬಲ್ಲಳು.

ಆದರೆ ಪುರುಷನೊಡನೆ ಇಂದು ಸ್ತ್ರೀಯು ಸ್ಪರ್ಧೆಗೆ ನಿಂತಿರುವಳು. ಹೆಂಗಸರಿಗೆ ಪುರುಷರಂತೆ ಕಚೇರಿಗಳಲ್ಲಿ ದುಡಿಯಬೇಕೆಂಬ ಆಸೆ ಉತ್ಪನ್ನವಾಗಿರುವದು. ಇದರಿಂದ ನಮ್ಮ ಮನೆಯ ಸ್ಥಿತಿಯು ಕೆಟ್ಟಿರುವದು. ಪತಿಯೂ ಸತಿಯೂ ಕೂಡಿ ಹೊರಗೆ ದುಡಿಯಲು ಹೋದರೆ ಮಕ್ಕಳ ಗತಿಯೇನು? ಮಕ್ಕಳನ್ನು ಅಕ್ಕರತೆಯಿಂದ ಯಾರು ಸಲಹಬೇಕು? ಮಕ್ಕಳು ತಾಯಿಯ ಪ್ರೀತಿಯಿಲ್ಲದೆ, ಆರೈಕೆಯಿಲ್ಲದೆ ಯಾವ ರೀತಿಯಿಂದ ಬೆಳವಣಿಗೆ ಹೊಂದಬಲ್ಲವು? ಕೇವಲ ಪಾಶ್ಚಾತ್ಯ ದೇಶಗಳನ್ನು ಅನುಕರಿಸುವದರಿಂದ ಯಾವ ಲಾಭವೂ ಆಗಲಾರದು. ಸ್ತ್ರೀಯರಿಗೆ ಕೊಡುವ ಶಿಕ್ಷಣವು ಬೇರೆ ರೀತಿಯಾಗಿರಬೇಕು. ಅವರಿಗೆ ಅತಿ ಅವಶ್ಯವಾಗಿರುವ ಶರೀರ ಸಂಗೋಪನಶಾಸ್ತ್ರ, ಮಾನಸಶಾಸ್ತ್ರ, ಸಂಗೀತಶಾಸ್ತ್ರ, ಮುಂತಾದವುಗಳನ್ನು ಕಲಿಸಬೇಕು. ಸುಶಿಕ್ಷಿತರಾದ ಸ್ತ್ರೀಯರು ಕೇವಲ ಪಾಶ್ಚಾತ್ಯರ ಅಂಧಾನುಕರಣ ಮಾಡುತ್ತಿರುವರು.

ಅವರಲ್ಲಿ ವಿಲಾಸ ವೈಭವಗಳು ಹೆಚ್ಚಾಗಿರುವವು. ಹೆಚ್ಚಾಗಿ ಶಾರೀರಿಕಶ್ರಮ ಮಾಡಲು ಅವರು ಸಿದ್ಧರಿಲ್ಲ. ಇದು ಈಗಿನ ಶಿಕ್ಷಣ ಪದ್ಧತಿಯ ದೋಷವಾಗಿದೆ. ತಮ್ಮ ಮನೆಗೆಲಸಗಳನ್ನು ಮಾಡುವದೆಂದರೆ ಅವರಿಗೆ ಅಪಮಾನ. ಈ ಪ್ರಕಾರದ ವೃತ್ತಿಯು ಕಡಿಮೆಯಾಗಬೇಕು. ವಿದೇಶೀಯ ವಸ್ತುಗಳ ಬಗ್ಗೆ ನಮ್ಮಲ್ಲಿ ಮೋಹವಿರಬಾರದು. ಸ್ತ್ರೀಯರು ಮನೆಯಲ್ಲಿ ವಿದೇಶೀಯ ಶೃಂಗಾರದ ವಸ್ತುಗಳನ್ನು ಇಡುವದಕ್ಕೆ ಪ್ರಯತ್ನಿಸಬಾರದು. ಸರಳ ಜೀವನವೇ ಅವರ ಧ್ಯೇಯವಾಗಬೇಕು. ಅನಾವಶ್ಯಕ ವಸ್ತುಗಳನ್ನು ಕೊಂಡುಕೊಳ್ಳುವದಕ್ಕಾಗಿ ಹಣವನ್ನು ಖರ್ಚು ಮಾಡುವದರಿಂದ ಏನು ಲಾಭವು? ನಮ್ಮ ಶಿಕ್ಷಣ ಪದ್ಧತಿಯಲ್ಲಿ ಸುಧಾರಣೆಯಾದರೆ ಅದರಿಂದ ಸ್ತ್ರೀಯರಿಗೂ ಲಾಭವಾಗುವದು. ಸ್ತ್ರೀಯರ ಮಾನಸಿಕ, ದೈಹಿಕ, ಆಧ್ಯಾತ್ಮಿಕ ಉನ್ನತಿಯನ್ನು ಮಾಡುವಂಥ ಶಿಕ್ಷಣವನ್ನು ಬಳಿಕೆಯಲ್ಲಿ ತರಬೇಕು.

## ೩೮. ಯುದ್ಧ ಮತ್ತು ಶಾಂತಿ

ಯುದ್ಧಗಳಿಂದ ಎಂಥ ಮಹಾಅನಾಹುತಗಳು ಆಗುತ್ತವೆ ಎಂಬುದನ್ನು ಮೊನ್ನಿನ ಯುದ್ಧವು ನಮಗೆ ತೋರಿಸಿಕೊಟ್ಟಿರುವದು. ಯುದ್ಧದಲ್ಲಿ ಅನೇಕ ನಿರಪರಾಧಿಗಳು ಸಾಯುತ್ತಾರೆ. ಹಲವಾರು ಪಟ್ಟಣಗಳು ನಾಶವಾಗುತ್ತವೆ. ಎಲ್ಲ ಕಡೆಯಲ್ಲಿಯೂ ಕೋಲಾಹಲವೇಳುತ್ತದೆ. ಯಾವ ರಾಷ್ಟ್ರವೂ ಶಾಂತಿಯಿಂದ ತಟಸ್ಥವಾಗಿ ಉಳಿಯಲಾರದು. ನೆರಮನೆಗೆ ಬೆಂಕಿ ಹತ್ತಿದಾಗ ನಾವು ಸುಮ್ಮನೆ ಕೂಡ್ರಬಹುದೇ? ಯುದ್ಧವು ಇಂದು ಯಾರಿಗೂ ಬೇಡವಾಗಿದೆ. ಎಲ್ಲ ಸಮಸ್ಯೆಗಳನ್ನು ಶಾಂತರೀತಿಯಿಂದಲೇ ಬಗೆಹರಿಸಿಕೊಳ್ಳಬೇಕೆಂದು ರಾಜಕಾರಣಿಗಳು ಅಭಿಪ್ರಾಯ ಪಡುತ್ತಿರುವರು. ಜಗತ್ತಿನ ರಾಷ್ಟ್ರಗಳಲ್ಲಿ ಎರಡು ಪಂಗಡಗಳು ಉದ್ಭವಿಸಿವೆ. ಒಂದು ಕಡೆಗೆ ಅಮೇರಿಕಾ ಮತ್ತೊಂದು ಕಡೆಗೆ ರಶಿಯಾ ಈ ರೀತಿ ಎರಡು ಗುಂಪುಗಳಾಗಿವೆ.

ಎರಡು ಗುಂಪುಗಳಾಗುವದಕ್ಕೆ ಅವುಗಳಲ್ಲಿಯ ರಾಜಕೀಯ ಮತಭೇದವೇ ಮುಖ್ಯ ಕಾರಣವು. ಅಮೇರಿಕೆಯಲ್ಲಿ ಬಂಡವಾಳಶಾಹಿಗಳಿಗೆ ಮಹತ್ವವಿದೆ. ಅಮೇರಿಕೆಯ ರಾಜ್ಯಕಾರಭಾರವೆಲ್ಲವೂ ಈ ಬಂಡವಾಳಶಾಹಿಗಳ ಕೈಯಲ್ಲಿದೆ. ರಶಿಯದ ಕಾರಭಾರವು ಇದಕ್ಕೆ ವಿರುದ್ಧವಾಗಿದೆ. ಅಲ್ಲಿ ಎಲ್ಲ

ವ್ಯಾಪಾರವನ್ನು ಸರಕಾರವೇ ನಡಿಸುವದು. ಆಸ್ತಿಯು ಸರಕಾರದ ವಶದಲ್ಲಿ ರುವದು. ರಶಿಯವು ಸಮತಾವಾದಿ ರಾಷ್ಟ್ರವು. ಶ್ರೀಮಂತರನ್ನು ನಾಶಮಾಡು ವದೇ ಆವರ ರಾಜಕೀಯ ಧೋರಣವಾಗಿದೆ. ಅಮೇರಿಕೆಯು ಜಗತ್ತಿನಲ್ಲಿಯೇ ಶ್ರೀಮಂತರಾಷ್ಟ್ರವಾಗಿದೆ ಹಣದ ಸಹಾಯದಿಂದ ಜಗತ್ತನ್ನೇ ತನ್ನ ಅಂಕಿತ ದಲ್ಲಿಟ್ಟುಕೊಳ್ಳಬೇಕೆಂದು ಅದು ಹವಣಿಸುತ್ತಿರುವದು. ಇದರಿಂದ ರಶಿಯಾ ಮತ್ತು ಅಮೇರಿಕೆಯಲ್ಲಿ ವಿರೋಧವು ತಲೆದೋರಿದೆ. ತಮ್ಮಲ್ಲಿಯ ಮತಭೇದ ಗಳನ್ನು ಅವು ಶಾಂತರೀತಿಯಿಂದ ಬಿಡಿಸಲು ಪ್ರಯತ್ನಿಸುತ್ತಿರುವವು. ಇನ್ನೊಂದು ಯುದ್ಧವಾದರೆ ಜಗತ್ತಿನ ಸಂಸ್ಕೃತಿಯು ಹಾಳಾಗುವದರಲ್ಲಿ ಸಂದೇಹವಿಲ್ಲ. ಮಹಾಯುದ್ಧದಿಂದ ಯಾವ ರಾಷ್ಟ್ರಕ್ಕೂ ಹಿತವಾಗಲಾರದು. ನಮ್ಮ ಎಲ್ಲ ಸಮಸ್ಯೆಗಳನ್ನು ಶಾಂತರೀತಿಯಿಂದ ಬಿಡಿಸಿಕೊಳ್ಳಲು ಪ್ರಯ ತ್ನಿಸಬೇಕು.

ಜಗತ್ತಿನಲ್ಲಿ ಶಾಂತಿಯನ್ನು ಸ್ಥಾಪಿಸುವದಕ್ಕಾಗಿ ಸಂಯುಕ್ತರಾಷ್ಟ್ರ ಸಂಘವು ಸ್ಥಾಪಿತವಾಗಿದೆ. ಅರವತ್ತು ರಾಷ್ಟ್ರಗಳು ಈಸಂಘದಲ್ಲಿ ಸೇರಿರುವವು. ಆದರೆ ಬೇರೆ ಬೇರೆ ರಾಷ್ಟ್ರಗಳಲ್ಲಿ ಸೌಹಾರ್ದ ಭಾವನೆಯೇ ಇಲ್ಲದಂತಾಗಿದೆ. ರಶಿಯವು ಅಮೇರಿಕೆಯ ವಿರೋಧಿಯಾಗಿರುವದರಿಂದ ಪ್ರತಿಯೊಂದು ವಿಷಯದಲ್ಲಿಯೂ ಅದು ಅಮೇರಿಕೆಯನ್ನು ವಿರೋಧಿಸುತ್ತಿರುವದು. ಈ ಕಾರಣದಿಂದ ಸಂಯುಕ್ತರಾಷ್ಟ್ರ ಸಂಘದಲ್ಲಿ ಬಿಕ್ಕಟ್ಟು ತಲೆದೋರಿರುವದು. ಇದರಂತೆ ಅಮೇರಿಕೆಯೂ ರಶಿಯವನ್ನು ವಿರೋಧಿಸುತ್ತಿರುವದು. ಕೆಲವು ರಾಷ್ಟ್ರಗಳು ಅಮೇರಿಕೆಯ ಗುಂಪಿನಲ್ಲಿ ಸೇರಿರುವವು, ಕೆಲವು ರಾಷ್ಟ್ರಗಳು ರಶಿ ಯದ ಗುಂಪಿನಲ್ಲಿ ಸೇರಿರುವವು. ಪರಸ್ಪರರನ್ನು ನಿಂದಿಸುವದು, ಮತ್ತು ಬೇರೆ ರಾಷ್ಟ್ರದ ವಿರುದ್ಧವಾಗಿ ಅಪಪ್ರಚಾರ ಮಾಡುವದು ಪ್ರಾರಂಭವಾಗಿದೆ. ರಶಿ ಯವು ಅಮೇರಿಕೆಯು ಯುದ್ಧದ ಸಿದ್ಧತೆ ಮಾಡುವದೆಂಬ ನೆವದಿಂದ ಸೈನ್ಯ, ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸುತ್ತಿರುವದು. ಅಮೇರಿಕೆಯು ರಶಿಯದ ಭಯ ದಿಂದ ಅಣುಬಾಂಬು, ಹೈಡ್ರೋಜನಬಾಂಬುಗಳನ್ನು ತಯಾರಿಸುತ್ತಿರುವದು. ಇದರಿಂದ ಯಾವ ಲಾಭವೂ ಆಗಲಾರದು. ಭಾರತವು ಮಾತ್ರ ಶಾಂತಿಯೇ ತನ್ನ ಪರಮಧ್ಯೇಯವೆಂದು ಸಾರಿರುವದು. ರಶಿಯಾ ಅಥವಾ ಅಮೇರಿಕಾ ಇವುಗಳಲ್ಲಿ ಯಾವ ಪಂಗಡಕ್ಕೂ ಭಾರತವು ಸೇರಿರುವದಿಲ್ಲ. ಎಲ್ಲ ರಾಷ್ಟ್ರಗಳೂ

ಮನಃಪೂರ್ವಕವಾಗಿ ಶಾಂತಿಯೇ ತಮ್ಮ ಧ್ಯೇಯವೆಂದು ಸಾರಬೇಕು. ಶಸ್ತ್ರಾಸ್ತ್ರಗಳನ್ನೂ, ಸೈನ್ಯವನ್ನೂ, ಮಿತಗೊಳಿಸಬೇಕು. ರಾಷ್ಟ್ರ ರಾಷ್ಟ್ರಗಳಲ್ಲಿ ಜಗಳಗಳು ಉತ್ಪನ್ನವಾದರೆ ಅದನ್ನು ಶಾಂತ ರೀತಿಯಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಬೇಕು.

ಬಲಾಢ್ಯರಾಷ್ಟ್ರಗಳು ಬಲಹೀನ ರಾಷ್ಟ್ರಗಳನ್ನು ತುಳಿಯಲು ಪ್ರಯತ್ನಿಸಿದರೆ ಯುದ್ಧವು ತಪ್ಪಿದ್ದಲ್ಲ. ಸಾಮ್ರಾಜ್ಯಶಾಹಿಯ ದಿವಸಗಳು ಮುಗಿದವು. ಪ್ರತಿಯೊಂದು ರಾಷ್ಟ್ರದ ಸ್ವಾತಂತ್ರ್ಯವನ್ನು ಸಂಯುಕ್ತರಾಷ್ಟ್ರಸಂಘವು ಮನ್ನಿಸಬೇಕು. ಮೊದಲನೇ ಮಹಾಯುದ್ಧವು ಮುಗಿದ ಬಳಿಕ ಜಗತ್ತಿನಲ್ಲಿ ಶಾಂತಿಯನ್ನು ಸ್ಥಾಪಿಸುವದಕ್ಕಾಗಿ ಒಂದು ಸಂಘವು ಸ್ಥಾಪಿತವಾಯಿತು. ಆ ಸಂಘಕ್ಕೆ ಶಾಂತಿಯನ್ನು ಸ್ಥಾಪಿಸಲು ಶಕ್ಯವಾಗಲಿಲ್ಲ. ಯಾಕಂದರೆ ಬ್ರಿಟನ್, ಫ್ರಾನ್ಸ, ಜಪಾನ ಮುಂತಾದ ರಾಷ್ಟ್ರಗಳು ತಮ್ಮ ಸಾಮ್ರಾಜ್ಯಶಾಹೀ ಧೋರಣವನ್ನು ಬಿಡಲು ಸಿದ್ಧವಿರಲಿಲ್ಲ. ಇಟಲಿಯು ಅಬಿಸೀನಿಯದ ಮೇಲೆ ದಾಳಿ ಮಾಡಿದಾಗ ಬ್ರಿಟನ್ನು ಅದಕ್ಕೆ ತನ್ನ ಸಹಾನುಭೂತಿಯನ್ನು ವ್ಯಕ್ತಪಡಿಸಿತು. ಜಪಾನವು ಚೀನದ ಮೇಲೆ ದಾಳಿ ಮಾಡಿದಾಗ ಜಗತ್ತಿನ ಪ್ರಬಲ ರಾಷ್ಟ್ರಗಳು ಅದನ್ನು ವಿರೋಧಿಸಲಿಲ್ಲ. ಜರ್ಮನಿಯನ್ನು ಬಗ್ಗುಬಡಿಯಲಾಯಿತು. ಅಮೇರಿಕೆಯು ವ್ಯಾಪಾರಕ್ಕಾಗಿ ಬೇರೆ ದೇಶಗಳನ್ನು ತನ್ನ ಆಧೀನದಲ್ಲಿಟ್ಟುಕೊಳ್ಳಬೇಕೆಂದು ಪ್ರಯತ್ನಿಸಿತು. ಇದರಿಂದಲೇ ಎರಡನೆ ಮಹಾಯುದ್ಧವು ತಲೆದೋರಿತು. ಬಲಾಢ್ಯ ರಾಷ್ಟ್ರಗಳು ತಮ್ಮ ರಾಕ್ಷಸೀ ಮಹತ್ವಾಕಾಂಕ್ಷೆಯನ್ನು ಬಿಡದಿದ್ದರೆ ಮೂರನೆಯ ಯುದ್ಧವು ಅನಿವಾರ್ಯವಾದೀತು. ಇದನ್ನು ಬಲಾಢ್ಯ ರಾಷ್ಟ್ರಗಳು ಮನಗಾಣಬೇಕು. ಸಂಯುಕ್ತ ರಾಷ್ಟ್ರ ಸಂಘದಲ್ಲಿ ಚೀನಕ್ಕೆ ಪ್ರವೇಶ ದೊರೆತಿಲ್ಲ. ಜನಸಂಖ್ಯೆಯ ದೃಷ್ಟಿಯಿಂದ ಚೀನವು ಮೊದಲನೇ ರಾಷ್ಟ್ರವಾಗಿದೆ. ಚೀನಕ್ಕೆ ಸಂಯುಕ್ತರಾಷ್ಟ್ರ ಸಂಘದಲ್ಲಿ ಪ್ರವೇಶ ದೊರೆಯದ್ದಕ್ಕೆ ಅಮೇರಿಕೆಯ ಹಟಮಾರಿತನವೇ ಕಾರಣವಾಗಿದೆ. ಚೀನವು ಸಮತಾವಾದೀ ರಾಷ್ಟ್ರವಾಗಿರುವದರಿಂದ ಅದಕ್ಕೆ ಸಂಯುಕ್ತರಾಷ್ಟ್ರ ಸಂಘದಲ್ಲಿ ಪ್ರವೇಶ ದೊರೆತಿಲ್ಲ. ಈ ಧೋರಣೆಯಿಂದ ಶಾಂತಿಯು ಸ್ಥಾಪಿತವಾಗಲಾರದು. ಚೀನದಲ್ಲಿ ಯಾವ ರಾಜ್ಯ ಪದ್ಧತಿಯಿದ್ದರೂ ಅದರ ಅಂತರಿಕ ರಾಜ್ಯಕಾರಭಾರದಲ್ಲಿ ಕೈಹಾಕುವದಕ್ಕೆ ಸಂಯುಕ್ತರಾಷ್ಟ್ರ ಸಂಘಕ್ಕೆ

ಅಧಿಕಾರವಿಲ್ಲ. ಚೀನಾಕ್ಕೆ ರಾಷ್ಟ್ರ ಸಂಘದಲ್ಲಿ ಪ್ರವೇಶಿಸಲು ಪೂರ್ಣ ಅಧಿಕಾರ ವಿದೆ. ಪ್ರತಿಯೊಂದು ರಾಷ್ಟ್ರವು ತನಗೆ ಇಷ್ಟ ಬಂದ ರಾಜ್ಯ ಪದ್ಧತಿಯನ್ನು ಅನುಸರಿಸಲು ಸ್ವತಂತ್ರವಾಗಿರುವದು. ದೇಶದ ಒಳಾಡಳಿತದಲ್ಲಿ ಪ್ರವೇಶಿಸುವ ದಕ್ಕೆ ಅಮೇರಿಕೆಯಾಗಲಿ, ರಶಿಯವಾಗಲಿ ಪ್ರಯತ್ನಿಸಬಾರದು. ತನ್ನ ಗುಂಪನ್ನು ಸೇರಬೇಕೆಂದು ಅವು ಹಟ ಹಿಡಿಯಬಾರದು. ಇದರಿಂದ ಮಾತ್ರ ಶಾಂತಿಯು ಸ್ಥಾಪಿಸಲ್ಪಡುವದು. ಯುದ್ಧಗಳಿಗೆ ತಪ್ಪುತಿಳುವಳಿಕೆಯೇ ಕಾರಣವಾಗಿರುವದು. ಈ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಲು ಸಂಯುಕ್ತರಾಷ್ಟ್ರ ಸಂಘವು ಪ್ರಯತ್ನಿಸಬೇಕಾಗಿದೆ.

## ೩೯. ಆಕಾಶವಾಣಿ

ಮನುಷ್ಯನ ಜೀವನವನ್ನು ಸುಖಮಯವಾಗಿ ಮಾಡಲು ವಿಜ್ಞಾನವು ನಮಗೆ ಬಹಳ ಸಹಾಯ ಮಾಡಿರುವದು. ಹೊಸ ಹೊಸ ಯಂತ್ರಗಳ ಸಹಾಯ ದಿಂದ ಮನುಷ್ಯನು ಕಾರಖಾನೆಗಳನ್ನು ನಡಿಸುತ್ತಿರುವನು. ಸಾವಿರಾರು ಕೂಲಿ ಕಾರರು ಒಂದು ವಾರದಲ್ಲಿ ಮಾಡುವ ಕೆಲಸವನ್ನು ಯಂತ್ರವು ಒಂದು ದಿವಸ ದಲ್ಲಿ ಮಾಡುವದು. ವಿಮಾನದಲ್ಲಿ ಕುಳಿತು ತ್ವರಿತಗತಿಯಿಂದ ಒಂದು ದೇಶ ದಿಂದ ಮತ್ತೊಂದು ದೇಶಕ್ಕೆ ಹೋಗಬಹುದು. ಆಕಾಶವಾಣಿಯ ಸಹಾಯ ದಿಂದ ಲಂಡನ, ಪ್ಯಾರಿಸ, ನ್ಯೂಯಾರ್ಕ ಮುಂತಾದ ಪಟ್ಟಣಗಳಲ್ಲಿ ನಡೆ ಯುವ ಸಂಗೀತ ಕಾರ್ಯಕ್ರಮಗಳನ್ನೂ, ಭಾಷಣಗಳನ್ನೂ ನಮ್ಮ ಮನೆಯ ಲ್ಲಿಯೇ ಕುಳಿತು ಕೇಳಬಹುದಾಗಿದೆ! ಸಂಗೀತ ಸಾಹಿತ್ಯಗಳು ಕೇವಲ ಶ್ರೀಮಂತರ ಸ್ವತ್ತುಗಳಾಗಿದ್ದವು. ಈ ಹೊತ್ತು ಪ್ರತಿಯೊಬ್ಬನೂ ಆಕಾಶ ವಾಣಿಯ ಸಹಾಯದಿಂದ ಸಂಗೀತ, ಭಾಷಣಗಳನ್ನು ಸ್ವಲ್ಪ ಹಣವನ್ನೂ ಖರ್ಚು ಮಾಡದೆ ಕೇಳಬಲ್ಲನು. ಸಂಗೀತ ಕಾರ್ಯಕ್ರಮವು ಅರಸರಿಗೂ ಅವನ ಪರಿವಾರದವರ ಸಲುವಾಗಿಯೂ ನಡೆಯುತ್ತಿದ್ದವು. ಇದು ಪ್ರಜಾ ಪ್ರಭುತ್ವ ಯುಗವಾದ್ದರಿಂದ ಸಾಮಾನ್ಯ ಪ್ರಜೆಗಳ ಸಲುವಾಗಿ ಸಂಗೀತ ಕಾರ್ಯಕ್ರಮವು ಏರ್ಪಡಿಸಲ್ಪಡುತ್ತವೆ.

ಬೇರೆ ದೇಶಗಳಲ್ಲಿ ನಡೆಯುವ ಸಂಗೀತವನ್ನು ಇಂದು ಇಲ್ಲಿಯೇ ಕುಳಿತು ಕೇಳಲಿಕ್ಕೆ ಬರುವಂತೆ ವ್ಯವಸ್ಥೆ ಮಾಡಿರುವರು. ದೊಡ್ಡ ದೊಡ್ಡ

ಪಟ್ಟಣಗಳಲ್ಲಿ ಆಕಾಶವಾಣಿಯ ಕೇಂದ್ರಗಳನ್ನು ಸ್ಥಾಪಿಸಿರುವರು. ಸಂಗೀತಗಾರನು ಆಕಾಶವಾಣಿಯ ಕೇಂದ್ರಗಳಲ್ಲಿ ಹಾಡುವನು. ಯಂತ್ರಗಳಿಂದ ಇದನ್ನು ಪ್ರಸಾರವಮಾಡುವರು. ಪ್ರಸಾರವಾದ ಈ ಧ್ವನಿಯನ್ನು ನಮ್ಮ ಆಕಾಶವಾಣಿಯು ಹೀರಿಕೊಳ್ಳುತ್ತದೆ. ಇದರಿಂದ ನಮಗೆ ಗಾಯಕನು ನಮ್ಮ ಮುಂದೆಯೇ ಹಾಡಿದಂತೆ ಕೇಳುತ್ತದೆ. ಇದೆಲ್ಲವೂ ಬಹಳ ತೀವ್ರಗತಿಯಿಂದ ನಡೆಯುತ್ತದೆ. ಆದ್ದರಿಂದ ಗಾಯಕನು ಆಕಾಶವಾಣಿಯ ಕೇಂದ್ರದಲ್ಲಿ ಹಾಡಿದ್ದನ್ನು ಮರುಕ್ಷಣದಲ್ಲಿಯೇ ಕೇಳಬಹುದು.

ಆಕಾಶವಾಣಿಯನ್ನು ಮೊದಲು ಹುಡುಕಿ ತೆಗೆದವನು ಇಟಲಿದೇಶದ ಸುಪ್ರಸಿದ್ಧ ವಿಜ್ಞಾನಿಯಾದ ಮಾರ್ಕೋನಿ ಎಂಬವನು. ಸಮುದ್ರದಲ್ಲಿಯ ಹಡಗುಗಳಿಗೆ ತಂತಿಯಿಲ್ಲದೆ ಸಂದೇಶವನ್ನು ಇವನು ಮೊದಲು ಮುಟ್ಟಿಸಿದನು. ಮುಂದೆ ಇದರ ಸಹಾಯದಿಂದಲೇ ವೈಜ್ಞಾನಿಕರು ಆಕಾಶವಾಣಿಯ ಕೇಂದ್ರವನ್ನು ಸ್ಥಾಪಿಸಿದರು. ಇಷ್ಟಕ್ಕೇ ಈ ಶೋಧವು ಮುಗಿದಿಲ್ಲ. ಆಕಾಶವಾಣಿಯಲ್ಲಿ ಹಾಡಿದವರ ಮುಖವನ್ನು ನಾವಿಂದು ನೋಡಬಹುದಾಗಿದೆ! ಹೀಗಾದರೆ ಪ್ರತ್ಯಕ್ಷವಾಗಿ ನಾವು ಸಭೆಯಲ್ಲಿದ್ದು ಭಾಷಣ ಕೇಳಿದಂತೆಯೇ ಆಗುವದು!! ಇದರಿಂದ ಆಕಾಶವಾಣಿಯ ಮಹತ್ವವು ಹೆಚ್ಚಾಗಿರುವದು.

ಸಮುದ್ರದಲ್ಲಿ ಸಂಚರಿಸುತ್ತಿರುವ ಹಡಗುಗಳಿಗೆ ಗಂಡಾಂತರ ಸಮಯದಲ್ಲಿ ನಾವು ಸುದ್ದಿಗಳನ್ನು ಕಳಿಸಬಹುದು. ಇದರಿಂದ ಹಡಗುಗಳಿಗೆ ಬೇಕಾಗುವ ಸಹಾಯವನ್ನು ನಾವು ಕೊಡಬಹುದು. ಹಡಗದಲ್ಲಿ ಆಕಾಶವಾಣಿಯನ್ನು ಇಟ್ಟುಕೊಂಡಿರುವರು. ಅವರಿಗೆ ಯಾವದಾದರೂ ಗಂಡಾಂತರವು ಪ್ರಾಪ್ತವಾದರೆ ಆಕಾಶವಾಣಿಯ ಸಹಾಯದಿಂದ ಅವರು ತಿಳಿಸುವರು. ಇದರಿಂದ ತ್ವರಿತದಲ್ಲಿಯೇ ಅವರಿಗೆ ಸಹಾಯವನ್ನು ಒದಗಿಸಬಹುದು. ವಿಮಾನಗಳಲ್ಲಿಯೂ ಪ್ರವಾಸ ಮಾಡುವವರಿಗೆ ಆಕಾಶವಾಣಿಯ ಮುಖಾಂತರವಾಗಿಯೇ ಹವಾಮಾನಗಳನ್ನು ತಿಳಿಸುವರು. ವಿಮಾನವು ನಡೆಯದಂತಾದ ಸುದ್ದಿಯೂ ಕೂಡ ನಮಗೆ ಕ್ಷಣಾರ್ಧದಲ್ಲಿ ಗೊತ್ತಾಗುವದು. ಅಪಘಾತಗಳನ್ನು ತಪ್ಪಿಸುವದಕ್ಕೆ ಇದರಿಂದ ಬಹಳ ಸಹಾಯವಾಗಿದೆ.

ಆಕಾಶವಾಣಿಯು ಮನೋರಂಜನೆ ಮಾಡಿಕೊಳ್ಳುವದಕ್ಕೆ ಅತ್ಯುತ್ತಮ ಸಾಧನವಾಗಿದೆ. ನಮಗೆ ಬೇಸರಿಕೆ ಬಂದಾಗ ಹಾಡು, ಭಾಷಣಗಳನ್ನು ಕೇಳ

ಬಹುದು. ಆಕಾಶವಾಣಿಯು ಮುಖಾಂತರವಾಗಿ ನಾಟಕಗಳನ್ನು ಪ್ರಸಾರ ಮಾಡುವರು. ಇದರಿಂದ ಸಂಜೆಯು ಮುಂದೆ ಜನರು ಆಕಾಶವಾಣಿಯನ್ನು ಕೇಳುವದಕ್ಕೆ ತಂಡ ತಂಡವಾಗಿ ನೆರೆಯುವರು.

ಆಕಾಶವಾಣಿಯು ಮನೋರಂಜನೆಯ ಸಾಧನವಾಗಿರುವದಲ್ಲದೆ ಜ್ಞಾನದ ಸಾಧನವೂ ಆಗಿರುವದು. ರಾಜಕಾರಣಿಗಳ, ಸಾಹಿತಿಗಳ ಭಾಷಣ ಗಳನ್ನು ನಾವು ಕೇಳಬಹುದು. ರಶಿಯಾ ದೇಶದಲ್ಲಿ ಆಕಾಶವಾಣಿಯನ್ನು ಜ್ಞಾನಪ್ರಸಾರಕ ಸಾಧನವೆಂದು ಉಪಯೋಗಿಸುವರು. ಜಗತ್ತಿನಲ್ಲಿ ನಡೆದಿ ರುವ ಮಹತ್ವದ ಸುದ್ದಿಗಳನ್ನೂ ಪ್ರಸಾರ ಮಾಡುತ್ತಾರೆ. ವೃತ್ತಪತ್ರಿಕೆ ಗಳನ್ನು ಓದುವ ಜನರು ಭಾರತದಲ್ಲಿ ಕಡಿಮೆ; ಓದುಬರಹ ಬಾರದೆ ಇದ್ದ ಜನರ ಸಂಖ್ಯೆಯೇ ಹೆಚ್ಚಾಗಿರುವದು. ಇಂಥ ಪರಿಸ್ಥಿತಿಯಲ್ಲಿ ಆಕಾಶ ವಾಣಿಯ ಮುಖಾಂತರವಾಗಿ ಜನರ ಜ್ಞಾನಮಟ್ಟವನ್ನು ಹೆಚ್ಚಿಸಲು ಪ್ರಯ ತ್ನಿಸಬೇಕು. ಅಶಿಕ್ಷಿತನೂ ಕೂಡ ಆಕಾಶವಾಣಿಯಿಂದ ಪ್ರಯೋಜನವನ್ನು ಪಡೆಯಬಹುದು.

ಶಿಕ್ಷಣ ಪ್ರಸಾರ ಮಾಡುವದಕ್ಕಾಗಿಯೂ ಆಕಾಶವಾಣಿಯನ್ನು ಉಪ ಯೋಗಿಸಬಹುದು. ಸುಪ್ರಸಿದ್ಧರಾದ ವಿದ್ವಾಂಸರಿಂದ ಉಪನ್ಯಾಸಗಳನ್ನು ಪ್ರಸಾರ ಮಾಡಬಹುದು. ಇದರಿಂದ ಒಂದೇ ಸಮಯಕ್ಕೆ ಸಾವಿರಾರು ವಿದ್ಯಾರ್ಥಿಗಳು ಆ ಉಪನ್ಯಾಸವನ್ನು ಕೇಳುವರು. ಅತಿ ಕಡಿಮೆ ವೆಚ್ಚದಲ್ಲಿ ಶಿಕ್ಷಣವನ್ನು ಕೊಡಲು ಸಾಧ್ಯವಾಗುವದು. ಭಾರತದಲ್ಲಿ ಆಕಾಶವಾಣಿಯ ಉಪಯೋಗವು ಶಿಕ್ಷಣಕ್ಷೇತ್ರದಲ್ಲಿ ಇನ್ನೂ ಹೆಚ್ಚುಹೆಚ್ಚಿಗೆ ಆಗಬೇಕಾಗಿರುವದು.

ಸರಕಾರವು ತಾನು ಮಾಡಬೇಕೆಂದಿರುವ ಸುಧಾರಣೆಗಳನ್ನು ಆಕಾಶ ವಾಣಿಯ ಮುಖಾಂತರ ಪ್ರಸಾರ ಮಾಡಬಹುದು. ತಾನು ಮಾಡಬೇಕೆಂದಿ ರುವ ಸುಧಾರಣೆಯನ್ನು ಪ್ರತಿಯೊಬ್ಬರಿಗೂ ತಿಳಿಸಲು ಆಕಾಶವಾಣಿಯ ಸಹಾಯವಿಲ್ಲದೆ ಸಾಧ್ಯವಾಗಲಾರದು. ದೇಶದಲ್ಲಿ ಗಂಡಾಂತರ ಪರಿಸ್ಥಿತಿಯು ತಲೆದೋರಿದಾಗ ಶಾಂತಿಯನ್ನು ಸ್ಥಾಪಿಸುವದಕ್ಕೂ ಇದು ಬಹಳ ಉಪ ಯುಕ್ತವಾದದ್ದು. ನಮ್ಮ ಒಕ್ಕಲತನದಲ್ಲಿ ಯಾವ ರೀತಿ ಸುಧಾರಣೆ ಮಾಡ ಬೇಕು ಎನ್ನುವದನ್ನು ಒಕ್ಕಲಿಗರಿಗೆ ತಿಳಿಸಲು ಬರುತ್ತದೆ. ಆಕಾಶವಾಣಿಯು ಮನೋರಂಜನೆಗೂ, ಜ್ಞಾನಸಾಧನೆಗೂ ಅತ್ಯವಶ್ಯವಾಗಿದೆ.

## ೪೦. ಕನ್ನಡಿಗರ ಅಭಿವೃದ್ಧಿಯೆಂತು?

ಕನ್ನಡನಾಡು ತುಂಡು ತುಂಡಾಗಿದೆ. ಕೆಲವು ಭಾಗ ಮದ್ರಾಸಪ್ರಾಂತ ದಲ್ಲಿ, ನಾಲ್ಕು ಜಿಲ್ಹೆಗಳು ಮುಂಬಯಿ ಪ್ರಾಂತದಲ್ಲಿ, ಮೈಸೂರಲ್ಲಿ ಒಂಬತ್ತು ಜಿಲ್ಹೆಗಳು, ಹೈದರಾಬಾದಜಿಲ್ಹೆಯಲ್ಲಿ ಮೂರು ಜಿಲ್ಹೆಗಳು ಇದಲ್ಲದೆ ಕೊಡಗು ಒಂದು ಬೇರೆ ಹೀಗೆ ತುಂಡು ತುಂಡಾಗಿದೆ. ಮುಂಬಯಿ, ಮದ್ರಾಸ, ಹೈದರಾಬಾದ ಪ್ರಾಂತಗಳಲ್ಲಿ ಅವರು ಅಲ್ಪ ಸಂಖ್ಯಾಕರಾಗಿರುವದರಿಂದ ಅವರನ್ನು ಯಾರೂ ಕೇಳದಂತಾಗಿದೆ. ಮೊದಲು ನಮ್ಮ ನಾಡು ಒಂದಾಗಬೇಕು. ಹಿಂದುಸ್ಥಾನದಲ್ಲಿ ಈ ರೀತಿಯಾಗಿ ಯಾವ ಪ್ರಾಂತವೂ ತುಂಡು ತುಂಡಾಗಿಲ್ಲ. ಕರ್ನಾಟಕ ಏಕೀಕರಣವೇ ನಮ್ಮ ಎಲ್ಲ ರೋಗಗಳಿಗೆ ನಿವಾರಣೋಪಾಯ ವಾಗಿದೆ. ಭಾಷಾವಾರ ಪ್ರಾಂತರಚನೆಯ ತತ್ವವನ್ನು ಕಾಂಗ್ರೆಸ್ಸು ಬಹಳ ಹಿಂದೆಯೇ ಒಪ್ಪಿಕೊಂಡಿರುವದು. ಭಾರತಕ್ಕೆ ಸ್ವಾತಂತ್ರ್ಯ ದೊರೆತ ಕೂಡಲೇ ಭಾಷಾವಾರ ಪ್ರಾಂತಗಳನ್ನು ರಚಿಸುವದಾಗಿ ಕಾಂಗ್ರೆಸ್ಸು ವಚನಕೊಟ್ಟಿತ್ತು. ಇಂದು ಕಾಂಗ್ರೆಸ್ಸು ಎಲ್ಲ ಪ್ರಾಂತಗಳಲ್ಲಿಯೂ ಸತ್ತಾರೂಢವಾಗಿದೆ. ಆದರೆ ಭಾಷಾವಾರ ಪ್ರಾಂತ ರಚನೆಯನ್ನು ಮುಂದೆ ಹಾಕುತ್ತಿದ್ದಾರೆ. ಭಾಷಾವಾರ ಪ್ರಾಂತ ರಚನೆಯನ್ನು ಮಾಡುವದರಿಂದ ನಮ್ಮ ದೇಶದ ಐಕ್ಯಕ್ಕೆ ಭಂಗ ಬರುವದೆಂದು ಕೆಲವರು ವಾದಿಸಹತ್ತಿದ್ದಾರೆ. ಆದರೆವಿಚಾರಮಾಡಿದರೆ ಭಾರತದ ಐಕ್ಯಕ್ಕೆ ಇದರಿಂದ ಯಾವ ರೀತಿಯಿಂದಲೂ ಆತಂಕಬರಲಾರದು. ಕರ್ನಾಟಕ ಏಕೀಕರಣವೆಂದರೆ ಪಾಕಿಸ್ತಾನವಲ್ಲ. ಕನ್ನಡಿಗರು ತಮ್ಮ ಹರಿದ ಹಂಚಿಹೋದ ಪ್ರಾಂತವು ಒಂದುಗೂಡಬೇಕೆಂದು ಮಾತ್ರ ಬೇಡುತ್ತಿರುವರು. ಅವರು ಭಾರತದ ಒಕ್ಕೂಟದಲ್ಲಿಯೇ ಉಳಿಯುವರು. ತಮ್ಮ ನಾಡಿನ ಅಭಿವೃದ್ಧಿಗೆ ಸಹಾಯವಾಗಲೆಂದೇ ಅವರು ಬೇರೆ ಪ್ರಾಂತ ಬೇಡುವರು.

ಜಗತ್ತಿನಲ್ಲಿ ಬಹಳ ರಾಷ್ಟ್ರಗಳಲ್ಲಿಯೂ ಪ್ರಜಾಪ್ರಭುತ್ವ ಸರಕಾರವು ಅಸ್ತಿತ್ವದಲ್ಲಿ ಬಂದಿರುವದು. ಪ್ರಜಾಪ್ರಭುತ್ವವೆಂದರೆ ಜನತೆಯ ಸರಕಾರ. ಸರಕಾರವುಜನತೆಯಹಿತವನ್ನು ಸಾಧಿಸಬೇಕಾದರೆ ಸರಕಾರದಆಡಳಿತವೆಲ್ಲವೂ ಜನತೆಯ ಭಾಷೆಯಲ್ಲಿ ನಡೆಯಬೇಕಾದುದು ನ್ಯಾಯವಾದದ್ದು. ಮುಂಬಯಿ, ಮದ್ರಾಸ, ಹೈದರಾಬಾದ ಪ್ರಾಂತಗಳಲ್ಲಿ ಬೇರೆ ಬೇರೆ ಭಾಷೆಗಳನ್ನು ಆಡುವ

ಜನರು ವಾಸಿಸುತ್ತಿರುವರು. ಇದರಿಂದ ಸರಕಾರಕ್ಕೆ ಜನರ ಭಾಷೆಯಲ್ಲಿಯೇ ಆಡಳಿತವನ್ನು ನಡಿಸಲು ಸಾಧ್ಯವಿಲ್ಲದಾಗಿದೆ. ಅದಕ್ಕಾಗಿಯೇ ಭಾಷಾವಾರ ಪ್ರಾಂತರಚನೆಯು ಅತಿ ಅವಶ್ಯವಾಗಿದೆ. ಭಾಷಾವಾರಪ್ರಾಂತ ರಚನೆಯಿಲ್ಲದೆ ಪ್ರಜಾಪ್ರಭುತ್ವವು ಯಶಸ್ವಿಯಾಗಲಾರದು.

ಕರ್ನಾಟಕಕ್ಕೆ ಎರಡುನೂರುಮೈಲು ಉದ್ದದಸಮುದ್ರಕರಾವಳಿಯಿರುವದು. ಆದರೂ ನಮ್ಮಲ್ಲಿ ಒಂದೂ ಬಂದರವಿಲ್ಲ. ಇದಕ್ಕೆ ಕಾರಣವೆಂದರೆ ಸರಕಾರದ ದುರ್ಲಕ್ಷ್ಯ. ನಮ್ಮಲ್ಲಿ ಬಂದರಗಳಿಲ್ಲದ್ದರಿಂದ ವ್ಯಾಪಾರವೂ, ಕಡಿಮೆಯಾಗಿದೆ. ವ್ಯಾಪಾರವು ಕಡಿಮೆಯಾದರೆ ಸಂಪತ್ತು ಹೇಗೆ ಬರಬೇಕು ಸಂಪತ್ತುಯಿಲ್ಲದೆ ನಮ್ಮ ನಾಡು ಅಭಿವೃದ್ಧಿ ಹೊಂದಲಾರದು. ನಮ್ಮ ವ್ಯಾಪಾರವು ಬೆಳೆಯುವದಕ್ಕೆ ಒಂದು ಬಂದರದ ಅವಶ್ಯಕತೆಯಿರುವದು.

ಕಾರವಾರ ಜಿಲ್ಹೆಯಲ್ಲಿ ಅನೇಕ ನದಿಗಳು ಹರಿಯುತ್ತವೆ. ಆದರೆ ಆ ನದಿಗಳಿಂದ ಯಾವ ಉಪಯೋಗವನ್ನೂ ನಾವು ಮಾಡಿಕೊಂಡಿಲ್ಲ. ನದಿಗಳ ನೀರಿನಿಂದ ವಿದ್ಯುತ್ತನ್ನು ತಯಾರಿಸಬಹುದು. ಅನೇಕ ಕಾರಖಾನೆಗಳನ್ನು ನಡಿಸಬಹುದು. ಕಾರವಾರ ಜಿಲ್ಹೆಯ ಕಟ್ಟಿಗೆಯಿಂದ ಕಾಗದವನ್ನು ತಯಾರಿಸಬಹುದು. ಆದರೆ ಇವುಗಳ ಕಡೆಗೆ ನಮ್ಮ ಸರಕಾರಗಳು ಲಕ್ಷವನ್ನೇ ಕೊಟ್ಟಿರುವದಿಲ್ಲ. ಯಾವಸಂಪತ್ತಿದ್ದರೂ ಅದು ನಮ್ಮ ಪಾಲಿಗಿಲ್ಲದಂತಾಗಿದೆ.

ಬಿಜಾಪುರ ಜಿಲ್ಹೆಯಲ್ಲಿ ಬೇಕಾದಷ್ಟು ನದಿಗಳಿದ್ದರೂ ಆ ನದಿಗಳಿಗೆ ಕಾಲುವೆಗಳನ್ನು ತೆಗೆದಿಲ್ಲ. ಬಿಜಾಪುರ ಜಿಲ್ಹೆಯಲ್ಲಿ ಮಳೆಯು ಕಾಲಕಾಲಕ್ಕೆ ಬೀಳುವದಿಲ್ಲವಾದ್ದರಿಂದ ಮೇಲಿಂದ ಮೇಲೆ ಬರಗಾಲ ಬೀಳುತ್ತದೆ. ನಮ್ಮ ಸಮಸ್ಯೆಗಳನ್ನು ಬಿಡಿಸಿಕೊಳ್ಳಲು ಕರ್ನಾಟಕ ಏಕೀಕರಣ ಒಂದೇ ದಾರಿ.

ಏಕೀಕರಣವಾಗುವದಕ್ಕಿಂತ ಮೊದಲು ಕನ್ನಡಿಗರೆಲ್ಲರೂ ಒಂದು ಎಂಬ ಭಾವನೆಯು ಬೆಳೆಯಬೇಕು. ಕೆಲವರು ಮೈಸೂರಿಗೊಂದು ಪ್ರತ್ಯೇಕಸಂಸ್ಕೃತಿ ಯಿರುವದು ಎಂಬ ನೆವದಿಂದ ಮೈಸೂರು ಪ್ರತ್ಯೇಕವಾಗಿರಬೇಕು ಎಂದು ಪ್ರಚಾರಮಾಡುತ್ತಿರುವರು. ಇಂಥ ಸಂಕುಚಿತ ವೃತ್ತಿಯಿಂದ ನಮ್ಮ ದೇಶದ ಅಭಿವೃದ್ಧಿಯಾಗಲಾರದು. ಮೈಸೂರು ಔದ್ಯೋಗಿಕ ದೃಷ್ಟಿಯಿಂದ ಉಳಿದ

ಕರ್ನಾಟಕಕ್ಕಿಂತ ಮುಂದುವರಿದಿರಬಹುದು. ಇದಕ್ಕೆ ಕಾರಣವೂ ಇದೆ. ಮೈಸೂರು ಒಂದೇ ಆಡಳಿತಕ್ಕೊಳಪಟ್ಟಿರುವದೇ ಇದರ ಮೂಲ ಕಾರಣವು. ಉತ್ತರ ಕರ್ನಾಟಕದಲ್ಲಿ ನೈಸರ್ಗಿಕ ಸಂಪತ್ತು ಅಪಾರವಾಗಿದೆ. ಆದರೆ ನಾವು ಅದರ ಉಪಯೋಗವನ್ನು ಮಾಡಿಕೊಂಡಿಲ್ಲ.

ಕರ್ನಾಟಕ ಏಕೀಕರಣವಾದರೆ ನಮ್ಮ ಎಲ್ಲ ಸಮಸ್ಯೆಗಳೂ ಪರಿಹಾರವಾಗುವವು ಎಂದು ಯಾರೂ ಭಾವಿಸಬಾರದು. ಕರ್ನಾಟಕ ಏಕೀಕರಣದಿಂದ ನಮ್ಮ ಸಮಸ್ಯೆಗಳನ್ನು ಬಿಡಿಸಲು ಮಾತ್ರ ಸಹಾಯವಾಗುವದು. ಕನ್ನಡ ಭಾಷೆಯ ಉನ್ನತಿಗಾಗಿ ಸರಕಾರವು ಮೊದಲು ಹೆಣಗಬೇಕು. ಎಲ್ಲ ಪ್ರಾಂತಗಳಲ್ಲಿಯೂ ಕನ್ನಡಿಗರು ಅಲ್ಪಸಂಖ್ಯಾಕರಾಗಿರುವದರಿಂದ ಅವರ ಭಾಷೆಯ ಬಗ್ಗೆಯೂ ಸರಕಾರವು ಅನಾಸ್ಥೆಯನ್ನು ತಾಳಿರುವದು. ಪ್ರಾಂತೀಯ ಭಾಷೆಗಳ ಬಗ್ಗೆ ಸರಕಾರವು ಒಟ್ಟಿನ ಮೇಲೆ ಔದಾಸೀನ್ಯವನ್ನೇ ತಾಳಿದೆ. ನಮ್ಮ ಶಿಕ್ಷಣವೆಲ್ಲವೂ ಮಾತೃಭಾಷೆಯ ಮುಖಾಂತರವೇ ನಡೆಯಬೇಕೆಂಬ ತತ್ವವನ್ನು ಎಲ್ಲ ಶಿಕ್ಷಣ ತಜ್ಞರೂ ಒಪ್ಪಿಕೊಂಡಿರುವರು. ಉಚ್ಚ ಶಿಕ್ಷಣವನ್ನು ನಮ್ಮ ಪ್ರಾಂತ ಭಾಷೆಗಳಲ್ಲಿ ಕಲಿಸುವಷ್ಟು ಅವುಗಳ ಬೆಳವಣಿಗೆಯಾಗಿಲ್ಲ. ಪ್ರಾಂತ ಭಾಷೆಗಳ ಬೆಳವಣಿಗೆಗಾಗಿ ನಾವು ಪ್ರಯತ್ನಿಸಬೇಡವೇ? ಹೈದರಾಬಾದ ಸರಕಾರವು ಉರ್ದುವನ್ನು ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಮಾಧ್ಯಮವನ್ನಾಗಿ ಮಾಡಿದಾಗ ಉರ್ದುಭಾಷೆಯಲ್ಲಿ ಪಠ್ಯಪುಸ್ತಕಗಳಿರಲಿಲ್ಲ. ಆದರೆ ಹೈದರಾಬಾದ ಸರಕಾರವು ಕೋಟ್ಯಂತರ ರೂಪಾಯಿಗಳನ್ನು ಖರ್ಚು ಮಾಡಿ ಇಂಗ್ಲಿಷ ಭಾಷೆಯಲ್ಲಿಯ ಅನೇಕ ಪುಸ್ತಕಗಳನ್ನು ಉರ್ದುಭಾಷೆಗೆ ಭಾಷಾಂತರ ಮಾಡಿಸಿದೆ. ನಮ್ಮ ಭಾಷೆಯ ಅಭಿವೃದ್ಧಿಗಾಗಿ ಸರಕಾರವೂ ಜನತೆಯೂ ಕೂಡಿಯೇ ದುಡಿಯಬೇಕಾಗಿದೆ. ನಮ್ಮ ಭಾಷೆಯು ಸರ್ವಾಂಗ ಸುಂದರವಾಗಬೇಕು. ವಿಶ್ವಕೋಶ, ಶಬ್ದಕೋಶ ಮುಂತಾದ ಗ್ರಂಥಗಳನ್ನು ಪ್ರಕಟಿಸಬೇಕಾದರೆ ಸರಕಾರದ ಸಹಾಯವು ಅತ್ಯಗತ್ಯ.

ಕೇವಲ ಕತೆ-ಕಾದಂಬರಿಗಳಿಂದ ಯಾವ ಸಾಹಿತ್ಯವೂ ಪರಿಪೂರ್ಣವಾಗಲಾರದು. ಅಂದರೆ ಕತೆ-ಕಾದಂಬರಿಗಳ ಆವಶ್ಯಕತೆಯಿಲ್ಲವೆಂದು ಅರ್ಥ ಮಾಡಬಾರದು. ಸಾಹಿತ್ಯ ಗ್ರಂಥಗಳಲ್ಲಿ ಎರಡು ಭಾಗಗಳನ್ನು ಮಾಡಬಹುದು, ಒಂದು ಲಲಿತಕಲೆ ಮತ್ತೊಂದು ಜ್ಞಾನವನ್ನು ಕೊಡತಕ್ಕ ಗ್ರಂಥ

ಗಳು. ಕನ್ನಡದಲ್ಲಿ ಮೊದಲನೇ ವರ್ಗಕ್ಕೆ ಸೇರಿದ ಸಾಹಿತ್ಯವು ಸಾಕಷ್ಟು ಬೆಳೆದಿರುವದು. ಆದರೆ ಉಪಯುಕ್ತವಾದ ಜ್ಞಾನವನ್ನು ಕೊಡತಕ್ಕ ಗ್ರಂಥಗಳ ಕೊರತೆಯು ವಿಶೇಷವಾಗಿದೆ. ಮಾನಸಶಾಸ್ತ್ರ, ವಿಜ್ಞಾನ, ತರ್ಕಶಾಸ್ತ್ರ, ಅರ್ಥಶಾಸ್ತ್ರ, ಇತಿಹಾಸ, ತತ್ವಜ್ಞಾನ ಮುಂತಾದ ವಿಷಯಗಳ ಬಗ್ಗೆ ಗ್ರಂಥಗಳು ತೀರಕಡಿಮೆಯಾಗಿವೆ. ಆಂಗ್ಲಭಾಷೆಯಲ್ಲಿ ಒಂದು ವಿಷಯದ ಬಗ್ಗೆ ಅನೇಕ ಗ್ರಂಥಗಳು ದೊರೆಯುವವು. ಕನ್ನಡದಲ್ಲಿಯೂ ಈ ಸಾಹಿತ್ಯವು ವಿಪುಲವಾಗಿ ಬೆಳೆದು ಬರಬೇಕು.

ನಮ್ಮ ಜೀವನಮಟ್ಟವು ಹೆಚ್ಚಾಗಬೇಕು. ಪ್ರತಿಯೊಬ್ಬನಿಗೂ ಅತ್ಯಾವಶ್ಯಕವಾದ ಆಹಾರ, ಬಟ್ಟೆ, ವಾಸಿಸಲು ತಕ್ಕದಾದ ಮನೆ ಇವು ದೊರೆಯಬೇಕು. ಈ ಅವಶ್ಯಕತೆಗಳ ಪೂರ್ತೈಕೆಯಾದರೆ ಮುಗಿಯಲಿಲ್ಲ. ಹೊಟ್ಟೆ ಹೊರೆಯುವದೊಂದೇ ಮನುಷ್ಯನ ಗುರಿಯಲ್ಲ. "ಸಾಹಿತ್ಯ ಸಂಗೀತ ಕಲಾ ವಿಹೀನಃ ಸಾಕ್ಷಾತ್ ಪಶುಃ ಎಂದು ಭರ್ತೃಹರಿಯು ಹೇಳಿರುವನು. ಸಾಹಿತ್ಯವು ಕೇವಲ ಪಂಡಿತರಿಗಾಗಿ ಇಲ್ಲ. ಸಾಮಾನ್ಯ ಜನರಿಗೂ ಸಾಹಿತ್ಯದಿಂದ ದೊರೆಯಬೇಕಾದ ಆನಂದವನ್ನು ಪಡೆಯುವ ಹಕ್ಕು ಇರುವದು. ಅಮೇರಿಕೆಯಲ್ಲಿ ಆಕಾಶವಾಣಿಯು ಬಹಳ ಪ್ರಚಾರದಲ್ಲಿರುವದು. ಪ್ರತಿಯೊಂದು ಮನೆಯಲ್ಲಿಯೂ ಆಕಾಶವಾಣಿಯನ್ನು ನೋಡಬಹುದು. ನಮ್ಮ ಜನವೂ ಅದೇ ಪ್ರಕಾರದ ಸೌಕರ್ಯಗಳನ್ನು ಪಡೆಯಲು ಯೋಗ್ಯತೆಯುಳ್ಳವರಾಗಬೇಕು. ಹಳ್ಳಿಹಳ್ಳಿಗಳಿಗೆ ವಿದ್ಯುತ್ ದೀಪಗಳು ಬರಬೇಕು. ವಿದ್ಯುತ್ತಿನಿಂದ ಯಾವ ಕೆಲಸ ಅಸಾಧ್ಯವಾದೀತು ? ನಮ್ಮ ಸಾಂಪತ್ತಿಕ ಸ್ಥಿತಿಯು ಸುಧಾರಿಸಿದರೆ ನಮ್ಮ ಜನರು ಸುಖಿಗಳಾಗಬಲ್ಲರು. ಆಗ ನಾವು ಅವರಲ್ಲಿ ಸಾಹಿತ್ಯಾಭಿರುಚಿಯನ್ನು ಬೆಳೆಸಬಹುದು. ಅರೆಹೊಟ್ಟೆಯಿಂದ ಬಳಲುವವನು ಸಾಹಿತ್ಯವನ್ನು ಹೇಗೆ ತಿಳಿದುಕೊಂಡಾನು? ಗಾಂಧೀಜಿಯವರು ಹೇಳಿದಂತೆ ದರಿದ್ರರ ಭೆಟ್ಟಿಗೆ ಪರಮಾತ್ಮನು ಬರಬೇಕಾದರೆ ಅವನು ಆಹಾರದ ರೂಪದಲ್ಲಿ ಬರಬೇಕು. ದರಿದ್ರರಾದವರು ಪರಮಾತ್ಮನು ಬೇರೆ ರೂಪದಿಂದ ಬಂದರೂ ಅವನನ್ನು ಸ್ವಾಗತಿಸಲಾರರು. ಬಡತನವು ಬಹಳ ದಿವಸಗಳಿಂದ ನಮ್ಮ ಜೀವನವನ್ನೇ ಹಾಳು ಮಾಡುತ್ತಿರುವದು. ನಮ್ಮ ಬಡತನವು ಇಂದು ದೂರಾಗಬೇಕಾಗಿದೆ.

## ೪೧. ನನ್ನ ಪ್ರೀತಿಯ ಪುಸ್ತಕ

ಸುಪ್ರಸಿದ್ಧ ನಿಬಂಧಕಾರನಾದ ಕಾರ್ಲಾಯಿಲನು ಒಂದು ನಿಬಂಧದಲ್ಲಿ ಬ್ರಿಟಿಶರಿಗೆ ಒಂದು ಪ್ರಶ್ನೆ ಕೇಳಿದ್ದಾನೆ. "ನಿಮಗೆ ಮಹಾಕವಿ ಷೇಕ್ಸಪಿಯರ ಬೇಕೋ ಅಥವಾ ಬ್ರಿಟಿಶ ಸಾಮ್ರಾಜ್ಯ ಬೇಕೋ?" ಎಂದು ಕೇಳಿ ಷೇಕ್ಸಪಿಯರನೇ ಬ್ರಿಟಿಶ ಸಾಮ್ರಾಜ್ಯಕ್ಕಿಂತಲೂ ಹೆಚ್ಚು ಮಹತ್ವದವನೆಂದು ಹೇಳಿರುವನು. ಇಂದು ಬ್ರಿಟಿಶರ ಸಾಮ್ರಾಜ್ಯವು ಇಲ್ಲವಾಗಿದೆ. ಆದರೆ ಷೇಕ್ಸಪಿಯರನ ಹೆಸರು ಮಾತ್ರ ಅಜರಾಮರವಾಗಿರುವದು. ಷೇಕ್ಸಪಿಯರನಂಥ ಕವಿಗಳು ಇಡೀ ಜನಾಂಗದಲ್ಲಿ ಯುಗಕ್ಕೊಮ್ಮೆ ಹುಟ್ಟುವರು. ಅವರ ಪ್ರಭಾವವು ಮುಂದಿನ ಜನಾಂಗದ ಮೇಲೆ ಕಡೆತನಕವಿರುವದು. ಷೇಕ್ಸಪಿಯರನು ದುರಂತ ನಾಟಕಗಳನ್ನು ಬರೆಯುವದರಲ್ಲಿ ಹೆಸರುವಾಸಿಯಾದವನು. ಅವನು ಬರೆದ ಸುಖಾಂತನಾಟಕಗಳಿಗಿಂತಲೂ ಅವನ ದುಃಖಾಂತ ನಾಟಕಗಳೇ ಇಂದು ಪ್ರಸಿದ್ಧವಾಗಿರುವವು. ಈ ದುಃಖಾಂತ ನಾಟಕಗಳಿಂದಲೇ ಅವನು ಜಗತ್ತಿನ ಮಹಾ ನಾಟಕಕಾರರಲ್ಲಿ ಗಣ್ಯನಾಗಿರುವನು. ಅವನ ದುಃಖಾಂತ ನಾಟಕಗಳಲ್ಲಿ ಯಾವದು ಶ್ರೇಷ್ಠವಾದದ್ದು ಎಂಬುದನ್ನು ಬೇರೆ ಬೇರೆಯವರು ಬೇರೆ ಬೇರೆಯಾಗಿ ಹೇಳಬಹುದು. ನನಗೆ ಮಾತ್ರ ಷೇಕ್ಸಪಿಯರನ ಎಲ್ಲ ನಾಟಕಗಳಲ್ಲಿ "ಹ್ಯಾಮ್ಲೆಟ್" ನಾಟಕವೇ ಅತಿ ಶ್ರೇಷ್ಠವೆಂದು ತೋರುವದು.

ಈ ನಾಟಕವು ಒಂದು ದುರಂತ ನಾಟಕವಾಗಿದೆ. ಈ ನಾಟಕವನ್ನು ಓದುವಾಗ ನಮಗೆ ಮೈಮೇಲೆ ಎಚ್ಚರವೇ ಉಳಿಯುವದಿಲ್ಲ. ಕಥಾನಾಯಕನೊಂದಿಗೆ ನಾವು ಒಂದಾಗಿ ಬಿಡುವೆವು. ಅವನ ಬಗ್ಗೆ ಸಹಾನುಭೂತಿಯು ಉತ್ಪನ್ನವಾಗುವದು. ಮುಂದೇನು ನಡೆಯುವದು ಎಂಬುದನ್ನು ತಿಳಿದುಕೊಳ್ಳಲು ಕುತೂಹಲವುಂಟಾಗುವದು.

ಭೀಕರವಾದ ರಾತ್ರಿಯಲ್ಲಿ ಇಬ್ಬರು ಕಾವಲುಗಾರರು ಅರಮನೆಯ ಮುಂದೆ ನಿಂತಿರುವರು. ಅವರು ಭೂತವು ಅರಮನೆಯ ಮುಂದೆ ಹಾಯ್ದು ಹೋಗುವದನ್ನು ಕಂಡು ಗಾಬರಿಯಾಗುವರು. ಇದನ್ನು ಹ್ಯಾಮ್ಲೆಟ್‌ನ ಮಿತ್ರನಾದ ಹೋರಾಶಿಯೋ ಅವಲೋಕಿಸುವನು. ಆಗಿನ ಕಾಲದ ಜನರು ಭೂತಗಳಲ್ಲಿ ವಿಶ್ವಾಸವನ್ನಿಟ್ಟಿದ್ದರು. ಆದ್ದರಿಂದ ಷೇಕ್ಸಪಿಯರನು ತನ್ನ ನಾಟಕ

ದಲ್ಲಿ ಭೂತವನ್ನು ಉಪಯೋಗಿಸಿದ್ದಾನೆ. ಭೂತವಿಲ್ಲದಿದ್ದರೆ ಹ್ಯಾಮ್ಲೆಟ್ ನಾಟಕವು ಇಷ್ಟು ಭೀಕರವಾಗುತ್ತಿದ್ದಿಲ್ಲ.

ಹ್ಯಾಮ್ಲೆಟ್‌ನು ತನ್ನ ತಂದೆಯ ಆಕಸ್ಮಿಕ ಮರಣದಿಂದ ದುಃಖಿತನಾಗಿ ತಿರುಗಿ ತನ್ನ ಪಟ್ಟಣಕ್ಕೆ ಬರುವನು. ಪಿತೃವತ್ಸಲನಾದ ಅವನಿಗೆ ತನ್ನ ತಂದೆಯು ಒಮ್ಮೆಲೆ ತೀರಿಕೊಂಡದ್ದರಿಂದ ಬಹಳ ದುಃಖವಾಗಿತ್ತು. ಅವನು ಜರ್ಮನ್ ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದನು. ಅವನು ತಿರುಗಿ ತನ್ನ ಪಟ್ಟಣಕ್ಕೆ ಬರುವಷ್ಟರಲ್ಲಿಯೇ ಅವನ ತಾಯಿಯು ಅವನ ಕಕ್ಕನನ್ನು ಮದುವೆಯಾಗಿದ್ದಳು. ಗಾಯದ ಮೇಲೆ ಬರೆಕೊಟ್ಟಂತಾಯಿತು! ಹೆಂಗಸರ ಮೇಲಿನ ವಿಶ್ವಾಸವೇ ಹಾರಿಹೋಯಿತು! ಅವನು ಸಿರಾಶೆಯಿಂದ Frailty thy name is Woman ಎಂದು ನುಡಿದನು. ವಯಸ್ಸಾದ ಅವನ ತಾಯಿಯು ತನ್ನ ಪತಿಯು ತೀರಿಕೊಂಡ ಕೂಡಲೇ ಅಯೋಗ್ಯನಾದ ಕಕ್ಕನನ್ನು ಮದುವೆಯಾಗುವದೇ? ಈ ವಿಚಾರವು ಅವನಿಗೆ ಬಹಳ ಕಳವಳವನ್ನುಂಟು ಮಾಡಿತು. ತನ್ನ ತಾಯಿಯ ಬಗ್ಗೆ ಇದ್ದ ಗೌರವಾದರಗಳೆಲ್ಲವೂ ಮಾಯವಾದವು.

ಈ ಸಮಯದಲ್ಲಿಯೇ ಹ್ಯಾಮ್ಲೆಟ್‌ನ ಮಿತ್ರನಾದ ಹೋರಾಶಿಯೋ ತಾನು ಭೂತವನ್ನು ನೋಡಿರುವದಾಗಿಯೂ ಅದನ್ನು ಹ್ಯಾಮ್ಲೆಟ್‌ನಿಗೆ ತೋರಿಸುವದಾಗಿಯೂ ಹೇಳುವನು. ಯಾಕಂದರೆ ಭೂತವು ಹ್ಯಾಮ್ಲೆಟ್‌ನ ತಂದೆಯಂತೆ ಕಾಣುತ್ತಿತ್ತು. ಮರುದಿವಸ ಮಧ್ಯ ರಾತ್ರಿಯ ವರೆಗೆ ಭೂತದ ಹಾದಿಯನ್ನು ಕಾಯುತ್ತ ಕುಳಿತುಕೊಂಡರು. ಹ್ಯಾಮ್ಲೆಟ್‌ನನ್ನು ಕಂಡು ಭೂತವು ತನ್ನನ್ನು ಹಿಂಬಾಲಿಸಬೇಕೆಂದು ಹೇಳುವದು. ಹ್ಯಾಮ್ಲೆಟ್‌ನು ಭೂತವನ್ನು ಹಿಂಬಾಲಿಸುವನು. 'ನಿನ್ನ ತಂದೆಯನ್ನು ಈಗ ಪಟ್ಟಕ್ಕೆ ಕುಳಿತಿರುವ ನಿನ್ನ ಕಕ್ಕನು ಕೊಂದಿರುವನು. ನಾನು ನಿನ್ನತಂದೆಯು. ನಿನ್ನತಾಯಿಗೆ ಯಾವ ರೀತಿಯಿಂದಲೂ ತೊಂದರೆ ಕೊಡಬೇಡ. ನಿನ್ನ ತಂದೆಯ ಸೇಡನ್ನು ತೀರಿಸಿಕೋ. ನಾನು ತೋಟದಲ್ಲಿ ಮಲಗಿಕೊಂಡಾಗ ನಿನ್ನ ಕಕ್ಕನಾದ ಕ್ಲಾಡಿಯೋ ನನ್ನ ಕಿವಿಯಲ್ಲಿ ವಿಷವನ್ನು ಸುರುವಿದನು'. ಇಷ್ಟು ಹೇಳಿ ಭೂತವು ಅದೃಶ್ಯವಾಯಿತು. ಈ ಸುದ್ದಿಯನ್ನು ಕೇಳಿ ಹಾಮ್ಲೆಟ್‌ನು ಭ್ರಮಿಷ್ಟನಾದಂತಾದನು. ತಾನು ಹುಚ್ಚನಂತೆ ನಟಿಸುವದಾಗಿ ತನ್ನ ಮಿತ್ರರಿಗೆ ಹೇಳಿದನು. ತನ್ನ ತಂದೆಯ ಸೇಡನ್ನು ತೀರಿಸಿಕೊಳ್ಳುವದೊಂದೇ ಅವನ ಜೀವನ ಧ್ಯೇಯವಾಯಿತು.

ಹ್ಯಾಮ್ಲೆಟ್‌ನು ಹುಚ್ಚನಂತೆ ನಟಿಸುವವನನ್ನು ಕಂಡು ಕ್ಲಾಡಿಯಸ್‌ನಿಗೆ ಸಂಶಯ ಉತ್ಪನ್ನವಾಯಿತು. ಇವನು ಹುಚ್ಚನಂತೆ ನಟಿಸುವದಕ್ಕೆ ಏನು ಕಾರಣವಿರಬೇಕೆಂದು ಅವನು ಯೋಚಿಸತೊಡಗಿದನು. ತನ್ನ ಮಂತ್ರಿಯಾದ ಪ್ರೋಲೋನಿಸ್ಸನನ್ನು ಕರೆದು ಇವರ ಬಗ್ಗೆ ವಿಚಾರಿಸಿದನು. ಪ್ರೋಲೋನಿಸ್ಸನು "ಹ್ಯಾಮ್ಲೆಟ್‌ನಿಗೆ ನನ್ನ ಮಗಳ ಹುಚ್ಚು ಹಿಡಿದಿರುವದು. ಇದನ್ನು ಬೇಕಾದರೆ ಪ್ರತ್ಯಕ್ಷ ಪ್ರಮಾಣಿಸಿ ನೋಡಬಹುದು" ಎಂದು ನುಡಿಯುವನು. ಅರಸನಿಗೆ ಪ್ರೋಲೋನಿಸ್ಸನ ಮಾತಿನಲ್ಲಿ ನಂಬಿಗೆಯುಂಟಾಗಲಿಲ್ಲ. ಆದರೆ ಇದನ್ನು ಪರೀಕ್ಷೆ ಮಾಡಬೇಕೆಂದು ಯೋಚಿಸಿದನು. ಹ್ಯಾಮ್ಲೆಟ್‌ನು ಮೊದಲು ಪೋಲೋನಿಸ್ಸನ ಮಗಳಾದ ಆಫಿಲಿಯಾಳನ್ನು ಪ್ರೀತಿಸುತ್ತಿದ್ದನು. ಆದರೆ ತನ್ನ ತಾಯಿಯ ಉದಾಹರಣೆಯಿಂದ ಹೆಂಗಸರಲ್ಲಿದ್ದ ವಿಶ್ವಾಸವೇ ಹಾರಿ ಹೋಯಿತು. ಆಫಿಲಿಯಾ ತೀರ ಸಾಧು ಸ್ವಭಾವದವಳಾದ್ದರಿಂದ ಹ್ಯಾಮ್ಲೆಟ್‌ನ ವಿಚಿತ್ರವಾದ ನಡತೆಯನ್ನು ಅರಿತುಕೊಳ್ಳಲು ಅವಳಿಗೆ ಆಗಲಿಲ್ಲ. ತಂದೆಯ ಅಪ್ಪಣೆಯಂತೆ ಆವಳು ಹ್ಯಾಮ್ಲೆಟ್‌ನ ಹಾದೀ ಕಾಯುತ್ತ ಕುಳಿತುಕೊಳ್ಳುವಳು.

ಹ್ಯಾಮ್ಲೆಟ್‌ನು ಅವಳ ಕಡೆಗೆ ಬರುವನು. ಇದನ್ನು ಪೋಲೋನಿಸ್ ಮತ್ತು ಕ್ಲಾಡಿಯಸ್ ನಿರೀಕ್ಷಿಸುವರು. ಹ್ಯಾಮ್ಲೆಟ್‌ನು ಅವಳನ್ನು ಕಂಡ ಕೂಡಲೇ 'ನಿನ್ನ ತಂದೆಯು ಎಲ್ಲಿರುವನು?' ಎಂದು ಕೇಳುವನು. ಅವಳು ಅವನಿಗೆ ಸುಳ್ಳು ಹೇಳುವಳು. ತಂದೆಯ ಅಪ್ಪಣೆಯಂತೆ ಹ್ಯಾಮ್ಲೆಟ್‌ನ ಕಾಣಿಕೆಗಳನ್ನು ತಿರುಗಿ ಒಪ್ಪಿಸುವಳು. ಇದರಿಂದ ಹ್ಯಾಮ್ಲೆಟ್‌ನಿಗೆ ಅವಳ ಮೇಲಿನ ಪ್ರೀತಿಯು ಕಡಿಮೆಯಾಗುವದು. ಅವಳು ತನ್ನನ್ನು ಪ್ರೀತಿಸುವದಿಲ್ಲವೆಂದು ಅವನು ಭಾವಿಸುವನು. ಅವಳ ಪ್ರಾಮಾಣಿಕತೆಯ ಬಗ್ಗೆ ಅವನಲ್ಲಿ ಸಂಶಯ ಉತ್ಪನ್ನವಾಗುವದು. ಅವನು ಸಿಟ್ಟಿಗೆದ್ದು ಅವಳನ್ನು ನಿಂದಿಸುತ್ತ ಹೊರಟು ಹೋಗುವನು. ಇದರಿಂದ ಕ್ಲಾಡಿಯಸ್‌ನು ಹ್ಯಾಮ್ಲೆಟ್‌ನಿಗೆ ಅಫಿಲಿಯಾಳ ಹುಚ್ಚು ಹಿಡದಿಲ್ಲವೆಂಬದನ್ನು ಅರಿತುಕೊಂಡನು.

ಹ್ಯಾಮ್ಲೆಟ್‌ನನ್ನು ಹಾದಿಗೆ ತರುವದು ಕ್ಲಾಡಿಯಸ್ಸನಿಗೆ ಒಂದು ದೊಡ್ಡ ಸಮಸ್ಯೆಯೇ ಆಗಿತ್ತು. ತಾನು ಪಟ್ಟವನ್ನು ಆಕ್ರಮಿಸಿದ್ದರಿಂದ ಹ್ಯಾಮ್ಲೆಟ್‌ನು ಈ ರೀತಿಯಾಗಿ ಮಾಡುತ್ತಿರಬಹುದೆಂಬ ವಿಚಾರವು ಅವನಿಗೆ

ಪೂರ್ಣವಾಗಿ ತಿಳಿದಿತ್ತು. ಇದಲ್ಲದೆ ಹ್ಯಾಮ್ಲೆಟ್‌ನು ಬಹಳ ಲೋಕಪ್ರಿಯ ನಾಗಿದ್ದನು. ಪೋಲೋನಸ್ಸನು ಮತ್ತೊಂದು ವಿಚಾರವನ್ನು ಅರಸನಿಗೆ ತಿಳಿಸಿ ದನು. ಹ್ಯಾಮ್ಲೆಟ್‌ನಿಗೆ ಅವನ ತಾಯಿಯಿಂದ ಕೆಲವು ಮಾತುಗಳನ್ನು ಹೇಳಿ ಸಬೇಕೆಂಬುದು ಪೋಲೋನಸ್ಸನ ವಿಚಾರವಾಗಿತ್ತು. ತಾನು ಅಡಗಿಕೊಂಡು ಕುಳಿತು ಹ್ಯಾಮ್ಲೆಟ್ ಮತ್ತು ಅವನ ತಾಯಿಯಲ್ಲಿ ನಡೆಯುವ ಸಂಭಾಷಣೆ ಯನ್ನು ತಾನು ಕೇಳುವದಾಗಿ ಹೇಳಿದನು. ಹ್ಯಾಮ್ಲೆಟ್‌ನು ತನ್ನ ತಾಯಿಯ ಭೆಟ್ಟಿಗೆ ಹೋಗುವನು. ಪೋಲೋನಸ್ಸನು ಮರೆಯಲ್ಲಿ ಅಡಗಿ ಕುಳಿತು ಕೊಳ್ಳುವನು. ಹ್ಯಾಮ್ಲೆಟ್‌ನು ತನ್ನ ತಾಯಿಯನ್ನು ಭೆಟ್ಟಿಯಾದಾಗ ಅವಳಿಗೆ ಬಹಳ ಬಿರುಸಾದ ಮಾತುಗಳನ್ನಾಡುವನು. ಅವನ ತಾಯಿಯು ಸಹಾಯ ಸಹಾಯ ಎಂದು ಚೀರುವಳು. ಅಡಗಿಕೊಂಡು ಕುಳಿತಿದ್ದ ಪೋಲೋನಸ್ಸನೂ ಸಹಾಯವೆಂದು ಚೀರುವನು. ಅರಸನೇ ಅಡಗಿಕೊಂಡು ಕುಳಿತಿರುವನೆಂದು ತಿಳಿದು ಹ್ಯಾಮ್ಲೆಟ್‌ನು ತನ್ನ ಕತ್ತಿಯಿಂದ ಬೀಸುವನು. ನಿರಪರಾಧಿಯಾದ ಪೋಲೋನಸ್ಸನು ಮರಣ ಹೊಂದುವನು. ಈ ಸುದ್ದಿಯು ಕ್ಲಾಡಿಯಸ್ಸನಿಗೆ ತಿಳಿದ ಕೂಡಲೇ ಹ್ಯಾಮ್ಲೆಟ್‌ನು ತನ್ನನ್ನು ಕೊಲ್ಲುವ ಹಂಚಿಕೆಯಲ್ಲಿರುವ ನೆಂಬುದನ್ನು ಅರಿತುಕೊಳ್ಳುವನು.

ಕ್ಲಾಡಿಯಸ್ ಮತ್ತು ಹ್ಯಾಮ್ಲೆಟ್ ಇವರಿಬ್ಬರಲ್ಲಿಯ ಸಾಮ್ಯವೈಷಮ್ಯ ಗಳು ಎದ್ದು ಕಾಣುವಂತೆ ಷೇಕ್ಸಪಿಯರನು ಚಿತ್ರಿಸಿರುವನು. ಹ್ಯಾಮ್ಲೆಟ್‌ನು ವಿಚಾರ ಮಾಡುವದರಲ್ಲಿಯೇ ಬಹಳ ವೇಳೆಯನ್ನು ಕಳೆಯುವನು. ಕ್ಲಾಡಿ ಯಸ್ ಇದರ ವಿರುದ್ಧವಾಗಿ ತ್ವರಿತದಲ್ಲಿಯೇ ಪ್ರತಿಯೊಂದು ಕಾರ್ಯವನ್ನು ನೆರವೇರಿಸುವನು. ಅವನು ಶೀಘ್ರವಾಗಿಯೇ ಹ್ಯಾಮ್ಲೆಟ್‌ನನ್ನು ಇಂಗ್ಲಂಡಕ್ಕೆ ಕಳಿಸುವ ವ್ಯವಸ್ಥೆಯನ್ನು ಮಾಡುವನು. ಇಂಗ್ಲಂಡಕ್ಕೆ ಹ್ಯಾಮ್ಲೆಟ್‌ನು ಬಂದಕೂಡಲೆ ಅವನ ಕೊಲೆ ಮಾಡಬೇಕೆಂದು ಪತ್ರವನ್ನು ಬರೆದು ಹ್ಯಾಮ್ಲೆ ಟ್‌ನ ಮಿತ್ರರಾದವರ ಕೈಯಲ್ಲಿ ಕೊಡುವನು. ಈ ಮಿತ್ರರನ್ನುಕ್ಲಾಡಿಯಸ್ಸನು ತನ್ನ ಕಡೆಗೆ ಮಾಡಿಕೊಂಡಿದ್ದನು.

ಹ್ಯಾಮ್ಲೆಟ್‌ನು ಹಡಗದಲ್ಲಿ ಹತ್ತಿದ ಕೂಡಲೇ ಕ್ಲಾಡಿಯಸ್ಸನ ಹಂಚಿ ಕೆಯ ಬಗ್ಗೆ ಅವನಿಗೆ ಸಂಶಯ ಬರುವದು. ಕ್ಲಾಡಿಯಸ್ಸನು ಬರೆದ ಕಾಗದ ವನ್ನು ಗುಪ್ತವಾಗಿ ಶೋಧಿಸಿ ಓದುವನು ಕೂಡಲೇ ಹಡಗದಿಂದ ಪಾರಾಗಿ ಬರುವನು.

ತಂದೆಯ ಮರಣದ ಸುದ್ದಿಯನ್ನು ಕೇಳಿ ಆಫಿಲಿಯಾ ಇವಳಿಗೆ ಹುಚ್ಚು ಹಿಡಿಯುವದು. ಅವಳು ತಂದೆಯನ್ನು ನೆನೆಸುತ್ತ ಹಳ್ಳದಲ್ಲಿ ಬಿದ್ದು ಮರಣ ಹೊಂದುವಳು. ಆಫಿಲಿಯಾಳ ಅಣ್ಣನಾದ ಲೆರೆಟಿಸ್‌ನು ಬಹಳ ಕೋಪದಿಂದ ಅರಸನನ್ನು ಕೊಲ್ಲಲು ಏರಿ ಬರುವನು. ಅರಸನು ಯುಕ್ತಿಯಿಂದ ಅವನನ್ನು ಸಮಾಧಾನಪಡಿಸುವನು.

ಒಂದು ನಾಟಕ ಕಂಪನಿಯು ಅಲ್ಲಿಗೆ ಬರುವದು. ನಾಟಕವೆಂದರೆ ಹ್ಯಾಮ್ಲೆಟ್‌ನಿಗೆ ಬಹಳ ಇಷ್ಟವಾದದ್ದು. ಅವನು ಕ್ಲಾಡಿಯಸ್ಸನನ್ನು ಪರೀಕ್ಷಿಸುವದಕ್ಕಾಗಿ ನಾಟಕಕಾರರಿಗೆ ನಾಟ್ಯವಾಡಲು ಹೇಳುವನು. ನಾಟಕ ನೋಡಲು ಅರಸನೂ ರಾಣಿಯೂ ಬರುವರು. ನಾಟಕದಲ್ಲಿ ಕ್ಲಾಡಿಯಸ್ಸನು ತನ್ನ ಅಣ್ಣನ ಕಿವಿಯಲ್ಲಿ ವಿಷಹಾಕಿದಂತಹ ಘಟನೆಯನ್ನು ಕಂಡು ನಡುವೆಯೇ ನಾಟಕಶಾಲೆಯಿಂದ ಎದ್ದು ಹೋಗುವನು. ಭೂತವು ಹೇಳಿದಂತೆ ತನ್ನ ತಂದೆಯನ್ನು ಕೊಂದವನು ಕ್ಲಾಡಿಯಸ್‌ನೇ ಎಂಬ ಬಗ್ಗೆ ಹ್ಯಾಮ್ಲೆಟ್‌ನಿಗೆ ಪೂರ್ಣ ಮನವರಿಕೆಯಾಗುವದು. ಕ್ಲಾಡಿಯಸ್ಸನನ್ನು ಕೊಲ್ಲಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸುವನು. ಕ್ಲಾಡಿಯಸ್ಸನನ್ನು ಕೊಲ್ಲುವ ಸಂಧಿಯೂ ಅವನಿಗೆ ದೊರೆಯುವದು. ಕ್ಲಾಡಿಯಸ್ಸನು ಪ್ರಾರ್ಥನೆ ಮಾಡುತ್ತಿರುವನು. ಪ್ರಾರ್ಥನೆ ಮಾಡುವಾಗ ಕೊಲ್ಲಬಾರದೆಂದು ಹ್ಯಾಮ್ಲೆಟ್‌ನು ಅವನನ್ನು ಬಿಟ್ಟುಬಿಡುವನು.

ಕ್ಲಾಡಿಯಸ್ಸನು ಹ್ಯಾಮ್ಲೆಟ್‌ನನ್ನು ಕೊಲ್ಲುವದಕ್ಕಾಗಿ ಕೊನೆಯ ಪ್ರಯತ್ನ ಮಾಡುವನು. ಲೆರೆಟಿಸ್‌ನಿಗೆ ಹ್ಯಾಮ್ಲೆಟ್‌ನ ಸಂಗಡ ಕತ್ತಿ ಯುದ್ಧವನ್ನು ಮಾಡುವಂತೆ ಹುರಿದುಂಬಿಸುವನು. ಲೆರೆಟಿಸ್‌ನ ಕತ್ತಿಗೆ ವಿಷವನ್ನು ಹಚ್ಚುವನು ಈ ಯುದ್ಧವನ್ನು ನೋಡುವದಕ್ಕಾಗಿ ಹ್ಯಾಮ್ಲೆಟ್‌ನ ತಾಯಿಯೂ ಬರುವಳು. ಒಂದು ವೇಳೆ ಈ ಯುದ್ಧದಲ್ಲಿ ಹ್ಯಾಮ್ಲೆಟ್‌ನು ಸಾಯದಿದ್ದರೆ ನಡುವೆ ಅವನು ವಿಶ್ರಾಂತಿಗೆಂದು ಬಂದಾಗ ಅವನಿಗೆ ವಿಷ ಕೊಡುವೆನೆಂದು ಕ್ಲಾಡಿಯಸ್ಸನು ಲೆರೆಟಿಸ್‌ನಿಗೆ ಹೇಳುವನು.

ಲೆರೆಟಿಸ್ ಮತ್ತು ಹ್ಯಾಮ್ಲೆಟ್ ಇವರಿಬ್ಬರಲ್ಲಿ ಕತ್ತಿಯುದ್ಧವು ಪ್ರಾರಂಭವಾಗುವದು. ಹ್ಯಾಮ್ಲೆಟ್‌ನನ್ನು ವಿಷದ ಕತ್ತಿಯಿಂದ ಲೆರೆಟಿಸ್ ಹೊಡೆಯುವನು. ಹ್ಯಾಮ್ಲೆಟ್‌ನು ಪ್ರತಿಯಾಗಿ ಲೆರೆಟಿಸ್‌ನನ್ನು ಅದೇ ಕತ್ತಿ

ಯಿಂದ ಹೊಡೆಯುವನು. ಇಷ್ಟರಲ್ಲಿಯೇ ಹ್ಯಾಮ್ಲೆಟ್‌ನಿಗಾಗಿ ತಂದಿದ್ದ ವಿಷವನ್ನು ಅವನ ತಾಯಿಯು ಕುಡಿಯುವಳು. ಅವನ ತಾಯಿಯು ನೆಲಕ್ಕುರುಳುವಳು. ತಾನು ಕುಡಿದ ವಿಷದಿಂದ ನೆಲಕ್ಕುರುಳಿದುದಾಗಿ ಹೇಳುವಳು. ಅರಸನೇ ಎಲ್ಲಕ್ಕೂ ಕಾರಣನೆಂದು ಲಿರಿಟಿಸ್ ಹೇಳುವನು. ಹ್ಯಾಮ್ಲೆಟ್‌ನು ತನ್ನ ಕೈಯೊಳಗಿನ ಖಡ್ಗದಿಂದ ಅರಸನನ್ನು ಇರಿಯುವನು. ಸ್ವಲ್ಪ ಹೊತ್ತಿನಲ್ಲಿಯೇ ವಿಷವೇರಿ ಹ್ಯಾಮ್ಲೆಟ್‌ನೂ ಪ್ರಾಣ ಬಿಡುವನು! ಇಲ್ಲಿಗೆ ದುರಂತ ನಾಟಕವು ಕೊನೆಗೊಳ್ಳುವದು.

ಈ ಕಥೆಯ ನಾಯಕನು ಹ್ಯಾಮ್ಲೆಟ್‌ನು. ಈ ನಾಟಕವನ್ನು ಓದುವಾಗ ನಮ್ಮ ಸಹಾನುಭೂತಿಯೆಲ್ಲವೂ ಅವನ ಕಡೆಗಿರುತ್ತದೆ. ಹ್ಯಾಮ್ಲೆಟ್‌ನು ಈಗ ತನ್ನ ಪ್ರತಿಜ್ಞೆಯನ್ನು ಪೂರೈಸುವನು ಎನ್ನುವಷ್ಟರಲ್ಲಿಯೇ ಅವನು ಅದನ್ನು ಮುಂದೆ ಹಾಕುತ್ತಾನೆ. ಅರಸನನ್ನು ಕೊಲ್ಲುವದು ಹ್ಯಾಮ್ಲೆಟ್‌ನಿಗೆ ಏಕೆ ಬೇಗನೆ ಸಾಧ್ಯವಾಗಲಿಲ್ಲ ಎಂಬುದನ್ನು ಹೇಳುವದು ಕಠಿಣವಾದದ್ದು. ಹ್ಯಾಮ್ಲೆಟ್‌ನು ಶರೀರ ಪ್ರಕೃತಿಯಿಂದ ಅಶಕ್ತನಾದವನಲ್ಲ. ಸಮಯ ಬಂದಾಗ ಸಾಹಸ ಕಾರ್ಯವನ್ನು ಮಾಡಬಲ್ಲನು. ಆದರೂ ಹ್ಯಾಮ್ಲೆಟ್‌ನು ತನ್ನ ಕಾರ್ಯವನ್ನು ಬೇಗನೆ ಯಾಕೆ ಮಾಡುವದಿಲ್ಲ ಎಂಬುದನ್ನು ಷೇಕ್ಸ ಪಿಯರನು ನಾಟಕೀಯವಾಗಿ ಚಿತ್ರಿಸಿದ್ದಾನೆ. ಹ್ಯಾಮ್ಲೆಟ್‌ನ ಪಾತ್ರವು ಜಗತ್ತಿನ ಸಾಹಿತ್ಯದಲ್ಲಿಯೇ ಒಂದು ಅಮರವಾದ ಪಾತ್ರವು.

ಇಂಗ್ಲಿಷ ಕವಿಯೊಬ್ಬನು 'Our sweetest songs are those that tell us of a saddest thought.' ಎಂದು ಹೇಳಿರುವನು ಷೇಕ್ಸಪಿಯರನ ಕಾವ್ಯಗಳಿಗೆ ಈ ಮಾತು ಸಂಪೂರ್ಣವಾಗಿ ಅನ್ವಯಿಸುತ್ತದೆ. ಷೇಕ್ಸಪೀಯರನ ದುಃಖಾಂತ ನಾಟಕಗಳಲ್ಲಿ ಜೀವನದ ನಿಜವಾದ ಪ್ರತಿಬಿಂಬವನ್ನು ಕಾಣಬಹುದು. ಅವನ ನಾಟಕಗಳನ್ನು ಓದುತ್ತ ನಾವು ಆನಂದಾಶ್ರುಗಳನ್ನು ಸುರಿಸುತ್ತೇವೆ. ಅವನ ನಾಟಕಗಳು ಶೋಕಪರ್ಯವಸಾಯಿಗಳಾದರೂ ಅವುಗಳನ್ನು ಓದುವದರಿಂದ ದುಃಖವಾಗುವದಿಲ್ಲ! ಇಲ್ಲಿಯೇ ಕವಿಯ ಪ್ರತಿಭೆಯು ಅಡಗಿರುವದು. ಹ್ಯಾಮ್ಲೆಟ್ ನಾಟಕವನ್ನು ಓದುವಾಗ ಎಲ್ಲ ಘಟನೆಗಳು ನಮ್ಮ ಕಣ್ಣಮುಂದೆಯೇ ನಡೆದಂತೆ ಭಾಸವಾಗುತ್ತದೆ. ಈ ನಾಟಕವನ್ನು ಎಷ್ಟುಸಾರೆ ನಾವು ಓದಿದರೂ ತೃಪ್ತಿಯಾಗುವದಿಲ್ಲ. ಎಷ್ಟು

ಸಾರೆ ಒದಿದರೂ ಓದಿದಂತೆ ನಮ್ಮ ಆನಂದವು ಹೆಚ್ಚುತ್ತ ಹೋಗುತ್ತದೆ. ಹ್ಯಾಮ್ಲೆಟ್‌ನ ವ್ಯಕ್ತಿತ್ವದ ಸುತ್ತಲೂ ಈ ನಾಟಕದ ಸನ್ನಿವೇಶಗಳು ಹೆಣೆಯಲ್ಪಟ್ಟಿವೆ. ಅವುಗಳನ್ನು ಕುರಿತು ಇಲ್ಲಿ ಬರೆಯಲು ಸ್ಥಳವಿಲ್ಲ. ಸನ್ನಿವೇಶ ರಚನೆ, ಪಾತ್ರಗಳು, ಭಾಷೆ, ಎಲ್ಲ ದೃಷ್ಟಿಯಿಂದಲೂ ಇದು ನನ್ನ ಮೆಚ್ಚಿಗೆಗೆ ಪಾತ್ರವಾಗಿದೆ.

## ೪೨. ನಾನು ಮಾಡಿದ ವನಭೋಜನ

ಶೀಗೀ ಹುಣ್ಣಿವೆಯೆಂದರೆ ರೈತರಿಗೆ ಬಹು ದೊಡ್ಡ ಹಬ್ಬ. ಅಂದು ರೈತರೆಲ್ಲರೂ ತಮ್ಮ ಆಪ್ತೇಷ್ಟರೊಂದಿಗೆ ಹೊಲಕ್ಕೆ ಹೋಗುವರು. ಸವಿ ಸವಿಯಾದ ಆಹಾರವನ್ನು ಮಾಡಿ ಊಟಮಾಡುವರು. ತಾವು ಶ್ರಮ ಪಟ್ಟುದು ಸಾರ್ಥಕವಾಯಿತೆಂಬುದನ್ನು ತೋರಿಸುವದಕ್ಕೆ ಬೆಳೆಗಳು ಸಂತೋಷದಿಂದ ನರ್ತನ ಮಾಡುವಂತೆ ತೋರುವದು. ತಾನು ಬಿತ್ತಿದ ಬೀಜವು ಸೊಕ್ಕಿನಿಂದ ತಲೆಯತ್ತಿ ನಿಂತಿರುವದನ್ನು ಕಂಡು ಯಾರಿಗೆ ಸಂತೋಷವಾಗಲಿಕ್ಕಿಲ್ಲ? ಅದೇ ದಿವಸವೇ ನಮ್ಮ ಶಾಲೆಯ ಹುಡುಗರೆಲ್ಲರೂ ವನಭೋಜನ ಮಾಡುವದಕ್ಕೆ ಹೋಗಬೇಕೆಂದು ನಿರ್ಣಯಿಸಿದೆವು.

ಮೋಟಾರುಗಳು ಬಂದಂದಿನಿಂದ ಕಾಲುನಡಿಗೆಯ ಪ್ರವಾಸವೇ ಇಲ್ಲ ದಂತಾಗಿದೆ. ನಮ್ಮ ಊರಿಂದ ಆರು ಮೈಲಿನಮೇಲೆ ಮಲಪ್ರಭಾನದಿಯು ಹರಿಯುತ್ತದೆ. ಆ ನದಿಗೆ ನಡೆಯುತ್ತಲೇ ನಾವು ಹೋಗಬೇಕೆಂದು ನಿರ್ಣಯಿಸಿದೆ. ಮೋಟಾರಿನಲ್ಲಿ ಕುಳಿತು ನದಿಗೆ ಹೋಗಬಹುದಾಗಿತ್ತು. ಆದರೆ ಸೃಷ್ಟಿಸೌಂದರ್ಯವನ್ನು ನೋಡುವ ಅವಕಾಶವು ಮಾತ್ರ ಸಿಗುತ್ತಿರಲಿಲ್ಲ. ಮುಂಜಾವಿನ ಸಮಯದಲ್ಲಿ ಮನೆಯಿಂದ ಹೊರಟೆವು. ಪಕ್ಷಿಗಳು ಕಿಲಿಬಿಲಿ ಸಪ್ಪಳ ಮಾಡುತ್ತಿದ್ದವು. ನಾವು ಅನೇಕ ವಿಷಯಗಳ ಬಗ್ಗೆ ಮಾತನಾಡುತ್ತ ಹೊರಟೆವು. ರಸ್ತೆಯ ಎರಡೂ ಬದಿಗೆ ಮಾವಿನ ಮರಗಳ ಸಾಲುಯಿತ್ತು. ಹಾದಿಯನ್ನು ಹೇಗೆ ಕ್ರಮಿಸಿದೆವು ಎಂಬುದೇ ನಮಗೆ ಗೊತ್ತಾಗಲಿಲ್ಲ. ಹೊತ್ತೇರುವದರಲ್ಲಿಯೇ ನಾವು ನದಿಯ ತೀರಕ್ಕೆ ಬಂದೆವು.

ನದಿಯನ್ನು ಕಂಡಕೂಡಲೇ ಬಹುದಿವಸಗಳಿಂದ ಈಸಬೇಕೆಂಬ ಬಯಕೆಯು ಈಗ ಬಂದದ್ದಕ್ಕಾಗಿ ನಮಗೆ ಬಹಳ ಆನಂದವಾಯಿತು. ಪ್ರವಾಹವು

ಈಸುವದಕ್ಕೆ ಬಹಳ ಅನುಕೂಲವಾಗಿತ್ತು. ಮನದಣಿಯಾಗಿ ಈಸಿದೆವು. ಮಾವಿನ ಮರದ ತೋಪಿನಲ್ಲಿ ನಮ್ಮ ಬೀಡಾರ ಬಿಟ್ಟೆವು. ಈಸುವದಾದ ಬಳಿಕ ಫಲಾಹಾರ ಮಾಡಿದೆವು.

ಮಾವಿನ ಗಿಡದ ಬುಡದಲ್ಲಿಯೇ ಅಡಿಗೆಯನ್ನು ಹೂಡಿದೆವು. ಕಟ್ಟಿಗೆಯು ಮಾತ್ರ ಒಣವಿರಲಿಲ್ಲ. ಎಷ್ಟು ಊದಿದರೂ ಉರಿಯಾಗಲೊಲ್ಲದಾಯಿತು. ನಮಗೆ ಮನೆಯಲ್ಲಿ ಒಲೆಯನ್ನು ಊದಿ ರೂಢಿ ಇದ್ದಿತು. ಆದರೆ ಕಟ್ಟಿಗೆಗಳು ಹಸಿಯುವಿದ್ದುದರಿಂದ ಎಷ್ಟು ಊದಿದರೂ ಉರಿಹಚ್ಚುವದು ತೊಂದರೆಯ ಕೆಲಸವಾಗಿತ್ತು. ನಮ್ಮ ವಾನರ ಸೈನ್ಯಕ್ಕೆ ಕಟ್ಟಿಗೆ ತರಲು ಆಜ್ಞೆ ಮಾಡಿದೆವು. ಗುಂಡನು ಇಂಥ ಕೆಲಸದಲ್ಲಿ ಬಹಳ ಜಾಣನಾದವನು. ಅವನು ಹೊಲದಲ್ಲಿಯ ಗುಡಿಸಲನ್ನು ಕೆಡವಿ ಒಣಕಟ್ಟಿಗೆಗಳನ್ನು ತಂದನು. ಅವನು ಕೆಲಸದಲ್ಲಿ ಭೀಮನಿದ್ದಂತೆ ಊಟದಲ್ಲಿಯೂ ಭೀಮನಂತಿದ್ದನು. ಮೊದಲು ಅವನಿಗೆ ಊಟಹಾಕುವದಾಗಿ ಹೇಳಿದ್ದರಿಂದ ಅವನು ಸಾಕಾಗುವಷ್ಟು ಒಣ ಕಟ್ಟಿಗೆಯನ್ನು ತಂದು ಕೊಟ್ಟನು. ಅವನಿಗೆ ಮೊದಲು ಊಟ ಹಾಕಿದರೆ ತಮಗೆ ಏನೂ ಉಳಿಯುವದಿಲ್ಲವೆಂದು ಉಳಿದವರು ವ್ಯಾಕುಲರಾದರು. ಉಳಿಯದಿದ್ದರೆ ಮತ್ತೆ ಅಡಿಗೆ ಮಾಡಿಕೊಡುವದಾಗಿ ಹೇಳಿದ್ದರಿಂದ ಅವರು ಸುಮ್ಮನಾದರು.

ನಾಲ್ಕು ಜನ ಗೆಳೆಯರು ಕೂಡಿರುವರು. ಅದರಲ್ಲಿಯೂ ವನದಲ್ಲಿ ಕುಳಿತು ಊಟ ಮಾಡುವದು. ಈಸಿದ್ದರಿಂದ ಸಾಕಷ್ಟು ಹಸಿವೆಯಾಗಿತ್ತು. ಊಟದ ರುಚಿಯನ್ನು ಕೇಳಬೇಕೆ? ಗುಂಡನು ನಮ್ಮೆಲ್ಲರೊಡನೆ ಜಿದ್ದುಕಟ್ಟಿ ನಮ್ಮನ್ನು ಊಟದಲ್ಲಿ ಸೋಲಿಸಿದನು.

ಊಟವಾದಮೇಲೆ ಮತ್ತೊಮ್ಮೆ ಈಸಬೇಕೆಂದು ನಮ್ಮ ಮನಸ್ಸಿನಲ್ಲಿತ್ತು. ಆದರೆ ಅದಕ್ಕೆ ನಮ್ಮ ಗುರುಗಳು ಅಪ್ಪಣೆ ಕೊಡಲಿಲ್ಲ. ಊಟವಾದ ಕೂಡಲೆ ಕಾವ್ಯಗಾಯನ ಕಾರ್ಯಕ್ರಮವನ್ನಿಟ್ಟುಕೊಂಡಿದ್ದೆವು. ಅನೇಕರು ಲಾವಣಿ ಹಾಡುಗಳನ್ನೂ, ಬೇಂದ್ರೆ, ಪುಟ್ಟಪ್ಪನವರ ಕವನಗಳನ್ನೂ ಹಾಡಿದರು.

ಸಂಜೆಯ ಮುಂದೆ ನಾವು ಅನೇಕ ಆಟಗಳನ್ನು ಆಡಿದೆವು. ಆಟದಲ್ಲಿ ಮಗ್ನರಾಗಿದ್ದ ನಮಗೆ ಹೊತ್ತು ಕಳೆದದ್ದು ಗೊತ್ತು ಆಗಲಿಲ್ಲ. ಒಂದು ದಿವಸವಾದರೂ ನಾವು ಜಗತ್ತನ್ನು ಮರೆತು ನಮ್ಮ ಆಟದಲ್ಲಿ ಮಗ್ನರಾಗಿದ್ದೆವು.

ಮನಸ್ಸಿಲ್ಲದಿದ್ದರೂ ವೇಳೆಯಾದ್ದರಿಂದ ಮನೆಗೆ ಬಂದೆವು. ಆ ಅನುಭವವನ್ನು ಮಾತ್ರ ಎಂದಿಗೂ ಮರೆಯುವದು ಸಾಧ್ಯವಿಲ್ಲ.

## ೪೩. ನಾನು ನೋಡಿದ ಪ್ರದರ್ಶನ

ಪ್ರದರ್ಶನಗಳಿಂದ ವ್ಯಾಪಾರವನ್ನು ಬೆಳೆಸುವದಕ್ಕೆ ಬಹಳ ಸಹಾಯವಾಗುತ್ತದೆ. ಪ್ರದರ್ಶನದಲ್ಲಿ ಅನೇಕ ಸಾಮಾನುಗಳು ಬಂದಿರುತ್ತವೆ. ಅವುಗಳನ್ನು ನೋಡಿ ಅವುಗಳಲ್ಲಿ ಯಾವ ಸಾಮಾನುಗಳು ಉತ್ತಮವಿರುವವು ಎಂಬುದನ್ನು ಜನರು ತಿಳಿದುಕೊಳ್ಳುವರು. ವ್ಯಾಪಾರಿಗಳಿಗೆ ಪ್ರದರ್ಶನದಂತಹ ಪ್ರಚಾರ ಸಾಧನವು ಬೇರೊಂದಿರುವದಿಲ್ಲ. ಪ್ರದರ್ಶನದಿಂದ ದೇಶದ ವ್ಯಾಪಾರವು ಅಭಿವೃದ್ಧಿ ಹೊಂದುವದರಿಂದ ಸರಕಾರದವರು ಇಂಥ ಪ್ರದರ್ಶನಗಳನ್ನು ಬಹಳವಾಗಿ ಪ್ರೋತ್ಸಾಹಿಸುವರು. ಪ್ರದರ್ಶನದಲ್ಲಿ ಬಂದಿರತಕ್ಕ ಅನೇಕ ಉತ್ತಮವಾದ ವಸ್ತುಗಳನ್ನು ನೋಡಿ ಕಲಾಕಾರರು ಸ್ಪರ್ಧೆಯಿಂದ ಅದರಂತೆಯೇ ತಾವೂ ಕಲಾ ನಿರ್ಮಿತಿಯನ್ನು ಮಾಡಬೇಕೆಂದು ಇಚ್ಛಿಸುವರು. ಪ್ರದರ್ಶನವೆಂದರೆ ಅದೊಂದು ವಸ್ತು ಸಂಗ್ರಹಾಲಯವಿದ್ದಂತೆ. ಎಲ್ಲ ತರದ ಜನರಿಗೂ ಅದು ಪ್ರಿಯವಾಗಿರುತ್ತದೆ. ನಾನು ಇಂಥದೊಂದು ಪ್ರದರ್ಶನವನ್ನು ಹೈದರಾಬಾದಿನಲ್ಲಿ ನೋಡಿದೆನು.

ಪ್ರದರ್ಶನ ನೋಡುವದಕ್ಕೆ ಜನರು ಗುಂಪು ಗುಂಪಾಗಿ ಸೇರಿದ್ದರು. ಎಲ್ಲಿ ನೋಡಿದರೂ ಸಮುದ್ರದಂತೆ ಜನರೇ ಕಾಣುತ್ತಿದ್ದರು. ನಾನು ಮೊದಲು ಚೀನ ಭವನವನ್ನು ನೋಡಲು ತೆರಳಿದೆನು. ಚೀನ ದೇಶವು ಬಹು ಪುರಾತನ ದೇಶವು. ನಮ್ಮ ಸಂಸ್ಕೃತಿಯಂತೆ ಅದರ ಸಂಸ್ಕೃತಿಯೂ ಪುರಾತನವಾದುದು. ಆದರೆ ಚೀನವು ಬಹು ದಿವಸಗಳ ವರೆಗೆ ಜಪಾನದ ಸಂಗಡ ಯುದ್ಧ ಮಾಡುವದರಲ್ಲಿ ತೊಡಗಿತ್ತು. ಅದರ ಸಾಂಪತ್ತಿಕ ಸ್ಥಿತಿಯು ತೀರ ಕೆಟ್ಟಿತ್ತು. ಆದರೆ ಇಂದು ಚೀನವು ಮತ್ತೆ ಸ್ವತಂತ್ರವಾಗಿದೆ. ತನ್ನ ಸಮಸ್ಯೆಗಳನ್ನು ಅತಿ ಧೈರ್ಯದಿಂದ ಅದು ಬಿಡಿಸುತ್ತಿರುವದು. ಅತಿ ಸ್ವಲ್ಪ ಕಾಲದಲ್ಲಿಯೇ ಚೀನವು ಜಾಗೃತವಾಗಿರುವದು. ಜನರ ಜೀವನ ಮಟ್ಟವನ್ನು ಏರಿಸಲು ಅನೇಕ ಉಪಾಯಗಳನ್ನು ಕೈಕೊಂಡಿರುವದು. ಇದರಿಂದ ನಮ್ಮ ಸರಕಾರವು ಅನೇಕ ಸಂಗತಿಗಳನ್ನು ಕಲಿತುಕೊಳ್ಳಬಹುದಾಗಿದೆ. ಚೀನಾ

ದೇಶದ ಸಮಸ್ಯೆಯೂ ನಮ್ಮ ದೇಶದ ಸಮಸ್ಯೆಯೂ ಬಹು ಮಟ್ಟಿಗೆ ಒಂದೇ ಆಗಿರುವವು. ನಮ್ಮಂತೆಯೇ ಚೀನದ ಜನಸಂಖ್ಯೆಯು ಅತಿ ಹೆಚ್ಚಾಗಿರುವದು. ಆಹಾರದ ಸಮಸ್ಯೆ, ನಿರುದ್ಯೋಗ ಸಮಸ್ಯೆ ಮುಂತಾದವುಗಳನ್ನು ಚೀನಾ ಸರಕಾರದವರು ಅತಿ ಸಮಾಧಾನಕರವಾಗಿ ಬಿಡಿಸಲು ಪ್ರಯತ್ನಿಸುತ್ತಿರುವರು. ಚೀನಾದ ಕಲೆಯೂ ಅತಿ ಶ್ರೇಷ್ಠವಾದದ್ದು. ಚೀನಾ ದೇಶದ ಚೀನೀಮಣ್ಣಿನ ಪಾತ್ರೆಗಳನ್ನು ನೋಡಿದರೆ ಅವರ ಕಲಾಕುಶಲತೆಯನ್ನು ಕಂಡುಕೊಳ್ಳ ಬಹುದಾಗಿದೆ. ಚೀನಾ ದೇಶದ ಸರಕಾರವು ಮಾಡಿದ ಪ್ರಗತಿಯ ಅನೇಕ ಚಿತ್ರಗಳನ್ನು ಇಲ್ಲಿ ಇಟ್ಟಿದ್ದರು. ಚೀನದ ಸಂಸ್ಕೃತಿ ಮತ್ತು ಚೀನೀಯರ ಜೀವನ ಕ್ರಮವನ್ನು ಅರಿತುಕೊಳ್ಳಬೇಕೆನ್ನುವವರು ಚೀನ ಭವನವನ್ನು ನೋಡಬೇಕು. ಎಷ್ಟು ಪುಸ್ತಕಗಳನ್ನು ಓದಿದರೂ ಬಾರದಷ್ಟು ಕಲ್ಪನೆಯು ಈ ಚೀನ ಭವನವನ್ನು ನೋಡುವದರಿಂದ ಆಗುತ್ತದೆ. ಚೀನಾ ದೇಶದ ಅನೇಕ ಮೂರ್ತಿಗಳನ್ನೂ, ಪಾತ್ರೆಗಳನ್ನೂ ಇಲ್ಲಿ ಇಟ್ಟಿದ್ದರು. ಈಡೀ ಪ್ರದರ್ಶನದಲ್ಲಿ ನನ್ನ ಮನಸ್ಸನ್ನು ಎಳೆದುಕೊಂಡ ಸಂಗತಿಯೆಂದರೆ ಚೀನ ಭವನ.

ಚೀನ ಭವನವನ್ನು ನೋಡಿಕೊಂಡು ಕಲಾ ಶಾಲೆಯನ್ನು ನೋಡಲಿಕ್ಕೆ ಹೋದೆನು. ಕಲಾ ಶಾಲೆಯಲ್ಲಿ ಮಹಾತ್ಮಾ ಗಾಂಧಿ, ಜವಾಹರಲಾಲ, ಸುಭಾಸಚಂದ್ರ ಭೋಸ, ಗೌತುಮಬುದ್ಧ ಮುಂತಾದವರ ಪ್ರತಿಮೆಗಳನ್ನು ಇಟ್ಟಿದ್ದರು. ಗಾಂಧೀಜಿಯವರ ಪ್ರತಿಮೆಯು ಬಹಳ ಸುಂದರವಾಗಿತ್ತು. ಗಾಂಧೀಜಿಯವರು ಜೀವಂತವಾಗಿ ಕುಳಿತಿರುವರೋ ಏನೋ ಎಂಬಂತೆ ಆ ಪ್ರತಿಮೆಯು ತೋರುತ್ತಿದ್ದಿತು. ಇದಲ್ಲದೆ ಹಿಮಾಲಯ ಪರ್ವತ, ಕಾಶ್ಮೀರದ ಕೊಳ್ಳ, ತಾಜಮಹಾಲ, ಗಂಗಾ ನದಿಯ ದಂಡೆಯ ಪ್ರದೇಶ ಮುಂತಾದವುಗಳ ಚಿತ್ರಗಳೂ ಅಲ್ಲಿದ್ದವು. ಎಷ್ಟು ನೋಡಿದರೂ ತೀರದಷ್ಟು ಚಿತ್ರಗಳು ಇಲ್ಲಿದ್ದವು. ಒಂದೊಂದು ಚಿತ್ರದಲ್ಲಿ ಒಂದೊಂದು ತರದ ವೈಭವವನ್ನು ಕಾಣಬಹುದಾಗಿತ್ತು.

ಅನೇಕ ಪ್ರಕಾರದ ಬೆಳೆಗಳನ್ನು ಒಂದುಕಡೆಗೆ ಬೆಳೆಸಿದ್ದರು. ಮೂಲಂಗಿ, ಬದನೇಕಾಯಿ ಇಷ್ಟು ದೊಡ್ಡವಿರಬಹುದೆಂದು ನಾನು ತಿಳಿದಿರಲಿಲ್ಲ. ಈ ಪ್ರದರ್ಶನದಲ್ಲಿ ಬೆಳೆಸಿದಂತೆ ಬೆಳೆಸಿದರೆ ನಮ್ಮ ಹಿಂದುಸ್ತಾನಕ್ಕೆ ಆಹಾರವು ಸಾಕಾಗಿ ನಾವು ಪರದೇಶಗಳಿಗೆ ಆಹಾರ ಧಾನ್ಯಗಳನ್ನು ಕಳಿಸಿ

ಕೊಡಬಹುದು! ಒಕ್ಕಲಿಗರು ಅವಶ್ಯವಾಗಿ ಇದನ್ನು ನೋಡಬೇಕು. ಅನೇಕ ಪ್ರಕಾರದ ಕಾಯಿಪಲ್ಲೆಗಳನ್ನು ಸ್ವಲ್ಪಸ್ಥಳದಲ್ಲಿಯೇ ಬೆಳಿಸಿದ್ದರು.

ಮತ್ತೊಂದು ಕಡೆಗೆ ಆಧುನಿಕವಾದ ಎಲ್ಲ ತರದ ಯಂತ್ರಸಾಮಗ್ರಿಗಳನ್ನಿಟ್ಟಿದ್ದರು. ಅಡಿಗೆ ಮಾಡುವ, ನೀರುಕಾಸುವ, ಅನೇಕ ಪ್ರಕಾರದ ಪಾತ್ರೆಗಳೂ ಅಲ್ಲಿದ್ದವು. ಜನರು ಇವುಗಳನ್ನು ಕೊಂಡು ಕೊಳ್ಳುವದಕ್ಕಾಗಿ ಗುಂಪು ಗುಂಪಾಗಿ ನೆರೆದಿದ್ದರು ಮತ್ತೊಂದುಕಡೆಗೆ ಹುಡುಗರ ಆಟಿಗೆಯ ಸಾಮಾನುಗಳು! ಮನುಷ್ಯನ ಬುದ್ಧಿಶಕ್ತಿಯು ಬಹು ವಿಲಕ್ಷಣವಾದದ್ದು! ದಿನಾಲು ಹೊಸ ತರದ ಆಟಿಗೆಗಳನ್ನು ಸಿದ್ಧಮಾಡುತ್ತಲೇ ಇರುತ್ತಾರೆ. ಅವುಗಳಿಗೆ ಅಂತ್ಯವೇ ಇಲ್ಲ!!

ಅಲ್ಲಿಂದ ಜೇನು ಸಾಕುವ ವ್ಯವಸಾಯವನ್ನು ನೋಡಲು ಹೋದೆನು. ಹುಳಗಳನ್ನು ಯಾವ ರೀತಿಯಿಂದ ಸಾಕಬೇಕು ಎಂಬುದನ್ನು ಅವರು ಹೇಳಿ ಕೊಡುತ್ತಿದ್ದರು. ರೇಶಿಮೆ ಮಾಡುವದು, ಬಳೆಗಳನ್ನು ತಯಾರಿಸುವದು, ಚಾಪೆ ಹೆಣೆಯುವದು, ಬಟ್ಟೆಗಳನ್ನು ನೇಯುವದು ಮುಂತಾದ ಅನೇಕ ಉದ್ಯೋಗಗಳನ್ನು ಇಲ್ಲಿ ನೋಡಬಹುದಾಗಿತ್ತು.

ಮನೆಗಳ ಸಮಸ್ಯೆಯೂ ಹಿಂದುಸ್ತಾನದಲ್ಲಿ ಅತಿ ಮಹತ್ವದ್ದಾಗಿದೆ. ಅತಿ ಕಡಿಮೆ ಖರ್ಚಿನಲ್ಲಿ ಮನೆಯನ್ನು ಹೇಗೆ ಕಟ್ಟಬೇಕು. ಎಂಬದೊಂದು ದೊಡ್ಡ ಪ್ರಶ್ನೆಯಾಗಿದೆ. ಇಲ್ಲಿ ಮಾದರಿಯ ಮನೆಗಳನ್ನು ತಯಾರಿಸಿದ್ದರು. ಮನೆಗಳು ಸಣ್ಣವಾಗಿದ್ದರೂ ಬಹಳ ಸುಂದರವಾಗಿದ್ದವು.

ಒಂದು ಕಡೆಗೆ ಚಿಕ್ಕ ಬಾಲಕರು ಕಟ್ಟಿಗೆಯ ಹುಲಿ, ಆನೆ, ಸಿಂಹ ಮುಂತಾದವುಗಳ ಮೇಲೆ ಕುಳಿತುಕೊಂಡು ತೂಗಾಡುತ್ತಿದ್ದರು. ಅದನ್ನು ನೋಡಿ ನನಗೂ ಅವುಗಳ ಮೇಲೆ ಕುಳಿತುಕೊಳ್ಳಬೇಕೆಂಬ ಇಚ್ಛೆಯಾಯಿತು. ನಾನು ಆನೆಯ ಮೇಲೆ ಕುಳಿತುಕೊಂಡು ಎರಡು ಸುತ್ತು ತೂಗಾಡಿದೆನು. ಅದರ ಮೇಲೆ ಕುಳಿತು ತಿರುಗುವಾಗ ನಾನು ಚಿಕ್ಕವನಿದ್ದಾಗ ಜೋಕಾಲಿ ಆಡಿದ ನೆನಪಾಯಿತು.

ಅಲ್ಲಿಂದ ಪುಸ್ತಕ ಪ್ರದರ್ಶನದ ಕಡೆಗೆ ತೆರಳಿದೆನು. ಒಂದು ವಿಷಯದ ಮೇಲೆ ಎಷ್ಟು ಗ್ರಂಥಗಳು; ಅನೇಕ ಭಾಷೆಯಲ್ಲಿಯ ಎಷ್ಟೋ ಪುಸ್ತಕಗಳನ್ನು ಇಲ್ಲಿ ಇಟ್ಟಿದ್ದರು. ಪುಸ್ತಕ ಪ್ರದರ್ಶನದ ಮುಂದೆ ಹೋಗಿ ನಿಂತುಕೊಂಡರೆ

ಸಾಕು, ನಾವು ಯಾವದಾದರೊಂದು ಪುಸ್ತಕವನ್ನು ತೆಗೆದುಕೊಳ್ಳದೆ ತಿರುಗಿ ಬರುವದಿಲ್ಲ. ಜನರ ಜ್ಞಾನಾಭಿವೃದ್ಧಿಯನ್ನು ಮಾಡುವದಕ್ಕೆ ಇದರಿಂದ ಬಹಳ ಸಹಾಯವಾಗುತ್ತದೆ.

ಎಷ್ಟು ನೋಡಿದರೂ ಪ್ರದರ್ಶನದಲ್ಲಿ ನೋಡತಕ್ಕಂಥದು ಇನ್ನೂ ಇದ್ದೇ ಇರುತ್ತದೆ. ನಾನಾ ರುಚಿಗಳ ಜನರಿಗೂ ಪ್ರದರ್ಶನವು ಪ್ರಯೋಜನ ಕಾರಿಯು. ನಾಟಕದಂತೆ ಎಲ್ಲ ರಸಗಳನ್ನೂ ಇಲ್ಲಿ ಕಾಣಬಹುದು. ವ್ಯಾಪಾರಸ್ಥರಿಗೂ, ಒಕ್ಕಲಿಗರಿಗೂ, ಕೊಂಡುಕೊಳ್ಳುವವರಿಗೂ ಪ್ರಯೋಜನಕಾರಿಯಾದದ್ದು ಪ್ರದರ್ಶನ. ಆದ್ದರಿಂದಲೇ ಸರಕಾರದವರು ವರ್ಷ ವರ್ಷ ಔದ್ಯೋಗಿಕ ಪ್ರದರ್ಶನವನ್ನು ನೆರವೇರಿಸುವರು.

## ೪೪. ಜನಜೀವನ ಮತ್ತು ಸಾಹಿತ್ಯ

ಸಾಹಿತಿಯಾದವನು ತನ್ನ ಜೀವನವನ್ನೇ ಸಾಹಿತ್ಯದಲ್ಲಿ ಪ್ರತಿಬಿಂಬಿಸುತ್ತಾನೆ. "ಸಾಹಿತ್ಯವು ಬಾಳಬಟ್ಟೆಯ ಪರಮಾಗಮ" ಎಂದು ಕವಿಯೊಬ್ಬನು ನುಡಿದಿರುವನು. ತನ್ನ ಅನುಭವವನ್ನೇ ಕವಿಯು ತನ್ನ ಕಾವ್ಯದಲ್ಲಿ ವರ್ಣಿಸುವನು. ಕವಿಗಳಿಗೂ ಉಳಿದವರಿಗೂ ಇರುವ ಅಂತರವೆಂದರೆ ಕವಿಯುತನಗಾದ ಅನುಭವವನ್ನು ಕಾವ್ಯದಲ್ಲಿ ಬರೆಯಬಲ್ಲನು. ಉಳಿದವರು ತಮಗಾದಆನಂದ ವನ್ನು ಕಾವ್ಯರೂಪದಲ್ಲಿ ಬರೆಯಲಾರರು. ಸಾಮಾನ್ಯರ ಅನುಭವವು ಪ್ರಕಟವಾಗದೆ ಹಾಗೆಯೇ ಉಳಿಯುವದು. ಕವಿಯ ಅನುಭವವು ಕಾವ್ಯದಲ್ಲಿ ಪ್ರಕಟವಾಗಿ ಅಮರವಾಗುವದು.

ಸಾಹಿತಿಯು ಸಮಾಜದಲ್ಲಿ ವಾಸಿಸುವನು. ವ್ಯಕ್ತಿಯ ವಿಕಾಸಕ್ಕೆ ಸಮಾಜವು ಸಹಾಯ ಮಾಡುವದು. ವ್ಯಕ್ತಿಯು ಸಮಾಜದ ಕಲ್ಯಾಣಕ್ಕಾಗಿ ಹೆಣಗುವನು. ಈ ರೀತಿಯಿಂದ ವ್ಯಕ್ತಿ ಮತ್ತು ಸಮಾಜ ಇವುಗಳಲ್ಲಿ ತೀರ ನಿಕಟವಾದ ಸಂಬಂಧವಿರುವದು. ಕವಿಯಾದವನು ಕಾವ್ಯ ಬರೆಯುವದು ಸಮಾಜಕ್ಕಾಗಿ. ಕೇವಲ ತನ್ನ ಆನಂದಕ್ಕಾಗಿ ಯಾವ ಕವಿಯೂ ಕಾವ್ಯವನ್ನು ಬರೆಯಲಾರನು. ಕವಿಯೆಂದರೆ ಕೇವಲ ಪದ್ಯಗಳನ್ನು ಬರೆಯುವವನು ಎಂದು ಅರ್ಥ ಮಾಡಬಾರದು, ಲಲಿತಸಾಹಿತ್ಯವನ್ನು ಬರೆಯುವವರೆಲ್ಲರೂ ಕವಿಗಳೇ. ಕೇವಲ ಗದ್ಯರೂಪದಲ್ಲಿ ಬರೆದರೆ ಅವನು ಕವಿಯಲ್ಲವೆಂದಲ್ಲ. ಕಾವ್ಯದ ಅಂಶ

ಗಳು ಗದ್ಯದಲ್ಲಿ ಕಂಡು ಬಂದರೆ ಗದ್ಯಕಾರನೂ ಕವಿಯಾಗುವನು. ಕನ್ನಡ ದಲ್ಲಿ ವಚನಕಾರರು ಗದ್ಯದಲ್ಲಿ ತಮ್ಮ ಜೀವನವನ್ನೇ ಪ್ರತಿಬಿಂಬಿಸಿರುವರು. ತಮ್ಮ ಭಾವನೆಗಳನ್ನು ಬಹಳ ಹೃದಯಂಗಮವಾಗಿ ವರ್ಣಿಸಿರುವರು. ಆದ್ದ ರಿಂದ ಅವರನ್ನು ನಾವು ಕವಿಗಳೆಂದೇ ಭಾವಿಸಬೇಕು. ಅವರ ಉದ್ದೇಶವು ಮಾತ್ರ ಕವಿಯಾಗಬೇಕೆಂದು ಇರಲಿಲ್ಲ. ಅವರು ಯಾವ ರೀತಿಯಿಂದಲೂ ಕೀರ್ತಿಗಾಗಿ ಆಶೆಪಟ್ಟವರಲ್ಲ. ಸಮಾಜೋದ್ಧಾರವೇ ಅವರ ಕಾರ್ಯವಾಗಿತ್ತು. ಸಹಜವಾಗಿ ಪರಿಣಾಮಕಾರಿಯಾಗಿ ಹೇಳುವ ರೀತಿಯನ್ನು ಅವರ ಗದ್ಯದಲ್ಲಿ ಕಾಣಬಹುದು. ಆಡಂಬರಕ್ಕೆ ಅವರು ಮಹತ್ವಕೊಡಲಿಲ್ಲ. ಅಲಂಕಾರಿಕ ಭಾಷೆಯಲ್ಲಿ ಬರೆಯಲಿಲ್ಲ. ತಮ್ಮ ವಿಚಾರಗಳನ್ನು ಎರಡನೆಯವರಿಗೆ ತಿಳಿ ಸುವದೇ ಅವರ ಮುಖ್ಯ ಗುರಿಯಾಗಿತ್ತು. ಆದ್ದರಿಂದಲೇ ಅವರು ತಿಳಿಯಾದ ಭಾಷೆಯಲ್ಲಿ ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿದರು. ತಿಳಿಯಾದ ಭಾಷೆ, ಭಾವೋದ್ರೇಕ, ವ್ಯಕ್ತಿತ್ವ ಇವುಗಳಿಂದ ವಚನ ಸಾಹಿತ್ಯವು ಕನ್ನಡದಲ್ಲಿ ಅಮರವಾಗಿದೆ.

ನಮ್ಮ ಪ್ರಾಚೀನ ಕನ್ನಡ ಕವಿಗಳು ರಾಜರನ್ನು ಆಶ್ರಯಿಸಿದ್ದರು. ಆದ್ದರಿಂದ ಸ್ವಾಭಾವಿಕವಾಗಿಯೇ ಅರಸರ ಸ್ತುತಿಯನ್ನು ಮಾಡುವದು ಅನಿ ವಾರ್ಯವಾಗಿತ್ತು. ಪಂಪ, ರನ್ನರು ತಮ್ಮ ಕಥಾನಾಯಕನನ್ನು ತಮ್ಮ ಆಶ್ರಯದಾತನಿಗೆ ಹೋಲಿಸಿ ಕಾವ್ಯ ರಚನೆ ಮಾಡಿರುವರು. ಪಂಪನು ಸಂಹಿತಿ ಯಾಗಿದ್ದಂತೆ ಕವಿಯೂ ಆಗಿದ್ದಂತೆ ತೋರುತ್ತದೆ. ಆದ್ದರಿಂದಲೇ ಅವನ ಕಾವ್ಯದಲ್ಲಿ ವೀರರಸವು ಪ್ರಧಾನವಾಗಿರುವದು. ಪಂಪ, ರನ್ನರು ಮಹಾಭಾರತ ವನ್ನು ತಮ್ಮ ಕಾವ್ಯದ ವಿಷಯವನ್ನಾಗಿ ಆರಿಸಿಕೊಂಡಿದ್ದರಿಂದ, ಅವರ ಕಾಲದ ಸಾಮಾಜಿಕ ಜೀವನವನ್ನು ಅದರಲ್ಲಿ ವರ್ಣಿಸುವದು ಅವರಿಗೆ ಸಾಧ್ಯ ವಾಗದೆ ಹೋಯಿತು. ಇದರಿಂದ ಅವರ ಕಾವ್ಯದಲ್ಲಿ ಆಗಿನ ಕಾಲದ ಸಾಮಾ ಜಿಕ ಜೀವನದ ಪ್ರತಿಬಿಂಬವಿಲ್ಲವೆಂದು ಅರ್ಥ ಮಾಡಬಾರದು. ಆದರೆ ಆಗಿನ ಕಾಲದ ಸಾಮಾಜಿಕ ಜೀವನದ ಪ್ರತಿಬಿಂಬವನ್ನು ಪೂರ್ಣವಾಗಿ ವರ್ಣಿಸುವ ಅವಕಾಶವೇ ಅವರಿಗೆ ಇಲ್ಲದಾಯಿತು. ಪೌರಾಣಿಕ ಕಾವ್ಯಗಳನ್ನು ಬರೆಯು ಹೊರಟಾಗ ಸಾಮಾಜಿಕ ಅಂಶಗಳನ್ನು ಅದರಲ್ಲಿ ವರ್ಣಿಸುವದು ಅವರಿಗೆ ಸಾಧ್ಯವಾಗಿಲ್ಲ. ಪಂಪನು ತನ್ನ ಭಾರತದ ಬಗ್ಗೆ ಬರೆಯುವಾಗ ಕಾವ್ಯಗುಣ

ವನ್ನೂ ಧರ್ಮವನ್ನೂ ತನ್ನ ಕಾವ್ಯದಲ್ಲಿ ಕಾಣಬಹುದೆಂದು ಹೇಳಿರುವನು. ಇದರಿಂದ ಆಗಿನ ಕಾಲದಲ್ಲಿ ಧರ್ಮದ ಪ್ರಭಾವವು ಜನರ ಮೇಲೆ ಎಷ್ಟಿತ್ತೆಂಬುದು ವ್ಯಕ್ತವಾಗುವದು. ಜೈನ ಕವಿಗಳೆಲ್ಲರೂ ಒಂದು ಧಾರ್ಮಿಕಕಾವ್ಯ ಒಂದು ತಾರೆಕಕಾವ್ಯವನ್ನು ಬರೆದಿರುವರು. ತಾರೆಕಕಾವ್ಯದಲ್ಲಿಯೂ ಧರ್ಮಬೋಧೆಯು ಆನುಷಂಗಿಕವಾಗಿ ಬಂದೇ ಬರುವದು.

ಲಕ್ಷ್ಮೀಶ, ಕುಮಾರವ್ಯಾಸರ ಉದಾಹರಣೆಗಳನ್ನು ತೆಗೆದುಕೊಂಡರೆ ಇದೇ ಸಂಗತಿಯು ತಿಳಿಯುವದು. ಲಕ್ಷ್ಮೀಶನು ಸಂಸ್ಕೃತದಲ್ಲಿಯ ಜೈಮಿನಿ ಭಾರತವನ್ನು ಕನ್ನಡದಲ್ಲಿ ಭಾಷಾಂತರಿಸಿರುವನು. ಆದ್ದರಿಂದ ತನ್ನ ಕಾಲದ ಸಾಮಾಜಿಕ ಜೀವನವನ್ನುಅದರಲ್ಲಿ ವರ್ಣಿಸುವದಕ್ಕೆ ಅವನಿಗೆ ಸ್ವಾತಂತ್ರ್ಯವೇ ಇರುವದಿಲ್ಲ. ಕುಮಾರವ್ಯಾಸ ಕೃಷ್ಣಭಕ್ತನು, ಭಕ್ತಿಯುಗದಲ್ಲಿ ಅವನು ಇದ್ದನು. ಇದರಿಂದ ಅವನ ಕಾವ್ಯದಲ್ಲಿ ಭಕ್ತಿರಸದ ಪರಿಪೂರ್ಣತೆಯನ್ನು ಕಾಣಬಹುದು. ಕುಮಾರವ್ಯಾಸನು ಸಂದರ್ಭಕ್ಕೆ ತಕ್ಕಂತೆ ಎಲ್ಲ ರಸಗಳನ್ನೂ ಬಳಿಸಿಕೊಂಡಿರುವನು. ಆದರೂ ಭಕ್ತಿರಸವೇ ಅವನ ಕಾವ್ಯದಲ್ಲಿ ಪ್ರಧಾನವಾಗಿರುವದು.

ಕನ್ನಡ ಸಾಹಿತ್ಯದಲ್ಲಿ ಧರ್ಮವೇ ಕಾವ್ಯದ ಮುಖ್ಯ ವಸ್ತುವಾಗಿದೆ. ರಾಘವಾಂಕ ಕವಿಯು 'ಹರಿಶ್ಚಂದ್ರ' ಕಾವ್ಯವನ್ನು ಬರೆದು ಹರಿಹರನಿಗೆ ತೋರಿಸಿದನಂತೆ. ಅರಸರನ್ನಾಗಲಿ, ಸಾಮಾನ್ಯ ಮನುಷ್ಯರನ್ನಾಗಲಿ ಸ್ತುತಿಸಬಾರದೆಂದು ಹರಿಹರನು ಪ್ರತಿಜ್ಞೆ ಮಾಡಿದ್ದನು. ರಾಘವಾಂಕನು ಅರಸನನ್ನು ತನ್ನ ಕಾವ್ಯದಲ್ಲಿ ವರ್ಣಿಸಿದ್ದರಿಂದ ಅವನಿಗೆ ಕೋಪ ಬಂದಿತು. ಕೋಪದಿಂದ ಅವನು ರಾಘವಾಂಕನನ್ನು ಹೊಡೆಯಲು ರಾಘವಾಂಕನ ಹಲ್ಲುಗಳು ಮುರಿದವಂತೆ! ಆಗ ರಾಘವಾಂಕನು ಹರಿಹರನ ಹೇಳಿಕೆಯಂತೆ ಶಿವಭಕ್ತನನ್ನು ಕುರಿತು ಕಾವ್ಯ ಬರೆದ ಬಳಿಕ ಅವನ ಹಲ್ಲುಗಳು ತಿರುಗಿಬಂದವೆಂದು ಪ್ರತೀತಿ ಇದೆ. ಇದು ಎಷ್ಟರಮಟ್ಟಿಗೆ ನಿಜವಾದದ್ದೆಂದು ಹೇಳುವದು ಸಾಧ್ಯವಿಲ್ಲ. ಇದರ ಮೇಲಿಂದ ಒಂದು ಅಂಶವು ಮಾತ್ರ ಗೊತ್ತಾಗುತ್ತದೆ. ಈ ಸಂಪ್ರದಾಯವನ್ನೇ ಷಡಕ್ಷರಿ ಮೊದಲಾದವರು ಅನುಸರಿಸಿದ್ದಾರೆ. ಆದ್ದರಿಂದಲೇ ಹರಿಹರ, ರಾಘವಾಂಕ, ಷಡಕ್ಷರಿ ಮುಂತಾದ ವೀರಶೈವ ಕವಿಗಳು ತಮ್ಮ ಕಾವ್ಯದಲ್ಲಿ ಶಿವನ ಅಥವಾ ಶಿವಭಕ್ತರ ಸ್ತುತಿಗಳನ್ನು ಮಾಡಿರುವರು.

ಆಗಿನ ಕಾಲದ ಸಾಮಾಜಿಕ ಜೀವನವನ್ನು ಚಿತ್ರಿಸುವದು ಅವರ ಗುರಿಯಾಗಿರಲಿಲ್ಲ. ಆದರೂ ಅವರ ಕಾಲದಲ್ಲಿಯ ಸಾಮಾಜಿಕ ರೀತಿ ನೀತಿಗಳನ್ನು ಅವರ ಕಾವ್ಯದಲ್ಲಿ ಗುರುತಿಸಬಹುದಾಗಿದೆ.

ಕನ್ನಡಸಾಹಿತ್ಯಕ್ಕೆ ಧರ್ಮವೇ ತಳಹದಿಯಾಗಿರುವದು. ಪ್ರತಿಯೊಂದು ಕಾವ್ಯದಲ್ಲಿಯೂ ಭಕ್ತರ, ಪರಮಾತ್ಮನ ವರ್ಣನೆಯು ಬಂದೇ ಬರುತ್ತದೆ. ಈ ಮಾತು ಸಂಸ್ಕೃತ ಸಾಹಿತ್ಯಕ್ಕೂ ಬಹುಮಟ್ಟಿಗೆ ಅನ್ವಯಿಸುವದು. ಸಂಸ್ಕೃತ ಸಾಹಿತ್ಯದಲ್ಲಿ ಧರ್ಮಗ್ರಂಥಗಳಿಂದಲೇ ಸಾಹಿತ್ಯವು ಆರಂಭವಾಗಿರುವದು. ವೇದ, ಉಪನಿಷತ್ತು, ರಾಮಾಯಣ ಮತ್ತು ಮಹಾಭಾರತ ಇವೆಲ್ಲವೂ ಭಾರತೀಯರ ಧಾರ್ಮಿಕ ಗ್ರಂಥಗಳಾಗಿವೆ. ಭಾರತೀಯರ ಜೀವನದ ಮೇಲೆ ಧರ್ಮದ ಪ್ರಭಾವವು ಬಹಳವಾಗಿರುವದರಿಂದ ನಮ್ಮಲ್ಲಿ ಧಾರ್ಮಿಕ ಗ್ರಂಥಗಳೇ ಬಹಳವಾಗಿರುವವು. ಸಂಸ್ಕೃತ ಭಾಷೆಯಲ್ಲಿ ಧಾರ್ಮಿಕಸಾಹಿತ್ಯದೊಂದಿಗೆ ಸಾಮಾಜಿಕ ಜೀವನವನ್ನು ಚಿತ್ರಿಸುವ ಕಾವ್ಯಗಳೂ ಬರೆಯಲ್ಪಟ್ಟವು. ಆದರೆ ಕನ್ನಡದಲ್ಲಿ ಅಂಥ ಗ್ರಂಥಗಳು ತೀರ ಕಡಿಮೆಯಾಗಿರುವವು. ಕಾಳಿದಾಸನ "ಶಾಕುಂತಲ""ಮೇಘದೂತ" "ವಿಕ್ರಮೋರ್ವಶೀಯ", ಭಾಸನ "ಸ್ವಪ್ನವಾಸವದತ್ತ", ಶೂದ್ರಕ ಕವಿಯ "ಮೃಚ್ಛಕಟಿಕ" ಮುಂತಾದ ಗ್ರಂಥಗಳಲ್ಲಿ ಧಾರ್ಮಿಕ ಅಂಶಗಳಿಗಿಂತ ಸಾಮಾಜಿಕ ಜೀವನವೇ ಹೆಚ್ಚಾಗಿ ಚಿತ್ರಿಸಲ್ಪಟ್ಟಿರುವದು. ಯಾವ ಕಾಲದಲ್ಲಿರುವನೋ ಆ ಕಾಲದ ಸಾಮಾಜಿಕ ರೀತಿನೀತಿಗಳ ಪರಿಣಾಮವು ಕವಿಯ ಮೇಲಾಗುವದರಿಂದ ಅವನು ತನ್ನ ಕಾವ್ಯದಲ್ಲಿ ಅದರ ವರ್ಣನೆಯನ್ನು ಮಾಡಿಯೇ ಮಾಡುವನು.

ಷೇಕ್ಸಪಿಯರನ ಕಾಲದಲ್ಲಿ ಜನರು ಭೂತಗಳ ಅಸ್ತಿತ್ವದಲ್ಲಿ ವಿಶ್ವಾಸವಿಟ್ಟಿದ್ದರು. ಆದ್ದರಿಂದ ಅವನು ತನ್ನ ನಾಟಕಗಳಲ್ಲಿ ಭೂತಗಳನ್ನು ಉಪಯೋಗಿಸಿಕೊಂಡಿರುವನು. ಹ್ಯಾಮ್ಲೆಟ್ ನಾಟಕದಲ್ಲಿ ಭೂತದ ಪಾತ್ರವು ಪ್ರಧಾನವಾಗಿರುವದು. ಇಪ್ಪತ್ತನೇ ಶತಮಾನದಲ್ಲಿ ಅವನು ಜೀವಿಸಿದ್ದರೆ ಅವನು ಭೂತಗಳ ಉಪಯೋಗವನ್ನು ತನ್ನ ನಾಟಕದಲ್ಲಿ ಮಾಡುತ್ತಿದ್ದನೋ ಇಲ್ಲವೋ! ಜನರ ಆಗಿನ ಕಾಲದ ಆಚಾರ ವಿಚಾರ, ರೀತಿ ನೀತಿಗಳನ್ನು ಷೇಕ್ಸಪಿಯರನ ನಾಟಕಗಳಿಂದ ಕಂಡುಕೊಳ್ಳಬಹುದು. ಷೇಕ್ಸಪಿಯರನನಾಟಕಗಳು ಸಾಮಾಜಿಕ ನಾಟಕಗಳಾಗಿರುವದರಿಂದ ಆಗಿನ ಕಾಲದ ಜೀವನವು

ಅವನ ನಾಟಕಗಳಲ್ಲಿ ಚನ್ನಾಗಿ ಪ್ರತಿಬಿಂಬಿತವಾಗಿರುವವು. ಈ ನಾಟಕಗಳಲ್ಲಿ ಜನ ಜೀವನವನ್ನು ಚಿತ್ರಿಸಲು ಅವನಿಗೆ ಸುಸಂಧಿಯು ದೊರೆಯಿತು. ಅದರ ಉಪಯೋಗವನ್ನು ಅವನು ಮಾಡಿಕೊಂಡಿರುವನು.

ಈಗಿನ ಕಾಲದಲ್ಲಿ ಗೀತಗಳು ಪ್ರಚಾರದಲ್ಲಿ ಬಂದಿರುವವು. ಈ ಗೀತಗಳಲ್ಲಿ ತನ್ನ ಅನುಭವವನ್ನು ವರ್ಣಿಸುವನು. ಇದರಿಂದ ಸಾಮಾಜಿಕ ಜೀವನದ ವರ್ಣನೆಯನ್ನು ಆಧುನಿಕ ಗೀತಗಳಲ್ಲಿ ಹೆಚ್ಚಾಗಿ ಕಾಣಬಹುದು. ಬಂಗಾಲದ ಬರಗಾಲ, ಆಧುನಿಕ ಮಹಾಯುದ್ಧದ ಭೀಕರತೆ, ಭಾರತದ ಪರಿಸ್ಥಿತಿ, ಕೂಲಿಕಾರರ ಜೀವನ ಮುಂತಾದ ಅನೇಕ ವಿಷಯಗಳನ್ನು ಕುರಿತು ಆಧುನಿಕ ಕವಿಗಳು ಕಾವ್ಯ ರಚನೆಯನ್ನು ಮಾಡಿರುವರು. ನಮ್ಮ ಸಾಮಾಜಿಕ ಸಮಸ್ಯೆಗಳ ಬಗ್ಗೆ ಕಾದಂಬರಿಕಾರರು ಮತ್ತು ನಾಟಕಕಾರರು ಸಾಹಿತ್ಯವನ್ನು ನಿರ್ಮಿಸಿದ್ದಾರೆ. ಕವಿಗಳಿಗೆ ವಿಷಯವು ಪ್ರಧಾನವಲ್ಲ. ಹೇಳುವ ರೀತಿಯು ಮುಖ್ಯವಾದುದು.

ಆಧುನಿಕ ನಾಟಕಕಾರರಲ್ಲಿ ಅಗ್ರಗಣ್ಯನಾದ ಬರ್ನಾರ್ಡಷಾ ಲೋಕೋದ್ಧಾರಕ್ಕಾಗಿಯೇ ತಾನು ಲೆಕ್ಕಣಿಕೆಯನ್ನು ಹಿಡಿದಿರುವದಾಗಿ ಹೇಳಿರುವನು. ಇಂಗ್ಲಿಷ ಸಮಾಜದಲ್ಲಿಯ ಕುಂದು ಕೊರತೆಗಳನ್ನು ಅವನು ಬಹಳ ಹಾಸ್ಯಮಯವಾಗಿ ಚಿತ್ರಿಸಿರುವನು. ಸಮಾಜವು ತನ್ನ ಪ್ರತಿಬಿಂಬವನ್ನು ಅವನ ನಾಟಕದಲ್ಲಿ ಕಾಣಬಹುದು. ಮಹಾ ಕ್ರಾಂತಿಯಿಂದ ಆಗದ ಕೆಲಸವನ್ನು ಸಾಹಿತಿಗಳು ಲೆಕ್ಕಣಿಕೆಯಿಂದ ಮಾಡಿರುವರು. ಸಮಾಜ ವಾದವನ್ನು ಪ್ರಸಾರ ಮಾಡುವದಕ್ಕೆ ಬರ್ನಾರ್ಡಷಾ, ಎಚ್. ಜಿ. ವೇಲ್ಸ ಮುಂತಾದ ಲೇಖಕರಿಂದ ಬಹಳ ಸಹಾಯವಾಗಿರುವದು. ಕೇವಲ ಆನಂದವೇ ಸಾಹಿತ್ಯದ ಗುರಿಯಾಗಲಾರದು. ಆನಂದದ ಜೊತೆಗೆ ಸಮಾಜೋದ್ಧಾರವೂ ಸಾಹಿತಿಯ ಗುರಿಯಾಗಿದೆ. ಸಾಹಿತಿಯು ನೇರವಾಗಿ ಉಪದೇಶ ಮಾಡದೆ ಅಪರೋಕ್ಷವಾಗಿ ಮಾಡುವನು. ಅವನ ಉಪದೇಶವು ತಾಯಿಯ, ಹೆಂಡತಿಯ ಮಾತಿನಂತಿರುವದು ಆದ್ದರಿಂದ ಸಾಹಿತಿಯು ಕೇವಲ ಕಲ್ಪನಾ ರಾಜ್ಯದಿಂದಲೇ ಅಮರ ಸಾಹಿತ್ಯವನ್ನು ನಿರ್ಮಿಸಲಾರನು. ಆಕಾಶದಲ್ಲಿ ಹಾರಾಡುವ ಕೇವಲ ಕಲ್ಪನೆಯಿಂದ ಈ ಲೋಕಕ್ಕೆ ಯಾವ ಪ್ರಯೋಜನವೂ ಇಲ್ಲ. ಅವನ ಸಾಹಿತ್ಯವು ಅನುಭವ ಪೂರ್ಣವಾಗಿರಬೇಕು. ಕಲ್ಪನೆಯೂ, ಅನುಭವವೂ

ಕೂಡಿಯೇ ಸಾಹಿತ್ಯ ನಿರ್ಮಾಣವಾಗುವದು. ಸಾಹಿತ್ಯವೆಲ್ಲವೂ ಜೀವನದ ಕೇವಲ ಛಾಯಾಚಿತ್ರವಲ್ಲ. ಛಾಯಾಚಿತ್ರವು ಕಲೆಯಲ್ಲ. ಸಾಹಿತ್ಯವು ಶ್ರೇಷ್ಠ ವಾದ ಕಲೆ. ಸಾಹಿತ್ಯವು ಜೀವನದ ಪಡಿನೆಳಲು ಎಂದರೆ ಅದು ಜೀವನದ ಕನ್ನಡಿ ಎಂದು ಭಾವಿಸಬಾರದು. ನಾವು ಹೇಗಿರುವೆವೋ ಅದರಂತೆಯೇ ನಮ್ಮ ರೂಪವನ್ನು ಕನ್ನಡಿಯು ತೋರಿಸುವದು. ಆದರೆ ಕವಿಯು ಜೀವನ ವನ್ನು ಇದ್ದಕ್ಕಿದ್ದಂತೆ ಪ್ರತಿಬಿಂಬಿಸಲಾರನು. ಅದು ಅವನಉದ್ದೇಶವೂಅಲ್ಲ. ಅವನು ಕಾವ್ಯವನ್ನು ರಚಿಸುವಾಗ ಕೆಲವು ಮಾರ್ಪಾಡುಗಳನ್ನು ಮಾಡಿ ಕೊಳ್ಳುವನು. ಈ ಮಾರ್ಪಾಡುಗಳು ಕಲಾತ್ಮಕವಾದವುಗಳು. ಇದರಲ್ಲಿಯೇ ಅವನ ಪ್ರತಿಭಾಶಕ್ತಿಯು ಅಡಗಿರುವದು.

ಸಂಸಾರದಲ್ಲಿ ನಮಗೆ ದುಃಖಗಳು ಬೇಡ, ಸುಖವನ್ನು ಮಾತ್ರ ಇಚ್ಛಿ ಸುವೆವು. ಆದರೆ ಸಾಹಿತ್ಯದಲ್ಲಿ ಸುಖಾಂತ ನಾಟಕಗಳಿಗಿಂತಲೂ, ದುಃಖಾಂತ ನಾಟಕಗಳೇ ಜನರ ಮೆಚ್ಚಿಗೆಯನ್ನು ಪಡೆಯುತ್ತವೆ. ರನ್ನನ ಗದಾಯುದ್ಧ ದಲ್ಲಿ ನಮಗೆ ಮೆಚ್ಚಿಗೆಯಾಗುವ ಭಾಗವೆಂದರೆ ದುರ್ಯೋಧನನ ಪ್ರಲಾಪ, ರಘುವಂಶದಲ್ಲಿ ವಿದ್ವಾಂಸರ ಮೆಚ್ಚಿಗೆಯಾದ ಕಾವ್ಯವೆಂದರೆ ಅಜವಿಲಾಪ, ಶಾಕುಂತಲದಲ್ಲಿ ಶಕುಂತಲೆಯು ಆಶ್ರಮವನ್ನು ಬಿಟ್ಟು ತನ್ನ ಪತಿಯ ಗೃಹಕ್ಕೆ ಹೋಗುವ ಸಮಯವು ಈಡೀ ನಾಟಕದಲ್ಲಿಯೇ ಹೃದಯಸ್ಪರ್ಶಿಯಾದ ಕಾವ್ಯವಾಗಿದೆ. ಆದ್ದರಿಂದಲೇ ಕವಿಯೊಬ್ಬನು 'Our sweetest songs are those that tell us of a saddest thought' ಎಂದು ನುಡಿದಿರುವನು. ಕರುಣರಸಪೂರ್ಣವಾದ ಕಾವ್ಯಗಳನ್ನು ಓದುವದರಿಂದ ನಮಗೆ ದುಃಖವಾಗುವದಿಲ್ಲ. ಆನಂದವಾಗುತ್ತದೆ. ಇವುಗಳನ್ನು ಒದುವಾಗ ಹರ್ಷಾಶ್ರುಗಳನ್ನು ಸುರಿಸುತ್ತೇವೆ, ದುಃಖಾಶ್ರುಗಳನ್ನಲ್ಲ. ಇವುಗಳನ್ನು ಓದು ವದರಿಂದ ದುಃಖವಾಗುತ್ತಿದ್ದರೆ ಯಾರೂ ಇವುಗಳನ್ನು ತಿರುತಿರುಗಿ ಓದುತ್ತಿರ ಲಿಲ್ಲ. ರಸಿಕರಾದವರು ಷೇಕ್ಸಪಿಯರ ಮಹಾಕವಿಯ ದುಃಖಾಂತ ನಾಟಕ ಗಳನ್ನು ಓದುವದಕ್ಕೆ ಇದೇ ಕಾರಣವು. ಇದರಿಂದ ಸ್ವಲ್ಪ ಮಟ್ಟಿಗೆ ಸಾಹಿತ್ಯ ಮತ್ತು ಜನಜೀವನದಲ್ಲಿ ಅಂತರವು ಕಂಡು ಬರುತ್ತದೆ. ನಾವು ಲೋಕದಲ್ಲಿ ದುರ್ಯೋಧನ ಮತ್ತು ಕರ್ಣರಂತೆ ಇರತಕ್ಕವರನ್ನು ನೋಡುವದು ಅಪ ರೂಪ. ಅ. ನ. ಕೃಷ್ಣರಾಯರು ತಮ್ಮ ಸಂಧ್ಯಾರಾಗದಲ್ಲಿಯೂ ಇಂಥ

ದೊಂದು ಪಾತ್ರವನ್ನು ನಿರ್ಮಿಸಿರುವರು. ಅದರಲ್ಲಿ ಬರುವ ಮೀನಾಕ್ಷಮ್ಮ ನವರ ಪಾತ್ರವು ಬಹಳ ಅಮೋಘವಾಗಿದೆ. ಸಂಸಾರದಲ್ಲಿ ಅಂಥವರನ್ನು ನಾವು ಕಾಣಲಾರೆವು. ಸಾಹಿತಿಯು ಕೆಲವು ಉಚ್ಚವಾದ ಆದರ್ಶಗಳನ್ನು ನಮ್ಮ ಮುಂದಿಡುವನು. ಕೇವಲ ನಮ್ಮ ಜೀವನದ ಪ್ರತಿಬಿಂಬವನ್ನು ತೋರಿ ಸುವದೇ ಅವನ ಗುರಿಯಲ್ಲ. ಆದರ್ಶ ಪಾತ್ರಗಳನ್ನೂ, ಸನ್ನಿವೇಶಗಳನ್ನೂ ಅವನು ನಿರ್ಮಿಸುವನು. ಜೀವನವು ಉನ್ನತವಾಗಬೇಕೆಂದು ಅವನು ಇಚ್ಛಿ ಸುವನು. ಆದ್ದರಿಂದಲೇ ಅವನು ಆದರ್ಶ ಪಾತ್ರಗಳನ್ನು ನಿರ್ಮಿಸುತ್ತಾನೆ. ಜೀವನವನ್ನು ಸಾಹಿತ್ಯದಲ್ಲಿ ನಿರ್ಮಾಣ ಮಾಡಿದರೂ ಅದರಲ್ಲಿ ಮಾರ್ಪಾಡು ಗಳನ್ನು ಮಾಡುವ ಸ್ವಾತಂತ್ರ್ಯವು ಅವನಿಗಿರುತ್ತದೆ. ಹೆಚ್ಚು ಪರಿಣಾಮ ವನ್ನುಂಟು ಮಾಡುವದಕ್ಕೆ ಅವನು ಅತಿಶಯೋಕ್ತಿಯಿಂದ ವರ್ಣಿಸಬಹುದು. ಇದು ಸಾಹಿತ್ಯದ ದೋಷವಲ್ಲ.

ಇಂಗ್ಲಿಷ ವಿಮರ್ಶಕನೊಬ್ಬನು 'Literature is the reflection of life' ಎಂದು ಹೇಳಿರುವನು. ಇದರ ಮರ್ಮವರಿತುಕೊಳ್ಳದ ಕೆಲವರು ವಾಸ್ತವತೆಗೆ ಅವಾಸ್ತವ ಮಹತ್ವ ಕೊಡುತ್ತಿರುವರು. ಕಾವ್ಯದಲ್ಲಿ ಕವಿಸಮಯ, ಅಲಂಕಾರಗಳನ್ನು ಉಪಯೋಗಿಸಬಾರದೆಂದು ಇವರು ಪ್ರತಿ ಪಾದಿಸುವರು. ಕಾವ್ಯದಲ್ಲಿ ಅಲಂಕಾರಗಳನ್ನು ಸಮಯೋಚಿತವಾಗಿ ಉಪ ಯೋಗಿಸಬೇಕು ಎಂದರೆ ಅಲಂಕಾರಗಳನ್ನು ಉಪಯೋಗಿಸಬಾರದು ಎಂದು ಅರ್ಥವಲ್ಲ. ಸಾಹಿತ್ಯವು ಜೀವನದ ಪ್ರತಿಬಿಂಬವೆಂದರೆ ಜೀವನವನ್ನು ಇದ್ದ ಕ್ಕಿದ್ದಂತೆ ಚಿತ್ರಿಸುವದಲ್ಲ. ಅದರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿ ಕೊಳ್ಳುವದು ಅವಶ್ಯವಾದುದು. ಜೀವನದಲ್ಲಿಯ ಅಶ್ಲೀಲ ಸಂಗತಿಗಳನ್ನು ಸಾಹಿತ್ಯದಲ್ಲಿ ಚಿತ್ರಿಸಬೇಕಾದ ಅವಶ್ಯಕತೆಯಿಲ್ಲ. ನಮ್ಮ ಜೀವನವನ್ನು ವಿಕಾಸ ಗೊಳಿಸುವದೇ ಸಾಹಿತ್ಯದ ಪರಮೋಚ್ಚ ಧ್ಯೇಯವಾಗಿರಬೇಕು. ಉಪದೇಶವು ಆನುಷಂಗಿಕವಾಗಿ ಬರಬೇಕು. ನಮ್ಮ ಜೀವನವನ್ನು ವಿಕಾಸ ಗೊಳಿಸುವದ ಕ್ಕಾಗಿಯೇ ಸಾಹಿತಿಯು ನಮ್ಮ ಮುಂದೆ ಉಚ್ಚವಾದ ಆದರ್ಶಗಳುಳ್ಳ ಪಾತ್ರ ವನ್ನು ನಿರ್ಮಿಸುವನು. ಆದರ್ಶವಿಲ್ಲದ ಜೀವನವು ವ್ಯರ್ಥವಾದದ್ದು. ಜಗತ್ತಿ ನಲ್ಲಿ ರನ್ನನ ದುರ್ಯೋಧನ, ಪಂಪನ ರಾವಣರಂಥ ಪುರುಷರು ವಿರಲವಾಗಿ ರುವರು. ಕವಿಯು ಹೊಸ ಜಗತ್ತನ್ನೇ ನಿರ್ಮಿಸುವನು. ಅವನ ಜಗತ್ತು

ನಮ್ಮ ಜಗತ್ತನ್ನು ಬಹಳ ಮಟ್ಟಿಗೆ ಹೋಲುವದಾದರೂ ಅದು ಈ ಜಗತ್ತಿನ ಛಾಯಾ ಚಿತ್ರವಲ್ಲ.

### ೪೫. ಪುಸ್ತಕಗಳಿಂದ ದೊರೆಯುವ ಆನಂದ

ಸೃಷ್ಟಿ ಸೌಂದರ್ಯದಿಂದ ದೊರೆಯುವ ಆನಂದವು ಬೇರೆ, ವಿಷಯಾನಂದವು ಬೇರೆ, ಭಕ್ತರಿಗೆ ಪರಮಾತ್ಮನ ದರ್ಶನದಿಂದ ದೊರೆಯುವ ಆನಂದವು ಬೇರೆ, ಪುಸ್ತಕಗಳಿಂದ ದೊರೆಯುವ ಆನಂದವು ಬೇರೆ. ಈ ರೀತಿ ಆನಂದಗಳಲ್ಲಿ ಬೇರೆ ಬೇರೆ ಪ್ರಕಾರಗಳುಂಟು. ಎಲ್ಲ ಆನಂದಗಳಿಗೂ ಅಷ್ಟೇ ಮಹತ್ವವಿಲ್ಲ. ಎಲ್ಲ ಆನಂದಗಳಲ್ಲಿ ಪರಮಾತ್ಮನ ದರ್ಶನದಿಂದ ಆಗುವ ಆನಂದವು ಶ್ರೇಷ್ಠವಾದದ್ದೆಂದು ವೇದಾಂತಿಗಳು ಹೇಳುವರು. ಪರಮಾನಂದದ ತರುವಾಯ ಪುಸ್ತಕಗಳಿಂದ ದೊರೆಯುವ ಆನಂದವೇ ಶ್ರೇಷ್ಠವಾದುದು. ಕಾವ್ಯಾನಂದವು ಬ್ರಹ್ಮಾನಂದಕ್ಕೆ ಸಮಾನವಾದದ್ದು ಎಂದು ಸಂಸ್ಕೃತ ಆಲಂಕಾರಿಕನು ಹೇಳಿರುವನು. ಸೌದೆಯೆಂಬ ಇಂಗ್ಲಿಷ ಕವಿಯು ಪುಸ್ತಕಗಳ ಮಹತ್ವವನ್ನು ಈ ರೀತಿಯಾಗಿ ಹೇಳಿರುವನು.

My never failing friends are they
With whom I converse day by day.

ಈ ಮಾತು ಬಹಳ ಮಾರ್ಮಿಕವಾಗಿದೆ. ಪುಸ್ತಕಗಳು ನಮಗೆ ಯಾವಾಗಲೂ ಹಿತೋಪದೇಶವನ್ನು ಮಾಡುವವು. ಎಲ್ಲ ಕಾಲದಲ್ಲಿಯೂ ಮಿತ್ರರಂತೆ ಸಹಾಯ ಮಾಡುವವು. ಅವು ನಮಗೆ ಜ್ಞಾನವನ್ನೂ ಆನಂದವನ್ನೂ ಕೊಡುತ್ತವೆ. ಆದರೆ ಅದಕ್ಕೆ ಪ್ರತಿ ಫಲವಾಗಿ ಏನನ್ನೂ ಆಶಿಸುವದಿಲ್ಲ. ನಾವು ಯಾವಾಗ್ಗೆ ದುಃಖದಲ್ಲಿರುವೆವೋ ಆಗ್ಗೆ ಅವುಗಳಿಂದ ಸಮಾಧಾನವನ್ನು ಪಡೆಯಬಹುದು. ಆನಂದದಲ್ಲಿದ್ದಾಗ ಹೆಚ್ಚಿಗೆ ಆನಂದವನ್ನು ಪಡೆಯಬಲ್ಲೆವು.

ಪ್ರಾಚೀನ ಕಾಲದಲ್ಲಿ ಪುಸ್ತಕಗಳು ಇರಲಿಲ್ಲ. ಆದ್ದರಿಂದ ಜ್ಞಾನವನ್ನು ಸಂಪಾದಿಸಬೇಕೆಂದು ಇಚ್ಛಿಸುವವರು ಗುರುಮುಖದಿಂದಲೇ ಕಲಿಯಬೇಕಾಗುತ್ತಿತ್ತು. ವೇದ, ಉಪನಿಷತ್ತುಗಳನ್ನು ಬಾಯಿಪಾಠ ಮಾಡುತ್ತಿದ್ದರು. ತಲ ತಲಾಂತರಗಳಿಂದ ಹಿಂದಿನ ಸಾಹಿತ್ಯವನ್ನು ನಮ್ಮವರು ಉಳಿಸಿಕೊಂಡು ಬಂದರು. ಇದರಿಂದ ಜ್ಞಾನವನ್ನು ಗಳಿಸುವದಕ್ಕೆ ಬಹಳ ತೊಂದರೆಯಾಗಿತ್ತು. ಬೌದ್ಧ ಧರ್ಮ ಗ್ರಂಥಗಳನ್ನು ಅಭ್ಯಾಸಮಾಡುವದಕ್ಕಾಗಿ

ಚೀನಾ ದೇಶದ ಪ್ರವಾಸಿಗಳು ಹಿಮಾಲಯ ಪರ್ವತವನ್ನು ದಾಟಿ ಹಿಂದು ಸ್ತಾನಕ್ಕೆ ಬರಬೇಕಾಯಿತು. ಈ ಶತಮಾನದಲ್ಲಿ ಜ್ಞಾನ ಪ್ರಸಾರ ಮಾಡುವ ದಕ್ಕೆ ಗ್ರಂಥಗಳಿಂದ ಬಹಳ ಸಹಾಯವಾಗಿದೆ. ಸುಲಭ ಬೆಲೆಯಲ್ಲಿ ನಮಗೆ ಬೇಕಾದ ಗ್ರಂಥಗಳನ್ನು ದೊರಕಿಸಬಹುದಾಗಿದೆ.

ಈ ಯುಗದಲ್ಲಿ ಗ್ರಂಥ ಭಾಂಡಾರಗಳೇ ವಿಶ್ವವಿದ್ಯಾಲಯಗಳಾಗಿವೆ. ಗ್ರಂಥಗಳಿಂದ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳಬಹುದು ಹಿಂದಿನವರು ಆಶ್ರಮದಲ್ಲಿದ್ದುಕೊಂಡು ಗುರುವಿನ ಮುಖಾಂತರವಾಗಿ ವಿದ್ಯೆಯನ್ನು ಕಲಿ ಯುತ್ತಿದ್ದರು. ಆಶ್ರಮ ಜೀವನವು ಬಹಳ ಕಠಿಣವಾಗಿತ್ತು. ಗಡ್ಡೆ-ಗೆಣಸು ಗಳನ್ನು ತಿಂದು ಜೀವಿಸಬೇಕಾಗುತ್ತಿತ್ತು. ಈಗ ಜ್ಞಾನವನ್ನು ಗಳಿಸುವದಕ್ಕೆ ಆಶ್ರಮಗಳಿಗೆ ಹೋಗಬೇಕಾಗಿಲ್ಲ. ನಮ್ಮ ಮನೆಯಲ್ಲಿಯೇ ಕುಳಿತುಕೊಂಡು ಜ್ಞಾನವನ್ನು ಸಂಪಾದಿಸಬಹುದು. ಈ ಜ್ಞಾನದಿಂದ ಬರುವ ಆನಂದವನ್ನು ಬೇರೆ ಯಾವದಕ್ಕೂ ಹೋಲಿಸಲು ಸಾಧ್ಯವಿಲ್ಲ. ಅದಕ್ಕಾಗಿಯೇ ಕೃಷ್ಣನು ಭಗವದ್ ಗೀತೆಯಲ್ಲಿ " ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೆ " ಜ್ಞಾನದಷ್ಟು ಪವಿತ್ರವಾದದ್ದು ಈ ಲೋಕದಲ್ಲಿ ಯಾವದೂ ಇರುವದಿಲ್ಲ ಎಂದು ಹೇಳಿರುವನು. ಜ್ಞಾನಿಯಾದವನೇ ಜಗತ್ತಿನಲ್ಲಿ ಸುಖಿಯಾಗುವನು. ಎಲ್ಲರ ಆದರಕ್ಕೆ ಪಾತ್ರನಾಗುವನು. ಕಷ್ಟಗಳು ಬಂದಾಗ ಅವನು ಧೈರ್ಯ ಗುಂದುವದಿಲ್ಲ. ಸುಖವು ಬಂದಾಗ ಉನ್ಮತ್ತನಾಗುವದಿಲ್ಲ. ಸಮುದ್ರದಂತೆ ಅವನು ಯಾವಾಗಲೂ ಗಂಭೀರನಾಗಿರುವನು. ಇಂಥ ಪವಿತ್ರವಾದ ಜ್ಞಾನ ವನ್ನು ನಾವು ಗ್ರಂಥಗಳಿಂದ ದೊರಕಿಸುತ್ತೇವೆ.

ಹಿಂದಿನ ಸಾಹಿತ್ಯ, ಸಂಸ್ಕೃತಿಗಳನ್ನು ತಿಳಿದುಕೊಳ್ಳುವದಕ್ಕೂ ಗ್ರಂಥ ಗಳು ಬೇಕು. ನಮ್ಮ ಹಿಂದಿನ ಸಾಹಿತ್ಯ, ಸಂಸ್ಕೃತಿಗಳನ್ನು ತಿಳಿದುಕೊಳ್ಳದೆ ನಾವು ಉದ್ಧಾರ ಹೊಂದಲಾರೆವು. ಕಾವ್ಯಗಳನ್ನು ಓದುವದರಿಂದ ಕೆಲವು ಕ್ಷಣಗಳವರೆಗಾದರೂ ರಸಿಕನು ಜಗತ್ತನ್ನೇ ಮರೆಯುತ್ತಾನೆ. ಕಾವ್ಯದಲ್ಲಿ ಅವನು ತನ್ಮಯನಾಗುತ್ತಾನೆ. ಸಮಾಧಿಸ್ಥಿತಿಯಲ್ಲಿದ್ದವನು ಇಡೀ ಜಗತ್ತನ್ನೇ ಮರೆತು ಪರಮಾತ್ಮನಲ್ಲಿ ತನ್ಮಯನಾಗುವಂತೆ ರಸಿಕನು ಕಾವ್ಯದಲ್ಲಿ ತನ್ಮಯ ನಾಗುವನು. ಕಾವ್ಯವಾಚನಕ್ಕಿಂತಲೂ ಬೇರೆ ಯಾವದನ್ನೂ ಅವನು ಇಚ್ಛಿಸ ಲಾರನು. ಗ್ರಂಥಗಳಿಲ್ಲದೆ ಅವನು ಜೀವಿಸಲಾರನು. ಓದುವಾಗ ಹಸಿವೆ, ನೀರಡಿಕೆಗಳು ಅವನನ್ನು ಬಾಧಿಸಲಾರವು.

ಒಳ್ಳೇ ಪುಸ್ತಕಗಳಿಂದ ಮನುಷ್ಯನ ಸ್ವಭಾವವೇ ಪರಿವರ್ತನವಾಗುವದು. ಮಹಾತ್ಮಾಗಾಂಧಿಯವರು ದಕ್ಷಿಣ ಆಫ್ರಿಕೆಯಲ್ಲಿದ್ದಾಗ ಇಂಗ್ಲಂಡದ ಸುಪ್ರಸಿದ್ಧ ಗ್ರಂಥಕಾರನಾದರಸ್ಕಿನ್ನನ 'Unto this last' ಎಂಬ ಗ್ರಂಥವನ್ನು ಓದಿದರು. ಇದರಿಂದ ಅವರ ಜೀವನ ಕ್ರಮವೇ ಬದಲಾಯಿತು. ರಸ್ಕಿನ್ನನು ಹೇಳಿದ ಅನೇಕ ವಿಚಾರಗಳು ಅವರ ಮನಸ್ಸಿಗೆ ಒಪ್ಪಿತವಾದವು. ಇದರಂತೆಯೇ ಭಗವದ್ ಗೀತೆಯು ಮಹಾತ್ಮಾ ಗಾಂಧಿಯವರ ಮೇಲೆ ಶಾಶ್ವತವಾದ ಪರಿಣಾಮವನ್ನು ಮಾಡಿತು. ಅವರು ಭಗವದ್ ಗೀತೆಯನ್ನು ಪ್ರತಿನಿತ್ಯ ಓದುತ್ತಿದ್ದರು.

ಫ್ರೆಂಚ ರಾಜ್ಯಕ್ರಾಂತಿಯಾಗುವದಕ್ಕೆ ರುಸೋ ಮತ್ತು ವಾಲ್ಟೇರ ಬಹುಮಟ್ಟಿಗೆ ಕಾರಣರಾಗಿರುವರು. ಜನಜಾಗ್ರತಿಯ ಕೆಲಸವನ್ನು ಈ ಇಬ್ಬರು ಲೇಖಕರು ಫ್ರಾನ್ಸದಲ್ಲಿ ಮಾಡಿದರು. ಇಂದಿಗೂ ರುಸೋನ ಗ್ರಂಥಗಳು ಸ್ಫೂರ್ತಿದಾಯಕವಾಗಿವೆ. ಹೊಸ ಹೊಸ ವಿಚಾರಗಳನ್ನು ತಿಳಿಯಬೇಕೆನ್ನುವವರು ಗ್ರಂಥಗಳನ್ನು ಓದಲೇಬೇಕು. ಗ್ರಂಥಗಳನ್ನು ಓದುವದರಿಂದ ನಮ್ಮ ದುಃಖವನ್ನು ಮರೆಯಬಹುದಲ್ಲದೆ ಮಹಾ ಮಹಾ ಜ್ಞಾನಿಗಳ ವಿಚಾರಗಳನ್ನು ತಿಳಿದುಕೊಳ್ಳಬಹುದು. ನಾವು ಪ್ರಗತಿಶೀಲರಾಗಬೇಕಾದರೆ ಹೊಸ ಹೊಸ ವಿಚಾರಗಳಿಂದ ತುಂಬಿದ ಗ್ರಂಥಗಳನ್ನು ಓದುವದು ಅವಶ್ಯವಾಗಿರುವದು.

ಕಾಂತೆಯಂತೆ ಕಾವ್ಯವು ಉಪದೇಶ ಮಾಡುವದೆಂದು ಮಮ್ಮಟನು ಹೇಳಿರುವನು. ನಮ್ಮನ್ನು ಒಳ್ಳೇ ಹಾದಿಗೆ ತರುವದಕ್ಕೆ ಕಾವ್ಯವು ಬಹಳ ಸಹಾಯ ಮಾಡುತ್ತದೆ. ಕಾವ್ಯವೆಂದರೆ ಸಿಹಿಯಾದ ಔಷಧಿಯಿದ್ದಂತೆ. ಅದರಲ್ಲಿಯ ರಸಾಸ್ವಾದನೆಯನ್ನು ಮಾಡುವದಕ್ಕೆ ನಾವು ಕಾವ್ಯವನ್ನು ಓದುವೆವು. ಆದರಿಂದ ನಾವು ಬುದ್ಧಿಯನ್ನೂ ಕಲಿಯುವೆವು. ಪ್ರಿಯವಾದ ಮಾತುಗಳಿಂದ ಕಾವ್ಯವು ಉಪದೇಶ ಮಾಡುವದರಿಂದ ಅದು ನಮ್ಮ ಮನಸ್ಸಿನಲ್ಲಿ ನಾಟುತ್ತದೆ. ನೇರವಾಗಿ ಹೃದಯದಿಂದ ಬಂದದ್ದು ಮಾತ್ರ ಹೃದಯದಲ್ಲಿ ಪ್ರವೇಶಿಸುವದು. ಸತ್ಯವಾದ ಪ್ರಿಯವಾದ ಮಾತುಗಳನ್ನು ಸಾಹಿತ ಗ್ರಂಥಗಳು ಹೇಳುವದರಿಂದ ನಾವು ಯಾವಾಗಲೂ ಅವುಗಳ ಪಠನವನುಶೀ ಮಾಡಬೇಕು. ನಮ್ಮ ದುಃಖವನ್ನು ಮರೆಯುವದಕ್ಕೂ, ಜ್ಞಾನವನ್ನು ಗಳಿ

ಸುವದಕ್ಕೂ ಗ್ರಂಥಗಳು ನೆರವಾಗಬಲ್ಲವು. ಈ ಜಗತ್ತಿನಲ್ಲಿ ಅವುಗಳಿಗೆ ಸರಿಯಾದ ಮಿತ್ರರು ಯಾರೂ ಇರುವದಿಲ್ಲ. ಆದರೂ ನಾವು ಅವುಗಳ ಸರಿಯಾದ ಉಪಯೋಗ ತೆಗೆದುಕೊಳ್ಳುತ್ತಿರುವದಿಲ್ಲ. ಈ ಪರಿಸ್ಥಿತಿಯು ಬದಲಾಗದೆ ನಮ್ಮ ಉನ್ನತಿಯಾಗಲಾರದು. ವಾಚನಾಭಿರುಚಿಯು ಬೆಳೆಯಬೇಕು. ಅದರಲ್ಲಿ ನಾವು ತಲ್ಲೀನರಾಗಬೇಕು. ಈ ವಿಷಯದಲ್ಲಿ ಬೇರೆ ದೇಶದವರಿಂದ ನಾವು ಪಾಠ ಕಲಿಯಬಹುದಾಗಿದೆ. ತನ್ನ ಜ್ಞಾನವನ್ನು ವಿಕಾಸ ಮಾಡಿಕೊಳ್ಳದ್ದರಿಂದಲೇ ಭಾರತವು ಹಿಂದೆ ಬಿದ್ದಿರುವದು. ಪಾಶ್ಚಾತ್ಯರ ಧ್ಯೇಯನಿಷ್ಠೆ, ಸತತೋದ್ಯೋಗ, ಅವಿಶ್ರಾಂತಶ್ರಮ ಮಾಡುವ ಅಭ್ಯಾಸ, ಜ್ಞಾನಾಭಿಲಾಷೆ ಇವುಗಳನ್ನು ನಾವು ಅನುಕರಿಸಬೇಕು.

ಜ್ಞಾನವಿಲ್ಲದೆ ಮುಕ್ತಿಯಿಲ್ಲ. ಆದ್ದರಿಂದ ಜ್ಞಾನವನ್ನು ಗಳಿಸಬೇಕಾದವರು ಪುಸ್ತಕಗಳನ್ನು ಓದಬೇಕು. ಅವುಗಳ ಮಹತ್ವವನ್ನು ಅರಿತುಕೊಳ್ಳಬೇಕು.

## ೪೬. ಜಮೀನುದಾರಿಯ ನಿರ್ಮೂಲನ

ಮಹಾತ್ಮಾ ಗಾಂಧೀಜಿಯವರ ಶಿಷ್ಯರಾದ ಆಚಾರ್ಯ ವಿನೋಬಾ ಭಾವೆಯವರು ಭೂಮಿ ಇಲ್ಲದ ರೈತರಿಗೆ ಭೂಮಿಯನ್ನು ಒದಗಿಸಿಕೊಡುವದಕ್ಕಾಗಿ ಭಾರತ-ದೇಶದಲ್ಲಿ ಸಂಚರಿಸುತ್ತಿರುವರು. ಅವರು ಒಂದು ಭಾಷಣದಲ್ಲಿ ಜಮೀನದಾರರು ತಮ್ಮ ಭೂಮಿಯನ್ನು ರೈತರಿಗೆ ಕೊಡದಿದ್ದರೆ ದೇಶದಲ್ಲಿ ಕ್ರಾಂತಿಯಾಗುವದೆಂದು ಎಚ್ಚರಿಕೆ ಕೊಟ್ಟಿರುವರು. ಸರಕಾರದವರೂ ಈ ಸಮಸ್ಯೆಯನ್ನು ಬಿಡಿಸಲು ಪ್ರಯತ್ನಿಸುತ್ತಿರುವರು. ಜಮೀನದಾರರಿಗೆ ಪರಿಹಾರ ಧನವನ್ನು ಕೊಟ್ಟು ಅವರ ಭೂಮಿಯನ್ನು ರೈತರಿಗೆ ಕೊಡಬೇಕೆಂದು ಒಂದು ಪಕ್ಷದವರು ವಾದಿಸುವರು. ಇನ್ನೊಂದು ಪಕ್ಷದವರು ಜಮೀನುದಾರರಿಗೆ ಯಾವ ರೀತಿಯಿಂದಲೂ ಪರಿಹಾರ ಧನವನ್ನು ಕೊಡಬಾರದೆಂದು ಪ್ರತಿಪಾದಿಸುವರು ಯಾಕಂದರೆ ಇಷ್ಟು ದಿವಸಗಳ ವರೆಗೆ ಜಮೀನದಾರರು ಹೊಲದಲ್ಲಿ ದುಡಿಯದೆ ಲಾಭ ಪಡೆದಿರುವರು. ಕೆಲವು ದೃಷ್ಟಿಯಿಂದ ವಿಚಾರ ಮಾಡಿದರೆ ಈ ಅಭಿಪ್ರಾಯವು ಸೂಕ್ತವಾದೆಂದು ಕಂಡುಬರುವದು. ರೈತನಪರಿಸ್ಥಿತಿಯು ಮಾತ್ರ ಹಾಗೆಯೇಇರುವದು. ಅವನ ಪರಿಸ್ಥಿತಿಯನ್ನು ಸುಧಾರಿಸಬೇಕಾದರೆ ಅವನಿಗೆ ಸಾಗುಮಾಡುವದಕ್ಕೆ ಭೂಮಿಯನ್ನು ಕೊಡಬೇಕು. ಭೂಮಿಯ ಒಡೆತನವು ಅವನದಾಗಬೇಕು. ಇಲ್ಲದಿದ್ದರೆ ಅವನು ಭೂಮಿಯನ್ನು ಚೆನ್ನಾಗಿ ಸಾಗುಮಾಡಲಾರನು.

ನಮ್ಮ ದೇಶವು ಆಹಾರ ದೃಷ್ಟಿಯಿಂದ ಹಿಂದೆ ಪರಿಪೂರ್ಣವಾಗಿತ್ತು. ಬೇರೆ ದೇಶಗಳಿಗೆ ಆಹಾರವನ್ನು ಕಳಿಸಿಕೊಡುತ್ತಿದ್ದರು ಎಲ್ಲ ತರದ ಹವಾಮಾನವೂ ಇಲ್ಲಿರುವದು. ಯಾವ ಬೆಳೆಯನ್ನಾದರೂ ನಮ್ಮ ದೇಶದಲ್ಲಿ ಬೆಳೆಯಬಹುದು. ಆದರೂ ಈ ಹೊತ್ತು ಭಾರತವು ಆಹಾರ ದೃಷ್ಟಿಯಿಂದ ಪರಾವಲಂಬಿಯಾಗಿ ರುವದು. ಆಹಾರದ ಸಲುವಾಗಿ ನಾವು ಕೋಟ್ಯಾವಧಿ ರೂಪಾಯಿಗಳನ್ನು ಖರ್ಚು ಮಾಡುತ್ತಿರುವೆವು. ಆಹಾರದ ಸಲುವಾಗಿ ನಾವು ಬೇರೆ ದೇಶವನ್ನು ಅವಲಂಬಿಸಿದರೆ ನಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವೆವು. "ಹಂಗಿನರ ಮನೆಗಿಂತ ಹಿಗಂಡದ ಗುಡಿ ಲೇಸು, ಭಂಗ ಬಟ್ಟುಂಬ ಬಿಸಿಯನ್ನಕಿಂತ ತಂಗುಳವೇ ಲೇಸು" ಎಂದು ಸರ್ವಜ್ಞ ಕವಿಯು ಹೇಳಿಲ್ಲವೇ? ಆಹಾರ ದೃಷ್ಟಿ ಯಿಂದ ನಾವು ಸ್ವತಂತ್ರರಾಗಬೇಕಾದರೆ ಏನು ಮಾಡಬೇಕು?

ಬಹಳ ಭೂಮಿಯು ಒಬ್ಬನ ಅಧೀನದಲ್ಲಿದ್ದರೆ, ಅವನು ಆ ಭೂಮಿ ಯೆಲ್ಲವನ್ನೂ ಸಾಗು ಮಾಡಲಾರನು. ಸ್ವಲ್ಪ ಭೂಮಿಯಿದ್ದವನು ಆ ಹೊಲ ದಲ್ಲಿಯೇ ಅನೇಕ ಬೆಳೆಗಳನ್ನು ತೆಗೆದುಕೊಳ್ಳುವನು. ಅವನು ಕಷ್ಟಪಟ್ಟದ್ದಕ್ಕೆ ಫಲವೂ ದೊರೆಯುವದು. ಯಾರು ಹೊಲದಲ್ಲಿ ಕಷ್ಟಪಡಲು ಸಿದ್ಧರಿರುವರೋ ಅಂಥವರಿಗೆ ಸರಕಾರವು ಭೂಮಿಯನ್ನು ಕೊಡಬೇಕು. ಭೂಮಿಯ ಸ್ವಾಮಿ ತ್ವವು ರೈತನ ವಶಕ್ಕೆ ಬರಬೇಕು. ಅಂದರೆ ಮಾತ್ರ ರೈತನಿಗೆ ಹೊಲದ ಬಗ್ಗೆ ಆತ್ಮೀಯತೆಯು ಉತ್ಪನ್ನವಾಗುತ್ತದೆ. ಆತ್ಮೀಯತೆಯು ಉತ್ಪನ್ನವಾಗುವದ ರಿಂದ ಅವನು ಬಹಳ ದುಡಿಯುವನು. ಇದರಿಂದ ಹೊಲದಲ್ಲಿ ಉತ್ಪನ್ನವೂ ಹೆಚ್ಚಾಗುವದು.

ಇಂದಿನ ಪರಿಸ್ಥಿತಿಯು ಬೇರೆಯಾಗಿದೆ. ರೈತನಿಗೆ ಸ್ವಂತ ಭೂಮಿಯಿಲ್ಲ. ಹೊಲದ ಒಡೆಯರು ದೊಡ್ಡ ಪಟ್ಟಣಗಳಲ್ಲಿ ವಾಸಿಸುವರು. ಅವರಿಗೆ ಹೊಲದ ಮೇಲೆ ಪ್ರೀತಿಯಿಲ್ಲ. ಆದಷ್ಟು ರೈತನನ್ನು ಸುಲಿಯುವದೇ ಜಮೀನುದಾರರ ಉದ್ದೇಶವಾಗಿದೆ. ವರ್ಷವೆಲ್ಲವೂ ರೈತನು ಹೊಲದಲ್ಲಿ ಶ್ರಮಪಡುವನು. ಅದರ ಫಲವನ್ನು ಮಾತ್ರ ಅನುಭವಿಸಲು ಅವನಿಗೆ ಸ್ವಾತಂತ್ರ್ಯವಿಲ್ಲವೇ? ತಾನು ದುಡಿದದ್ದರಲ್ಲಿಯ ಕೆಲವು ಭಾಗವನ್ನು ಜಮೀನುದಾರನಿಗೆ ಕೊಡಬೇಕಾಗು ವದು. ಹೊಲದಲ್ಲಿ ಬಿಸಿಲು ಗಾಳಿಗಳೆನ್ನದೆ ಅವನು ದುಡಿಯುವನು. ಆದ ಜಮೀನುದಾರನು ಮಾತ್ರ ಏನೂ ಕಷ್ಟಪಡದೆ ರೈತನ ದುಡಿತದ ಲಾಭವನ್ನು

ಪಡೆಯಲು ಇಚ್ಛಿಸುವನು. ಸಾಗು ಮಾಡುವದಕ್ಕಾಗಿ ರೈತನು ಶ್ರಮಪಡು ವನು, ಹೊಲದಲ್ಲಿ ಗೊಬ್ಬರವನ್ನು ಹಾಕುವನು, ಕೂಲಿಯಾಳುಗಳಿಗೆ ಹಣ ಕೊಡುವನು ಇಷ್ಟಾದ ಮೇಲೆ ಅವನು ಜಮೀನುದಾರನಿಗೆ ಕೆಲವು ಭಾಗ ವನ್ನು ಕೊಡಬೇಕಾದರೆ ಅವನ ಸ್ಥಿತಿಯೇನಾಗಬೇಕು? ತಾನು ಹೊಲದಲ್ಲಿ ಶ್ರಮಪಡಬೇಕು ಅದರ ಲಾಭವನ್ನು ಮಾತ್ರ ಜಮೀನುದಾರನು ಪಡೆಯ ಬೇಕು ಎಂಬುದನ್ನು ರೈತನು ಒಪ್ಪಲಾರನು. ರೈತನ ಪರಿಸ್ಥಿತಿಯು ಸುಧಾರಿ ಸದೆ ಅವನು ಹೆಚ್ಚಿಗೆ ಕೆಲಸ ಮಾಡಲಾರನು. ಎಷ್ಟು ದುಡಿದರೂ ಅದರಲ್ಲಿಯ ಬಹಳ ಭಾಗವು ಹೊಲದ ಒಡೆಯನಿಗೆ ಹೋಗುವಂತಾದರೆ ರೈತನಿಗೆ ಏನು ಪ್ರಯೋಜನವು? ಅವನಿಗೆ ಸ್ವಾಭಾವಿಕವಾಗಿಯೇ ದುಡಿಯಬೇಕೆಂಬ ಇಚ್ಛೆಯೂ ಉಂಟಾಗಲಾರದು. ಇದರಿಂದಲೇ ನಮ್ಮ ದೇಶದಲ್ಲಿ ಆಹಾರ ಧಾನ್ಯದ ಉತ್ಪತ್ತಿಯು ಕಡಿಮೆಯಾಗಿರುವದು. ಭೂಮಿಯ ಸ್ವಾಮಿತ್ವವು ರೈತನಿಗೆ ದೊರೆತರೆ ಅವನು ಮನಃಪೂರ್ವಕವಾಗಿ ಕೆಲಸ ಮಾಡುವನು. ಕಡೆತನಕ ಭೂಮಿಯು ಅವನ ವಶದಲ್ಲಿರುವದೆಂಬ ನಂಬಿಗೆಯಿರುವದರಿಂದ ಅವನು ಚೆನ್ನಾಗಿ ಕೆಲಸ ಮಾಡುವನು. ಒಕ್ಕಲಿಗನಿಗೆ ಭೂಮಿಯ ಸ್ವಾಮಿ ತ್ವವು ದೊರೆಯದಿದ್ದರೆ, ಕೆಲಸ ಮಾಡಲು ಅವನಿಗೆ ಉತ್ಸಾಹ ಬರಲಾರದು. ಜಮೀನುದಾರನು ತನ್ನ ಮನಸ್ಸಿಗೆ ಬಂದಾಗ ಅವನಿಂದ ಹೊಲವನ್ನು ಕಿತ್ತು ಕೊಳ್ಳಬಹುದು. ಯಾರಾದರೂ ಬೇರೆಯವರು ಹೆಚ್ಚು ಹಣ ಕೊಡುವೆನೆಂದು ಹೇಳಿದರೆ ಜಮೀನುದಾರನು ರೈತರಿಂದ ಭೂಮಿಯನ್ನು ಕಸಿದುಕೊಂಡು ಬೇರೆಯವರಿಗೆ ಕೊಡಬಹುದು. ಇದರಿಂದ ರೈತರಿಗೆ ತಾವು ಮಾಡಿದ ಹೊಲವು ತಮ್ಮ ಹತ್ತಿರ ಇರುವದೆಂಬ ಭರವಸೆಯಿಲ್ಲ. ಈ ಭರವಸೆಯಿಲ್ಲದ್ದ ರಿಂದಲೇ ಒಕ್ಕಲತನದಲ್ಲಿ ಅವರು ಪೂರ್ಣ ಮನಸ್ಸು ಹಾಕುವದಿಲ್ಲ. ಅದ ಕ್ಕಾಗಿಯೇ ಇಂದು ಸರಕಾರದವರು ಭೂಮಿಯನ್ನು ಜಮೀನುದಾರರಿಂದ ಕಸಿದುಕೊಂಡು ರೈತರಿಗೆ ಕೊಡುತ್ತಿರುವರು.

ರೈತನು ತನ್ನ ಬೆಳೆಯ ಸಲುವಾಗಿ ಮಳೆಯನ್ನೇ ಅವಲಂಬಿಸಿರುವನು. ಹಿಂದುಸ್ತಾನದಲ್ಲಿ ಮಳೆಯು ನಿಯಮಿತವಾಗಿ ಬೀಳುವದಿಲ್ಲ. ಇದರಿಂದ ಒಂದೊಂದು ವರ್ಷ ರೈತನ ಪರಿಸ್ಥಿತಿಯು ಬಹಳ ಚಿಂತಾಜನಕವಾಗು ವದು. ಒಂದು ವರ್ಷ ಚೆನ್ನಾಗಿ ಬೆಳೆಯು ಬರದಿದ್ದರೂ ಅವನು ಚೆನ್ನಾಗಿ

ಜೀವನ ನಡಿಸುವಂತೆ ಅವನ ಪರಿಸ್ಥಿತಿಯನ್ನು ಸುಧಾರಿಸಬೇಕು. ಅವನ ಆರ್ಥಿಕ ಸ್ಥಿತಿಯು ಉತ್ತಮವಾಗಬೇಕು. ಅವನ ಆರ್ಥಿಕ ಸ್ಥಿತಿಯು ಉತ್ತಮಗೊಳ್ಳಬೇಕಾದರೆ ಭೂಮಿಯ ಒಡೆತನವು ಅವನದಾಗಬೇಕು. ರಶಿಯಾ ದೇಶದಲ್ಲಿ ಎಲ್ಲ ಭೂಮಿಯೂ ಸರಕಾರದ ಅಧೀನದಲ್ಲಿರುವದು. ಬಡವ ಶ್ರೀಮಂತರೆಂಬ ಭೇದವಿಲ್ಲದೆ ಎಲ್ಲರೂ ದುಡಿಯಬೇಕಾಗುವದು. ದುಡಿಯದೆ ಯಾರಿಗೂ ಹಣವು ದೊರೆಯಲಾರದು. ಒಬ್ಬರನ್ನು ಮತ್ತೊಬ್ಬರು ಸುಲಿಯಲು ಅವಕಾಶವೇ ಇಲ್ಲ. ಜಮೀನುದಾರರ ನಿರ್ಮೂಲನದಿಂದ ಸಮಾಜದಲ್ಲಿಯ ವೈಷಮ್ಯವು ನಾಶವಾಗುವದು.

ಬ್ರಿಟಿಶರು ತಮ್ಮ ಆಳಿಕೆಯಲ್ಲಿ ಜಮೀನುದಾರರಿಗೂ ಅರಸರಿಗೂ ಪ್ರೋತ್ಸಾಹ ಕೊಡುತ್ತಿದ್ದರು. ಇದಕ್ಕೆ ಕಾರಣವೆಂದರೆ ಜಮೀನುದಾರರೂ, ಅರಸರೂ ಬ್ರಿಟಿಶರ ರಾಜ್ಯ ಸತ್ತೆಗೆ ಆಧೀನರಾಗಿದ್ದರು. ಬ್ರಿಟಿಶರು ಇವರ ಸಹಾಯದಿಂದಲೇ ತಮ್ಮ ರಾಜ್ಯವನ್ನು ಹಿಂದುಸ್ತಾನದಲ್ಲಿ ಸ್ಥಿರ ಪಡಿಸಿದರು. ಚಿಕ್ಕಪುಟ್ಟ ಅರಸರೂ, ಜಮೀನುದಾರರೂ ನಾಶವಾದರೆ ತಮ್ಮ ಸಾಮ್ರಾಜ್ಯವು ನಾಶವಾಗುವದೆಂದು ಅವರು ಅರಿತಿದ್ದರು. ಅದ್ದರಿಂದ ಅವರು ಜಮೀನುದಾರರಿಗೆ ಮತ್ತು ಅರಸರಿಗೆ ಸಂರಕ್ಷಣೆಯನ್ನು ಕೊಡುತ್ತಿದ್ದರು. ಭಾರತವು ಪ್ರಜಾಪ್ರಭುತ್ವ ರಾಜ್ಯವಾಗಿರುವದರಿಂದ ಇಲ್ಲಿ ಅರಸರಿಗೂ, ಜಮೀನುದಾರರಿಗೂ ಸ್ಥಾನವೇ ಇರುವದಿಲ್ಲ. ಆದ್ದರಿಂದ ಸರಕಾರವು ಕೈಕೊಂಡಿರುವ ಜಮೀನುದಾರೀ ನಿರ್ಮೂಲನೆಗೆ ಪ್ರತಿಯೊಬ್ಬನೂ ಬೆಂಬಲ ಕೊಡುವದು ಅವಶ್ಯವಾಗಿದೆ.

## ೪೭. ಸಾಹಸವೇ ಜೀವನ

ನಮ್ಮ ಮನೆಯ ಕೆಲಸವನ್ನು ಮಾಡುವದಕ್ಕೂ ನಾವು ನಾಚುತ್ತೇವೆ. ಸುಶಿಕ್ಷಿತರಾದವರು ಶಾರೀರಿಕ ಶ್ರಮ ಮಾಡುವದೇ ತಪ್ಪು ಎಂದು ತಿಳಿದಿರುವರು. ಕೈಯಲ್ಲಿ ಒಂದು ಸಣ್ಣ ಚೀಲವನ್ನು ಹಿಡಿದರೂ ಅವರಿಗೆ ಅಪಮಾನವಾಗುವದು. ಬೌದ್ಧಿಕ ಶ್ರಮವೇ ಶ್ರೇಷ್ಠವಾದದ್ದೆಂದು ಅವರು ತಿಳಿದಿರುವರು. ಈ ಭಾವನೆಯನ್ನು ನಾವು ತೆಗೆದುಹಾಕಬೇಕು. ಬೌದ್ಧಿಕ ಶ್ರಮದಷ್ಟೇ ಶಾರೀರಿಕ ಶ್ರಮಕ್ಕೂ ಮಹತ್ವ ಕೊಡಬೇಕು. ಮಹಾತ್ಮಾ ಗಾಂಧಿಯವರು

ಪ್ರತಿಯೊಬ್ಬನೂ ದಿನಾಲು ಶಾರೀರಿಕ ಶ್ರಮದ ಕೆಲಸವನ್ನು ಮಾಡಲೇ ಬೇಕೆಂದು ಹೇಳಿರುವರು. ನಮ್ಮ ಶರೀರದ ಅವಯವಗಳನ್ನು ಉಪಯೋಗಿಸ ದಿದ್ದರೆ ಅವು ಬಲಹೀನವಾಗುವವು. ಮೋಟಾರುಗಳು ಬಂದಿರುವದರಿಂದ ನಮ್ಮ ಕಾಲಲ್ಲಿಯ ಶಕ್ತಿಯೇ ಹೋಗಿರುವದು. ಈ ವಾಹನಗಳು ಬರುವ ಪೂರ್ವದಲ್ಲಿ ಜನರು ಕಾಲು ನಡಿಗೆಯಿಂದ ಪ್ರವಾಸ ಮಾಡುತ್ತಿದ್ದರು. ಇದ ರಿಂದ ಅವರು ದೇಹದಿಂದ ಸದೃಢರಾಗಿದ್ದರು. ಈಗ ಹೊಸ ಹೊಸ ಶೋಧಗಳು ಆಗಿರುವದರಿಂದ ಶ್ರಮಪಡದೆ ಸುಖವನ್ನು ಅನುಭವಿಸಲು ಸಾಧ್ಯವಾಗಿರು ವದು. ಶ್ರಮಪಡದೆ ಸುಖವು ಯಾರಿಗೆ ಬೇಡ? ಆದರೆ ಇದರಿಂದ ನಮ್ಮ ಶರೀರ ಬಲವು ಕಡಿಮೆಯಾಗಿರುವದು. ನಮ್ಮ ಆರೋಗ್ಯವು ನಾಶವಾಗಿರು ವದು. ಸುಶಿಕ್ಷಿತರಾದ ತರುಣಿಯರು ವೈದ್ಯರ ಔಷಧದ ಮೇಲೆಯೇ ಜೀವಿ ಸುತ್ತಾರೆ. ಹಿಂದಿನ ಕಾಲದ ಸ್ತ್ರೀಯರು ಮುಂಜಾನೆ ಬೇಗನೆ ಎದ್ದು ಜೋಳ ಗೋದಿಗಳನ್ನು ಬೀಸುತ್ತಿದ್ದರು. ಅದರಿಂದ ಅವರಿಗೆ ವ್ಯಾಯಾಮ ವಾಗುತ್ತಿತ್ತು. ಈಗ ಎಲ್ಲ ಕಾಳುಗಳನ್ನೂ ನಾವು ಗಿರಣಿಗೆ ತೆಗೆದುಕೊಂಡು ಹೋಗುವೆವು. ಗಿರಣಿಯಲ್ಲಿ ಬೀಸುವದರಿಂದ ಅವುಗಳ ಸತ್ವವೇ ಹಾರಿ ಹೋಗುವದು. ಸತ್ವವಿಲ್ಲದ ಆಹಾರವನ್ನು ತಿನ್ನುವದರಿಂದ ನಮ್ಮ ಶರೀರವು ಬಲಗುಂದುವದು.

ಹಿಂದುಸ್ಥಾನದಲ್ಲಿಯ ಜನರ ಸರಾಸರಿ ಆಯುಷ್ಯವು ೨೫ ಇರುವದು. ಇಂಗ್ಲಂಡ, ಅಮೇರಿಕಾ ದೇಶಗಳಲ್ಲಿಯ ಸರಾಸರಿ ಆಯುಷ್ಯವು ೫೦ ರ ಮೇಲಿ ರುವದು. ಅಲ್ಲಿಯ ಜನರು ಆರೋಗ್ಯವಂತರೂ, ದೀರ್ಘಜೀವಿಗಳೂ ಆಗಿರು ವರು. ಆರೋಗ್ಯವಿಲ್ಲದೆ ನಾವು ಯಾವ ಸಾಹಸ ಕಾರ್ಯಗಳನ್ನೂ ಮಾಡ ಲಾರೆವು. ಮೊದಲು ನಾವು ಆರೋಗ್ಯವನ್ನು ಸಂಪಾದಿಸಬೇಕು. ಆರೋಗ್ಯ ವನ್ನು ಸಂಪಾದಿಸಬೇಕಾದರೆ ಪೌಷ್ಟಿಕವಾದ ಆಹಾರವನ್ನು ತೆಗೆದುಕೊಳ್ಳ ಬೇಕು. ಶಾರೀರಿಕ ಶ್ರಮ ಮಾಡದಿದ್ದರೆ ಪೌಷ್ಟಿಕವಾದ ಆಹಾರವು ಪಚನ ವಾಗುವದಿಲ್ಲ. ಪೌಷ್ಟಿಕ ಆಹಾರದಷ್ಟೇ ವ್ಯಾಯಾಮದ ಅವಶ್ಯಕತೆಯಿರು ವದು. ಶರೀರದಿಂದ ಗಟ್ಟಿಮುಟ್ಟಾದವನು ಯಾವ ತೊಂದರೆಗಳಿಗೂ ಹೆದರಲಾರನು. 'A sound mind in a sound body' ಎಂಬುದು ಶರೀರ ಸಂಪತ್ತಿನ ಮಹತ್ವವನ್ನು ತಿಳಿಸಿಕೊಡುತ್ತದೆ. ನಮ್ಮ ಶಿಕ್ಷಣದಲ್ಲಿ

ಶರೀರ ಸಂಪತ್ತಿನ ಬಗ್ಗೆ ಹೆಚ್ಚು ಲಕ್ಷ ಕೊಡಲಾಗಿಲ್ಲ. ಶಿಕ್ಷಣವೆಂದರೆ ಕೇವಲ ಓದುವದು ಮತ್ತು ಪರೀಕ್ಷೆ ಪಾಸಾಗುವದು ಎಂದು ನಾವು ತಿಳಿದಿರುವೆವು. ನಮ್ಮ ವಿದ್ಯಾರ್ಥಿಗಳು ಸಾಹಸಪ್ರಿಯರಾಗಬೇಕು.

ಇಂಗ್ಲಂಡ, ಜರ್ಮನಿ, ಜಪಾನ ಮುಂತಾದ ರಾಷ್ಟ್ರಗಳು ಮುಂದೆ ಬರಬೇಕಾದರೆ ಅಲ್ಲಿಯ ಜನರ ಸಾಹಸವೇ ಮುಖ್ಯ ಕಾರಣವು. ಅಮೇರಿಕಾ ದೇಶದ ಜನರು ಜಗತ್ತಿನ ಮೂಲೆಮೂಲೆಗಳಲ್ಲಿ ತಮ್ಮ ಅಂಗಡಿಗಳನ್ನು ತೆರೆದಿರುವರು. ಅಲ್ಲಿ ಸುಶಿಕ್ಷಿತರಾದವರೂ ವ್ಯಾಪಾರದಲ್ಲಿ ತೊಡಗುವರು; ವ್ಯಾಪಾರವು ಹೆಚ್ಚಾಗುವದಕ್ಕಾಗಿ ಹೊಸ ಹೊಸ ಸಾಮಾನುಗಳನ್ನು ಸಿದ್ಧಪಡಿಸುವರು; ವ್ಯಾಪಾರ ಮಾಡುವದಕ್ಕೆ ಬಹುದೂರದವರೆಗೆ ಹೋಗುವರು. ನಮ್ಮ ದೇಶದಲ್ಲಿಯ ತರುಣರಲ್ಲಿ ಸಾಹಸವು ಕಡಿಮೆಯಾಗಿದೆ. ಸರಕಾರೀ ನೌಕರಿಯನ್ನು ದೊರಕಿಸುವದೇ ಅವರ ಪರಮ ಧ್ಯೇಯವಾಗಿರುವದು. ವ್ಯಾಪಾರ ಮಾಡುವದೆಂದರೆ ತಮ್ಮ ಯೋಗ್ಯತೆಗೆ ಕುಂದು ಬರುವದೆಂದು ಅವರು ತಿಳಿದಿರುವರು. ಒಕ್ಕಲತನ ಮಾಡುವದಕ್ಕೆ ಸುಶಿಕ್ಷಿತರು ಒಪ್ಪುವದಿಲ್ಲ. ಎಲ್ಲರೂ ಸರಕಾರೀ ನೌಕರಿಗಾಗಿ ಕಾದು ಕುಳಿತರೆ ಸರಕಾರವು ಎಷ್ಟು ಜನರಿಗೆ ನೌಕರಿಯನ್ನು ಒದಗಿಸಿಕೊಡಬಲ್ಲದು? ತರುಣರಲ್ಲಿ ಸ್ವಾತಂತ್ರ್ಯ ಪ್ರೇಮವು ಬೆಳೆಯಬೇಕು. ಹೊಸ ಹೊಸ ಉದ್ಯೋಗಗಳನ್ನು ಅವರು ಹುಡುಕಿ ತೆಗೆಯಬೇಕು. ಬೇರೆ ಬೇರೆ ದೇಶಗಳನ್ನು ಸಂಚರಿಸಬೇಕು. ವೀರನಾದವನಿಗೆ ಇಡೀ ಜಗತ್ತೇ ಅವನ ಸ್ವಾಧೀನದಲ್ಲಿರುವದು. ಹೇಡಿಯಾಗಿ ಹದ್ದಿನಂತೆ ನೂರುವರ್ಷ ಬಾಳುವದಕ್ಕಿಂತ ಹುಲಿಯಾಗಿ ಮೂರುವರ್ಷ ಬಾಳುವದು ಲೇಸು.

ಎಷ್ಟು ದಿವಸ ಬದುಕಿದರೂ ಮರಣವು ತಪ್ಪಿದ್ದಲ್ಲ. ಅಂದಮೇಲೆ ಮರಣಕ್ಕೆ ಅಂಜಿ ಹೇಡಿಯಂತೆ ಯಾಕೆ ಜೀವಿಸಬೇಕು? ನಾವು ಮರಣ ಹೊಂದಿದರೂ ನಮ್ಮ ಕೀರ್ತಿಯು ಈ ಜಗತ್ತಿನಲ್ಲಿ ಉಳಿಯಬೇಕು. ಶಿವಾಜಿ, ರಾಣಾಪ್ರತಾಪ, ಗೌತಮ ಬುದ್ಧ, ಮಹಾತ್ಮಾಗಾಂಧಿ, ಯೇಸು ಕ್ರಿಸ್ತ ಇವರನ್ನು ಜನರು ಮರೆಯುವರೇ? ಮರಣಕ್ಕೆ ಅಂಜದವನೇ ಸಾಹಸದ ಕೆಲಸಗಳನ್ನು ಮಾಡಬಲ್ಲನು. ಕ್ಷಮೆ ಬೇಡಿದ್ದರೆ ಸಾಕ್ರೆಟೀಸನನ್ನು ಬಿಟ್ಟು ಬಿಡುತ್ತಿದ್ದರು. ಆದರೆ ಮಹಾಜ್ಞಾನಿಯಾದ ಅವನು ಜೀವವನ್ನು ಉಳಿಸಿ

ಕೊಳ್ಳುವದಕ್ಕಾಗಿ ಕ್ಷಮೆ ಬೇಡಲಿಲ್ಲ. ಸತ್ಯವಂತರಾದವರು ಜೀವದ ಬಗ್ಗೆ ಎಂದಿಗೂ ಚಿಂತೆಮಾಡುವದಿಲ್ಲ. ಗಾಂಧೀಜಿಯವರು ಪರಮಾತ್ಮನಲ್ಲಿ ಅಚಲ ವಾದ ವಿಶ್ವಾಸವನ್ನಿಡುತ್ತಿದ್ದರು. ಅವರನ್ನು ಕೊಲ್ಲುವದಕ್ಕಾಗಿ ಬಹಳ ದಿವಸಗಳಿಂದ ಒಳಸಂಚು ನಡೆದಿತ್ತು. ಸರಕಾರವು ಗಾಂಧೀಜಿಯವರ ರಕ್ಷಣೆಗಾಗಿ ಪೋಲೀಸರನ್ನು ಇಡಲು ಅವರ ಅಪ್ಪಣೆಯನ್ನು ಕೇಳಿತು. ಅದಕ್ಕೆ ಗಾಂಧೀಜಿಯವರು ಒಪ್ಪಲಿಲ್ಲ. ನನ್ನನ್ನು ಕಾಯುವವನು ಪರ ಮಾತ್ಮನಿರುವನು ಎಂದು ಹೇಳಿದರು. ಮರಣಕ್ಕೆ ಹೆದರದೆ ತಮ್ಮ ತತ್ವದಂತೆ ನಡೆದರು. ಮಹಾ ಸಾಹಸಿಗಳಾದ ಅವರು ಸ್ವಾತಂತ್ರ್ಯವು ದೊರೆಯುವ ವರೆಗೆ ಅವ್ಯಾಹತವಾಗಿ ಕಾದಿದರು. ಬಲಾಢ್ಯವಾದ ಬ್ರಿಟಿಶ ಸಾಮ್ರಾಜ್ಯವು ಅವರಿಗೆ ಸೋಲಬೇಕಾಯಿತು! ಸುಭಾಸಚಂದ್ರರ ಕಾರ್ಯವನ್ನು ನೆನೆದೇ ಕೊಂಡರೆ ಮೈಮೇಲೆ ರೋಮಾಂಚನಗಳೇಳುವವು. ಅಂಥವರ ಜೀವನವೆ ನಮ್ಮ ಆದರ್ಶವಾಗಿರಬೇಕು. ಇಲ್ಲದಿದ್ದರೆ ಕುರಿಯಂತೆ ಜಗತ್ತಿನಲ್ಲಿ ಜೀವಿಸಿ ಎಷ್ಟು ಸುಖಪಡೆದರೂ ಅದು ವ್ಯರ್ಥವಾದದ್ದು. ಬಾಳು ಕ್ಷಣವಾಗಿದ್ದರೂ ಮಿಂಚಿನಂತೆ ಪ್ರಕಾಶಮಯವಾಗಿರತಕ್ಕದು.

ಹೂವಿನ ಜೀವಮಾನ ಒಂದು ದಿವಸ ಮಾತ್ರ. ಆದರೂ ಅದು ತನ್ನ ಜೀವನವನ್ನು ಅತ್ಯಂತ ಆನಂದದಿಂದ ಕಳೆಯುವದು. ನಮಗೆ ನೂರುವರ್ಷ ಆಯುಷ್ಯವಿದ್ದರೂ ನಾವು ಕವಿಯು ಹೇಳಿದಂತೆ 'We look before and after and pine for what is not;' ಸದಾವಕಾಲವೂ ಚಿಂತೆಯಲ್ಲಿಯೇ ನಮ್ಮ ಜೀವನವನ್ನು ಹಾಳು ಮಾಡುವೆವು. ಪಶುಪಕ್ಷಿಗಳೂ ನಮಗಿಂತ ಆನಂದದಿಂದಿರುವವು. ಮನುಷ್ಯನು ಮಾತ್ರ ಎಷ್ಟು ಸುಖ ಸೌಕರ್ಯಗಳು ದೊರೆತರೂ ದುಃಖಿಯಾಗಿರುವನು. ಸಂಕಟಗಳು ಬಂದಾ ಗಲೂ ನಾವು ಆನಂದದಿಂದಿರಬೇಕು. ಭಗವದ್ ಗೀತೆಯಲ್ಲಿ ಕೃಷ್ಣನು ಜ್ಞಾನಿಯ ವರ್ಣನೆಯನ್ನು ಮಾಡುವಾಗ ಅವನು"ಸುಖ ದುಃಖಗಳಲ್ಲಿ ಒಂದೇ ರೀತಿಯಾಗಿರುವನು. ದುಃಖ ಬಂದಾಗಲೂ ಅವನು ಎದೆಗುಂದುವದಿಲ್ಲ. ಯಾವಾಗಲೂ ಅವನು ಆನಂದದಿಂದಲೇ ಕಾಲಕಳೆಯುವನು" ಎಂದಿರುವನು.

ಮಹಾಕಾರ್ಯಗಳು ನೆರವೇರಬೇಕಾದರೆ ಸಾಹಸವಿಲ್ಲದೆ ಸಾಧ್ಯವಿಲ್ಲ. ನಮ್ಮ ಸ್ವಾತಂತ್ರ್ಯದ ಉದಾಹರಣೆಯನ್ನೇ ತೆಗೆದುಕೊಳ್ಳಬಹುದು. ನಮ್ಮ

ಸ್ವಾತಂತ್ರ್ಯವನ್ನು ಪಡೆಯುವದಕ್ಕೆ ಎಷ್ಟು ಜನರು ಸೆರೆಮನೆಗೆ ತೆರಳಿದರು. ಎಷ್ಟು ಜನರು ತಮ್ಮ ಪ್ರಾಣವನ್ನು ಕೊಟ್ಟರು. ಸ್ವಾತಂತ್ರ್ಯಕ್ಕಾಗಿ ಸಾವಿರಾರು ಜನರು ತಮ್ಮ ಜೀವನವನ್ನೇ ಹಾಳುಮಾಡಿಕೊಂಡರು. ತಮ್ಮ ಜೀವನದಲ್ಲಿ ಅವರು ಸುಖವೆಂಬುದನ್ನೇ ಕಾಣಲಿಲ್ಲ. ಅವರೆಲ್ಲರ ತ್ಯಾಗದಿಂದಲೇ ನಮಗೆ ಸ್ವಾತಂತ್ರ್ಯವು ದೊರೆತಿರುವದು. ಮುಂದಿನ ಪೀಳಿಗೆಯ ಸುಖಕ್ಕಾಗಿ ಅವರು ಶ್ರಮಪಟ್ಟರು. ಅವರ ಶ್ರಮದ ಫಲವನ್ನು ನಾವು ಉಣ್ಣುತ್ತಿರುವೆವು. ಅವರ ಸಾಹಸ ಕಾರ್ಯಗಳು ನಮಗೆ ಯಾವಾಗಲೂ ಸ್ಫೂರ್ತಿದಾಯಕವಾಗಿವೆ. ಯಾವ ಆಶೆಯೂ ಇಲ್ಲದೆ ಅವರು ಯಾತನೆಗಳನ್ನು ಅನುಭವಿಸಿದರು. ವಿಜ್ಞಾನದ ಅನೇಕ ಶೋಧಗಳನ್ನು ಮಾಡಿದ ಮಹಾಪುರುಷರು ತಮ್ಮ ಜೀವನವೆಲ್ಲವನ್ನೂ ಅದಕ್ಕಾಗಿಯೇ ಮೀಸಲಾಗಿಟ್ಟಿದ್ದರು. ಶೋಧವನ್ನು ಮಾಡುವದರಲ್ಲಿಯೇ ಅವರು ತಮ್ಮ ಜೀವನವನ್ನು ವ್ಯಯಮಾಡಿದರು. ಅವರ ಪುಣ್ಯದಿಂದಲೇ ನಾವು ಸುಖಿಗಳಾಗಿರುವೆವು. ಇಂಥ ಅನೇಕ ಮಹಾಪುರುಷರ ಜೀವನವನ್ನು ನಾವಿಂದು ನೆನೆಯಬೇಕಾಗಿದೆ. ನಮ್ಮ ಜೀವನವನ್ನು ಸುಖಮಯ ಮಾಡುವದಕ್ಕಾಗಿ ಅವರು ಅವಿಶ್ರಾಂತವಾಗಿ ದುಡಿದರು. ಅವರಿಗೆ ಮತ್ತೆ ಯಾವ ಉದ್ದೇಶವೂ ಇರಲಿಲ್ಲ; ಮಾನವ ಕಲ್ಯಾಣವೇ ಅವರ ಧ್ಯೇಯವಾಗಿತ್ತು. ಈ ಸಾಹಸಿಗಳ ಜೀವನವನ್ನು ನಾವು ಅನುಕರಿಸಬೇಕು.

## ೪೮. ಪಂಚವಾರ್ಷಿಕ ಯೋಜನೆ

ನಮ್ಮ ನಾಡಿನಲ್ಲಿ ಬೇಕಾದಷ್ಟು ನೈಸರ್ಗಿಕ ಸಂಪತ್ತು ಇರುವದು. ನಾವು ಅದರ ಉಪಯೋಗವನ್ನು ಮಾಡಿಕೊಂಡಿಲ್ಲ. ನದಿಗಳ ಉಪಯೋಗವನ್ನೂ ಮಾಡಿಕೊಂಡಿರುವದಿಲ್ಲ. ಇದರಿಂದ ಬಹಳ ಭೂಮಿಯು ನೀರಿನ ಪೂರೈಕೆಯು ಇಲ್ಲದೆ ಬಂಜೆ ಭೂಮಿಯಾಗಿದೆ. ಕಾರಖಾನೆಗಳ ಉಪಯೋಗಕ್ಕಾಗಿ ನಾವು ವಿದ್ಯುತ್ ಶಕ್ತಿಯನ್ನು ಉಪಯೋಗ ಮಾಡಬೇಕು. ನದಿಗಳ ಸಹಾಯದಿಂದ ವಿದ್ಯುತ್ತನ್ನು ನಿರ್ಮಿಸಬೇಕು. ದೇಶದಲ್ಲಿಯ ನಿರುದ್ಯೋಗ ಸಮಸ್ಯೆಯನ್ನು ಬಿಡಿಸಬೇಕು. ಈ ಎಲ್ಲ ಸಮಸ್ಯೆಗಳನ್ನು ಬಿಡಿಸುವದರ ಸಲುವಾಗಿ ಸರಕಾರವು ೧೯೫೦ ರಲ್ಲಿ ಒಂದು ಸಮಿತಿಯನ್ನು ನಿಯಮಿಸಿತು. ಈ ಸಮಿತಿಯವರು ಐದು ವರ್ಷಗಳಲ್ಲಿ ಯಾವ ಯಾವ ಸುಧಾರಣೆ

ಗಳನ್ನು ಮಾಡಬೇಕು ಎಂಬುದರ ಬಗ್ಗೆ ಒಂದು ವರದಿಯನ್ನು ಸಾದರಪಡಿಸಿರುವರು. ಆ ವರದಿಯ ಪ್ರಕಾರವಾಗಿಯೇ ಸರಕಾರವು ತನ್ನ ಮುಂದಿನ ಎಲ್ಲ ಕಾರ್ಯಗಳನ್ನು ನೆರವೇರಿಸುವದು. ಐದು ವರ್ಷಗಳಲ್ಲಿ ಭಾರತವನ್ನು ಯಾವ ರೀತಿಯಿಂದ ಉನ್ನತಸ್ಥಿತಿಗೆ ಒಯ್ಯಬಹುದು ಎಂಬುದನ್ನು ಸಮಿತಿಯು ಪೂರ್ಣವಾಗಿ ವಿಚಾರ ಮಾಡಿರುವದು. ಐದು ವರ್ಷಗಳಲ್ಲಿ೨೦೬೮.೭೮ ಕೋಟಿ ರೂಪಾಯಿಗಳನ್ನು ಭಾರತ ಸರಕಾರವು ದೇಶದ ಅಭಿವೃದ್ಧಿಗಾಗಿ ವೆಚ್ಚಮಾಡುವದು. ಈ ಹಣವನ್ನು ಎಲ್ಲಿಂದ ತರುವದು? ರೇಲ್ವೆ ಆದಾಯ ಸರಕಾರೀ ಉಳಿತಾಯ, ಸಾರ್ವಜನಿಕರಿಂದ ಸಾಲ ಇವುಗಳಿಂದ ೧೨೫೮ ಕೋಟಿ ರೂಪಾಯಿಗಳು ಸಂಗ್ರಹವಾಗುವವೆಂದು ಲೆಕ್ಕ ಹಾಕಲಾಗಿದೆ. ಇವಲ್ಲದೆ ಜಾಗತಿಕ ಬ್ಯಾಂಕ, ಅಮೇರಿಕಾ, ಕಾನಡಾ, ಆಸ್ಟ್ರೇಲಿಯಾ, ನ್ಯೂಝಿಲಂಡ ಮುಂತಾದ ದೇಶಗಳಿಂದ ಸಾಲ ಪಡೆಯುವದು ಇಲ್ಲವೆ ದೇಶದಲ್ಲಿ ಹೆಚ್ಚಿನ ಕರ ಇಲ್ಲವೆ ಸಾಲದ ರೂಪದಿಂದ ಉಳಿದ ಹಣವನ್ನು ತುಂಬಿಕೊಳ್ಳುವದು. ೧೯೫೨ ನೇ ಇಸ್ವಿಯವರೆಗೆ ಭಾರತ ಸರಕಾರವು ಬೇರೆ ದೇಶಗಳಿಂದ ೧೫೬ ಕೋಟಿ ರೂಪಾಯಿಗಳ ಸಹಾಯವನ್ನು ಪಡೆದಿರುವದು.

ಹಿಂದುಸ್ತಾನದ ಮುಖ್ಯ ಉದ್ಯೋಗವು ಒಕ್ಕಲತನವು. ನಮ್ಮ ಒಕ್ಕಲತನವು ಅಭಿವೃದ್ಧಿಯಾಗದಿದ್ದರೆ ನಾವು ಆಹಾರದ ಸಲುವಾಗಿ ಬೇರೆ ದೇಶದವರ ಮೇಲೆ ಅವಲಂಬಿಸಬೇಕಾಗುವದು. ನಾವು ಭೂಮಿಯ ಬಗ್ಗೆ ಹೆಚ್ಚು ಲಕ್ಷಕೊಡಬೇಕಾಗಿರುವದು. ಬೇರೆ ದೇಶಗಳ ಸಂಗಡ ನಮ್ಮ ದೇಶದ ಹುಟ್ಟುವಳಿಯನ್ನು ಹೋಲಿಸಿದರೆ ನಮ್ಮ ದೇಶದಲ್ಲಿಯ ಹುಟ್ಟುವಳಿಯು ಒಂದು ಎಕರೆಗೆ ಬೇರೆ ದೇಶಗಳಿಗಿಂತ ಕಡಿಮೆಯಿರುವದು ಕಂಡು ಬರುವದು. ಇದಕ್ಕೆ ಕಾರಣವೆಂದರೆ ಹೊಸಪದ್ಧತಿಯ ರೀತಿಯಿಂದ ನಾವು ಒಕ್ಕಲತನ ಮಾಡದೆ ಇರುವದು ಆದ್ದರಿಂದ ಒಕ್ಕಲತನದ ಸುಧಾರಣೆಗಾಗಿ ನಾವು ಪ್ರಯತ್ನಿಸಬೇಕಾಗಿದೆ. ನಮ್ಮ ಆಹಾರದ ಉತ್ಪಾದನೆಯನ್ನು ಹೆಚ್ಚಿಸುವದಕ್ಕಾಗಿ ಎಲ್ಲ ರೀತಿಯಿಂದಲೂ ಪ್ರಯತ್ನಿಸಬೇಕು ಪಂಚವಾರ್ಷಿಕ ಯೋಜನೆಯಲ್ಲಿ ಒಕ್ಕಲತನಕ್ಕೆ ವಿಶೇಷ ಮಹತ್ವ ಕೊಡಲಾಗಿರುವದು. ಯಾಕಂದರೆ ನಾವು ಆಹಾರ ದೃಷ್ಟಿಯಿಂದ ಸ್ವಾವಲಂಬಿಗಳಾಗಬೇಕಾಗಿರುವದು. ಒಕ್ಕಲತನ ಸುಧಾರಣೆಗಾಗಿ ಸರಕಾರವು ಮುಂದಿನಂತೆ ಹಣ ಖರ್ಚು ಮಾಡುವದು.

ಸಮಾಜವಿಕಾಸ ಯೋಜನೆ ೯೦ ಕೋಟಿ ರೂಪಾಯಿ
ಚಿಕ್ಕನೀರಾವರಿ ಯೋಜನೆಗೆ ೩೦ ಕೋಟಿ ರೂಪಾಯಿ
೧೯೫೧-೫೨ ರಲ್ಲಿ ಆಹಾರ ಬೆಳೆಯಿರಿ.
ಆಂದೋಲನ ೧೦ ಕೋಟಿ ರೂ.
ಟ್ಯೂಬು ಬಾವಿಗಳ ರಚನೆಗಾಗಿ ೬ ಕೋಟಿ ರೂ.
ರಾಷ್ಟ್ರೀಯ ವಿಸ್ತರಣ ಸಂಘಟನೆ ೩ ಕೋಟಿ ರೂ.

ಒಕ್ಕಲತನದ ಉತ್ಪಾದನೆಗಾಗಿ ಆಯೋಗವು ಮಣ್ಣಿನ ಸಂರಕ್ಷಣೆ, ಒಕ್ಕಲತನದ ಪೇಟಿ, ಒಕ್ಕಲತನಕ್ಕಾಗಿ ಹಣದ ನೆರವು, ಹೈನ, ಒಕ್ಕಲಿಗರು ಕೈಕೊಳ್ಳಬೇಕಾದ ಕಾರ್ಯಕ್ರಮ ಇವುಗಳ ಬಗ್ಗೆ ವಿಶೇಷ ಸೂಚನೆಗಳನ್ನು ಕೊಟ್ಟಿರುವದು. ಒಕ್ಕಲತನ ಹುಟ್ಟುವಳಿ, ಭೂಸುಧಾರಣೆ, ಸರಕಾರೀ ತಳ ಹದಿಯ ಮೇಲೆ ಗ್ರಾಮ ಸಂಘಟನೆ, ಗ್ರಾಮೋದ್ಯೋಗಗಳ ಅಭಿವೃದ್ಧಿ, ಹೊಸ ಕಾಮಗಿರಿಗಳ ರಚನೆ ಇತ್ಯಾದಿ ವಿಷಯಗಳಲ್ಲಿ ಹಾಕಿಕೊಟ್ಟ ಕಾರ್ಯ ಕ್ರಮದಿಂದ ಕೃಷಿಕಾರ್ಮಿಕರಿಗೆ ಪೂರ್ಣ ಉದ್ಯೋಗ ದೊರೆಯುವಂತಾಗುವ ದೆಂದು ಆಯೋಗವು ಅಭಿಪ್ರಾಯಪಟ್ಟಿದೆ. ಭೂಮಿಯಿಲ್ಲದೆ ಕೃಷಿಕಾರ್ಮಿಕ ರನ್ನು ಪುನರ್ನೆಲಿಸಲು ಕೇಂದ್ರ ಸರಕಾರದ ಯೋಜನೆಯಲ್ಲಿ ೨ ಕೋಟಿ ರೂಪಾಯಿಗಳನ್ನು ಪ್ರತ್ಯೇಕ ತೆಗೆದಿರಿಸಿದೆ. ಒಕ್ಕಲಿಗರಿಗೆ ಅಲ್ಪಾವಧಿ, ಮಧ್ಯ ಮಾವಧಿ ಮತ್ತು ದೀರ್ಘಾವಧಿ ಸಾಲದೊರೆಯಬೇಕೆಂದು ಆಯೋಗವು ಸ್ಪಷ್ಟಪಡಿಸಿರುವದು. ಇದರಿಂದ ಒಕ್ಕಲತನದಲ್ಲಿ ಸುಧಾರಣೆಯನ್ನು ಮಾಡಿ ಕೊಳ್ಳಲು ಅವರಿಗೆ ಸಾಧ್ಯವಾಗುವದು.

ಹಿಂದುಸ್ತಾನದ ಬಹಳ ಅರಣ್ಯ ಸಂಪತ್ತು ನಾಶವಾಗಿರುವದು; ಅರಣ್ಯ ವನ್ನು ಬೆಳೆಸದೆ ನಾವು ಹೀಗೆಯೇ ನಾಶ ಮಾಡುತ್ತ ಹೋದರೆ ನಮ್ಮ ನಾಡು ಬಂಜರು ಭೂಮಿಯಾಗಬಹುದು. ಅರಣ್ಯವು ನಾಶವಾದರೆ ಮಳೆಯು ಬೀಳ ಲಾರದು; ಮಳೆಯಿಲ್ಲದಿದ್ದರೆ ಬೆಳೆಯು ಬರಲಾರದು. ಔಷಧಗಳಿಗಾಗಿಯೂ ಅರಣ್ಯವು ಬೇಕು. ಆದ್ದರಿಂದ ಆಯೋಗವು ಅರಣ್ಯವನ್ನು ಬೆಳೆಸುವದರ ಕಡೆಗೆ ತನ್ನ ಲಕ್ಷವನ್ನು ಹಾಕಿರುವದು. ಯೋಜನೆಯು ಪೂರ್ತಿಗೊಳ್ಳುವ ಹೊತ್ತಿಗೆ ಕಟ್ಟಿಗೆಯ ಪೂರೈಕೆಯು ೧೮ ಲಕ್ಷ ಟನ್ನಿನಿಂದ ೨೦ ಲಕ್ಷ ಟನ್ನು ಅಂದರೆ ೧೦೦ ಕ್ಕೆ ೧೧ ರಂತೆ ಹೆಚ್ಚಾಗುವದು.

ಪಂಚವಾರ್ಷಿಕ ಯೋಜನೆಯು ಸಮಾಜವಿಕಾಸಕ್ಕೆ ಅತ್ಯಂತ ಮಹತ್ವ ಕೊಟ್ಟಿರುವದು. ಸಮಾಜ ವಿಕಾಸ ಪದ್ಧತಿಯಿಂದ ಗ್ರಾಮೀಣ ವಿಸ್ತರಣೆ ಯನ್ನು ಸಾಧನವಾಗಿಟ್ಟುಕೊಂಡು ಹಳ್ಳಿಗಳ ಆರ್ಥಿಕ ಹಾಗೂ ಸಾಮಾಜಿಕ ರೂಪಾಂತರಗಳನ್ನು ಸಾಧಿಸಬಯಸುತ್ತದೆ. ಪ್ರತಿಯೊಂದು ಸಮಾಜ ವಿಕಾಸ ಯೋಜನೆಯಲ್ಲಿ ೪೫೦ ರಿಂದ ೫೦೦ ಚೌರಸ ಮೈಲು ಕ್ಷೇತ್ರವಿದ್ದು ಅದರಲ್ಲಿ ಸುಮಾರು ೩೦೦ ಹಳ್ಳಿಗಳು ಸಮಾವೇಶವಾಗುತ್ತವೆ. ಇವುಗಳಲ್ಲಿ ೧೫೦೦೦೦ ಎಕರೆ ಸಾಗು ಕ್ಷೇತ್ರ ಹಾಗು ೨ ಲಕ್ಷ ಜನಸಂಖ್ಯೆ ಇರುತ್ತದೆ. ಯೋಜನಾ ಕ್ಷೇತ್ರದಲ್ಲಿ ೧೦೦ ಹಳ್ಳಿಗಳ ಮೂರು ಗುಂಪುಗಳನ್ನು ಮಾಡಲಾಗಿದೆ ಈ ಕಾರ್ಯಕ್ರಮದಲ್ಲಿ ಮುಖ್ಯವಾಗಿ ಒಕ್ಕಲತನ, ರಸ್ತೆ, ಶಿಕ್ಷಣ, ಆರೋಗ್ಯ, ಪೂರಕ ಉದ್ಯೋಗ, ವಸತಿ, ಸಮಾಜ ಕಲ್ಯಾಣ ಮುಂತಾದ ವಿಷಯಗಳನ್ನು ಕೈಕೊಳ್ಳಲಾಗುವದು. ಮಾದರಿಗಾಗಿ ಕೆಲವು ಹಳ್ಳಿಗಳನ್ನು ಆರಿಸಿಕೊಂಡು ಹಳ್ಳಿಗಳನ್ನು ಹೇಗೆ ಸುಧಾರಣೆ ಮಾಡಬೇಕು ಎಂಬುದನ್ನು ಸರಕಾರ ದವರು ಮಾಡಿ ತೋರಿಸುವರು. ಜನತೆಯು ಪ್ರತ್ಯಕ್ಷಭಾಗವಹಿಸುವದರಿಂದಲೇ ಈಕಾರ್ಯಕ್ರಮವು ಯಶಸ್ವಿಯಾಗಬಲ್ಲದು.

ಸಹಕಾರೀ ಬೇಸಾಯ ಹಾಗು ಸಹಕಾರೀ ಚಟುವಟಿಕೆಗಳ ವಿಸ್ತರಣೆ ಯಿಂದ ಸಾಮಾನ್ಯವಾಗಿ ಹಳ್ಳಿಯ ಆರ್ಥಿಕ ಹಾಗು ಸಾಮಾಜಿಕ ಜೀವನದ ವಿಕಾಸಕ್ಕೆ ತುಂಬಾ ನೆರವು ದೊರೆಯುವದು. ಹಾಗು ಚಿಕ್ಕ ಪುಟ್ಟ ರೈತರಿಗೆ ಅದರಿಂದ ಲಾಭವಾಗುವದು. ಹಳ್ಳಿಯ ಅಭಿವೃದ್ಧಿಯು ಗ್ರಾಮಪಂಚಾಯತಿ ಯಿಂದಲೇ ಸಾಧ್ಯವಾಗುವದು. ಭಾರತದಲ್ಲಿ ಗ್ರಾಮಪಂಚಾಯತಿಗಳೇ ಹಳ್ಳಿಯ ಆಡಳಿತೆಯನ್ನು ನಡಿಸುತ್ತಿದ್ದವು. ಹಳ್ಳಿಗಳಲ್ಲಿಯ ಸಮಸ್ಯೆಗಳನ್ನು ಗ್ರಾಮಪಂಚಾಯತಿಗಳೇ ಚೆನ್ನಾಗಿ ತಿಳಿದುಕೊಳ್ಳಬಲ್ಲವು. ಹೊಲ ಸಾಗುವಳಿ, ಕಾಯಿದೆಯ ಅಮಲು ಬಜಾವಣಿ, ಭೂಮಿಯಿಲ್ಲದ ಕೂಲಿಕಾರರ ಹಿತರಕ್ಷಣೆ, ದೊಡ್ಡ ದೊಡ್ಡ ಹೊಲದೊಡೆಯರಿಂದ ಕಸಿದುಕೊಂಡ ಭೂಮಿಯನ್ನು ಹಾಗು ಹೊಸದಾಗಿ ಸಾಗು ಮಾಡುವದಕ್ಕಾಗಿ ಬೀಳು ಭೂಮಿಯನ್ನು ಒಪ್ಪಿಸಿಕೊಡಲು ಜನರ ಆಯ್ಕೆ ಇತ್ಯಾದಿ ಕೆಲಸಗಳನ್ನು ಗ್ರಾಮಪಂಚಾಯತಿ ಗಳೇ ಸಮರ್ಥವಾಗಿ ಮಾಡುವವು.

ಸಹಕಾರಿ ಗ್ರಾಮ ವ್ಯವಸ್ಥೆಯ ಮೂಲ ಉದ್ದೇಶವು ಹಳ್ಳಿಯ ಭೂಮಿ ಹಾಗು ಇತರ ಸಾಧನ ಸಂಪತ್ತು ಇವುಗಳನ್ನು ಇಡೀ ಹಳ್ಳಿಯ ಹಿತದ ದೃಷ್ಟಿಯಿಂದ ಸಂಘಟಿಸಲ್ಪಟ್ಟು ಅಭಿವೃದ್ಧಿ ಗೊಳಿಸಲ್ಪಡುವದಾಗಿದೆ. ಭೂ ವ್ಯವಸ್ಥೆ ಕಾಯಿದೆಯು, ಹಳ್ಳಿಯ ಇಡೀ ಭೂಮಿಯನ್ನು ಒಂದೇ ಹೊಲವೆಂದು ಭಾವಿಸಿ ವ್ಯವಸ್ಥೆ ಮಾಡಲು ಹಳ್ಳಿಯ ಸಮಾಜಕ್ಕೆ ಅನುಕೂಲ ಮಾಡಿಕೊಡುತ್ತದೆ. ತಂತ್ರಗಳು ಬೆಳೆದಂತೆ, ಬೇಸಾಯವಲ್ಲದ ಇತರ ದಂಧೆಗಳಲ್ಲಿ ಉದ್ಯೋಗ ದೊರೆಯಲಾರಂಭಿಸಿದಂತೆ ಸಹಕಾರೀ ತಳಹದಿಯ ಮೇಲೆ ಹೆಚ್ಚು ಹೆಚ್ಚು ಕಾರ್ಯಗಳನ್ನು ಕೈಕೊಳ್ಳಬಹುದು. ಹಳ್ಳಿಗಳ ಸುಧಾರಣೆಯಾಗಬೇಕಾದರೆ ಸಹಕಾರಿ ಗ್ರಾಮ ವ್ಯವಸ್ಥೆಯ ಆದರ್ಶದ ಕಡೆಗೆ ಕಾರ್ಯ ಸಾಗಿಸುವದು ಮಹತ್ವದ್ದಾಗಿರುವದು. ಇದರಿಂದ ಸಧ್ಯದ ಸಾಮಾಜಿಕ ಆರ್ಥಿಕ ವಿಷಮತೆಗಳೂ, ಬಡತನ, ಜಾತಿ, ಅಂತಸ್ತುಗಳೂ ಇಲ್ಲದಂತಾಗುವವು.

ದೇಶದ ತುಂಬೆಲ್ಲ ಕೈಕೊಳ್ಳಬೇಕೆಂದೆಣಿಸಿರುವ ಹೊಸ ನೀರಾವರಿ ಮತ್ತು ವಿದ್ಯುತ್ ಯೋಜನೆಗಳನ್ನು ಪರಿಶೀಲಿಸಿದಾಗ ಅವುಗಳನ್ನು ಕೃತಿಗಿಳಿಸಲು ೨೦೦೦ ಕೋಟಿ ರೂ. ವೆಚ್ಚ ಬರುವದೆಂದು ಅಂದಾಜು ಮಾಡಲಾಗಿದೆ. ಈ ಯೋಜನೆಯಿಂದ ೪ ಕೋಟಿ ೫೦ ಲಕ್ಷ ಎಕರೆ ಭೂಮಿಗೆ ನೀರಿನ ಆಸರ ದೊರೆಯುವದು. ೭೦ ಲಕ್ಷ ಕಿ. ವ್ಯಾ. ವಿದ್ಯುತ್ ಶಕ್ತಿಯು ಉತ್ಪಾದನೆಯಾಗುವದು. ಇದರಿಂದ ನಮ್ಮ ಹುಟ್ಟುವಳಿಯು ಹೆಚ್ಚಾಗುವದಲ್ಲದೆ ಅನೇಕ ಚಿಕ್ಕಪುಟ್ಟ ಉದ್ಯೋಗಗಳನ್ನು ನಡಿಸಲು ಅನುಕೂಲವಾಗುವದು. ಜನರ ಜೀವನ ಮಟ್ಟವು ಉನ್ನತವಾಗುವದು. ಸರಕಾರವು ಎಲ್ಲ ನೀರಾವರಿ ಯೋಜನೆಗಳನ್ನು ಒಮ್ಮೆಲೆ ಕೈಕೊಳ್ಳುವದಿಲ್ಲ. ೧೯೫೧ ರಲ್ಲಿ ಪ್ರಾರಂಭವಾಗಿರುವ ನೀರಾವರಿ ಯೋಜನೆಗಳನ್ನು ಮೊದಲು ಪೂರ್ತಿಗೊಳಿಸುವದು. ಹೊಸ ಯೋಜನೆಗಳನ್ನು ಮೊದಲಿನ ಮೂರು ವರ್ಷಗಳಲ್ಲಿ ಕೈಕೊಳ್ಳುವದು ಸಾಧ್ಯವಿಲ್ಲೆಂದು ಆಯೋಗವು ಹೇಳಿರುವದು.

ಗ್ರಾಮೋದ್ಯೋಗ ಹಾಗು ಇತರ ಚಿಕ್ಕಪುಟ್ಟ ಉದ್ದಿಮೆಗಳ ಸುಧಾರಣೆಗಾಗಿ ೧೫ ಕೋಟಿ ರೂ. ಗಳನ್ನು ಒದಗಿಸಲಾಗಿದೆ. ಗ್ರಾಮೋದ್ಯೋಗಗಳ ಅಭಿವೃದ್ಧಿ ಕಾರ್ಯಕ್ರಮವನ್ನು ಪ್ರಾಮುಖ್ಯವಾಗಿ ಸ್ಥಾನಿಕ ಪ್ರಯತ್ನ

ಹಾಗು ಸಹಕಾರಗಳು ಕುದುರುವದಕ್ಕೆ ಅನುಕೂಲವಾದ ವಾತಾವರಣ ಹುಟ್ಟಿ, ಅವು ಯಶಸ್ವಿಯಾಗುವ ಸಂಭವ ಹೆಚ್ಚುವಂತೆ ರಚಿಸಬೇಕು. ಹಿಂದೆ ಗ್ರಾಮೋದ್ಯೋಗಗಳು ಅವನತಿ ಹೊಂದಲು ಏನು ಕಾರಣವಾಯಿತು ಎಂಬು ದನ್ನು ಹುಡುಕಿ ತೆಗೆದು ಅವುಗಳ ಅಭಿವೃದ್ಧಿಯಾಗುವಂತೆ ಪ್ರಯತ್ನಿಸಬೇಕು. ದೊಡ್ಡ ಪ್ರಮಾಣದ ಉದ್ದಿಮೆಗಳ ಬೆಳವಣಿಗೆಯಿಂದ ಗ್ರಾಮೋದ್ಯೋಗಗಳು ನಾಶವಾಗಿರುವವು. ಇಂಥ ಬದಲಾದ ಪರಿಸ್ಥಿತಿಯಲ್ಲಿ ಹೊಂದಿಕೊಳ್ಳುವಂತೆ ಹಳ್ಳಿಗಳನ್ನು ಪುನರ್ಘಟಿಸಬೇಕಾಗಿದೆ. ಗ್ರಾಮೋದ್ಯೋಗಗಳಲ್ಲಿ ಸಂಶೋಧನೆ ಹಾಗು ತರಬೇತಿ ಎಲ್ಲಕ್ಕೂ ಮಹತ್ವವಾಗಿವೆ. ಮೊದಲನೆಯದಾಗಿ ಸಂಶೋಧನೆಗೆ ಅವಶ್ಯವಿರುವ ಸಮಸ್ಯೆಗಳನ್ನು ಬೆಳಕಿಗೆ ತರುವದು ಅಗತ್ಯ ವಾಗಿದೆ. ಗ್ರಾಮೋದ್ಯೋಗ ಸಮಸ್ಯೆಗಳನ್ನು ಕುರಿತು ಸಂಶೋಧನ ನಡೆಯಿ ಸಲು ಒಂದು ಕೇಂದ್ರ ಸಂಸ್ಥೆಯನ್ನು ಸ್ಥಾಪಿಸಬೇಕು. ಖಾದಿ ಹಾಗು ಗ್ರಾಮೋದ್ಯೋಗ ಮಂಡಳವು ಇತರ ಸಂಬಂಧಿಸಿದ ಸಂಸ್ಥೆಗಳೊಡನೆ ವಿಚಾರ ವಿನಿಮಯ ಮಾಡಿ ಇದನ್ನು ರೂಪಿಸಬೇಕು ಹಣಕಾಸನ್ನು ಒದಗಿಸುವದರಲ್ಲಿ ಈ ಸಂಸ್ಥೆಗೆ ಹೆಚ್ಚಿನ ಪ್ರಾಶಸ್ತ್ಯವೀಯಬೇಕು. ಹಳ್ಳಿಯ ಕೆಲಸಗಾರರನ್ನು ತರಬೇತುಗೊಳಿಸುವದಕ್ಕಾಗಿ ತರಬೇತು ಕೇಂದ್ರಗಳನ್ನು ರಾಜ್ಯ ಸರಕಾರ ದವರು ಸಂಘಟಿಸಬೇಕು.

ಸಾರಿಗೆ ಹಾಗು ಸಂಪರ್ಕ ಯೋಜನೆಯಲ್ಲಿ ಒಟ್ಟು ವೆಚ್ಚದ ೪/೫ ಕಿಂತ ಸ್ವಲ್ಪ ಕಡಿಮೆಹಣ ರೇಲ್ವೆಗಳಿಗಾಗಿ ಮೀಸಲಾಗಿದೆ. ಯಂತ್ರ ಸಾಮುಗ್ರಿ ಗಳ ಸಲುವಾಗಿ ನಾವು ಸಂಪೂರ್ಣವಾಗಿ ಪರದೇಶವನ್ನೇ ಅವಲಂಬಿಸ ಬಾರದು. ರೇಲ್ವೆ ಇಂಜಿನ್ನುಗಳನ್ನು ತಯಾರಿಸುವದಕ್ಕಾಗಿ ಕಲಕತ್ತೆಯಬಳಿ ಚಿತ್ತರಂಜನದಲ್ಲಿ ಸರಕಾರದವರು ೧೫ ಕೋಟಿ ರೂ. ಖರ್ಚುಮಾಡಿ ಒಂದು ಕಾರಖಾನೆಯನ್ನು ತೆಗೆದಿರುವರು. ಈ ಕಾರಖಾನೆಯಿಂದ ಐದು ವರ್ಷಗಳಲ್ಲಿ ೩೦೦ ಇಂಜಿನ್ನುಗಳು ತಯಾರಾಗಬಹುದು. ಇದಲ್ಲದೆ ಟಾಟಾ ಕಂಪನಿಯಲ್ಲಿ ಭಾರತ ಸರಕಾರವು ೨ ಕೋಟಿ ರೂ. ಗಳನ್ನು ತೊಡಗಿಸಿರುವದು. ಈ ಕಂಪನಿಯಿಂದ ಯೋಜನಾ ಆಯೋಗದ ಅವಧಿಯಲ್ಲಿ ೨೦೦ ಇಂಜಿನುಗಳು ತಯಾರಾಗಬಹುದೆಂದು ಅಂದಾಜು ಮಾಡಲಾಗಿರುವದು. ರೇಲ್ವೆಯಲ್ಲಿ ಸುಧಾರಣೆಯನ್ನು ಮಾಡಲು ಐದು ವರ್ಷಕ್ಕೆ ೪೦೦ ಕೋಟಿ ರೂ. ಗಳನ್ನು ಮಂಜೂರ ಮಾಡಲಾಗಿದೆ.

ಶೈಕ್ಷಣಿಕ ಅಭಿವೃದ್ಧಿಗಾಗಿ ಯೋಜನೆಯಲ್ಲಿ ೧೫೫.೬೬ ಕೋಟಿ ರೂ. ಗಳ ವ್ಯವಸ್ಥೆಯಿರುವದು. ಇದು ಒಟ್ಟು ವೆಚ್ಚದ ೧೦೦ ಕ್ಕೆ ೭ ರಷ್ಟು ಅಗುವದು. ಹಿಂದುಸ್ಥಾನವು ಶೈಕ್ಷಣಿಕ ದೃಷ್ಟಿಯಿಂದ ಬಹಳ ಹಿಂದೆ ಉಳಿದಿರುವದು. ೧೦೦ ಕ್ಕೆ ೧೫ ರಷ್ಟು ಜನರು ಮಾತ್ರ ಓದುಬರಹ ಬಲ್ಲವರಿರುವರು. ನಮ್ಮ ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ ನಮ್ಮ ಪ್ರಜೆಗಳು ಸಾಕ್ಷರರಾಗಬೇಕು. ಕೇವಲ ಸಾಕ್ಷರರಾದರೂ ಮುಗಿಯಲಿಲ್ಲ. ಅವರಲ್ಲಿ ವಾಚನಾಭಿರುಚಿಯುಂಟಾಗಬೇಕು. ಯೋಜನಾ ಆಯೋಗವು ತಾಂತ್ರಿಕ ಶಿಕ್ಷಣದಂತಹ ಮಹತ್ವದ ಪ್ರಶ್ನೆಯ ಬಗ್ಗೆ ಆಸ್ಥೆ ವಹಿಸಿದೆ. ಶಿಕ್ಷಣದಲ್ಲಿ ಸ್ನಾತಕೋತ್ತರ ಅಭ್ಯಾಸ, ಸಂಶೋಧನೆಗಳಿಗಾಗಿ ಸೌಕರ್ಯಗಳ ವಿಕಾಸ, ಪದವೀ ಪರೀಕ್ಷೆಯ ಪೂರ್ವಮಟ್ಟದಲ್ಲಿ ಕಾರ್ಯದ ಸಂಯೋಜನೆ, ಮಾನಸಶಾಸ್ತ್ರ, ಮುದ್ರಣಕಲೆ, ಶಿಲ್ಪಕಲೆ, ನಗರ ರಚನೆ ಮುಂತಾದ ವಿಶಿಷ್ಟ ವಿಷಯಗಳ ಅಭ್ಯಾಸಕ್ಕಾಗಿ ಸೌಕರ್ಯಗಳನ್ನು ಏರ್ಪಡಿಸಲಾಗಿದೆ. ಹೊಸ ದಿಲ್ಲಿಯಲ್ಲಿ ರಾಷ್ಟ್ರೀಯ ಕೇಂದ್ರ ಗ್ರಂಥಾಲಯವನ್ನು ಸ್ಥಾಪಿಸುವ ವಿಚಾರವಿದೆ.

ಮೂಲ ಶಿಕ್ಷಣ ಕ್ಷೇತ್ರದಲ್ಲಿ, ಪ್ರತಿಯೊಂದು ರಾಜ್ಯದಲ್ಲಿ ಪೂರ್ವ ಮೂಲ ಶಿಕ್ಷಣ ಶಾಲೆಯಿಂದ ಸ್ನಾತಕೋತ್ತರ ಮೂಲ ಶಿಕ್ಷಣ ತರಬೇತಿ ಕಾಲೇಜದ ವರೆಗೆ ಕನಿಷ್ಠ ಒಂದು ಪರಿಪೂರ್ಣ ಮೂಲ ಶಿಕ್ಷಣ ಘಟಕವನ್ನು ಸ್ಥಾಪಿಸುವ ವಿಚಾರವಿದೆ. ಇದರ ಉದ್ದೇಶವೇನಂದರೆ ಶಿಕ್ಷಣ ಪದ್ಧತಿಗಳಲ್ಲಿ ಸಂಶೋಧನೆ ನಡೆಸುವದು, ಸಾಹಿತ್ಯ ರಚಿಸುವದು ಇತ್ಯಾದಿ.

ಕಡೆಯದಾಗಿ ಆಯೋಗವು ಆರೋಗ್ಯ ರಕ್ಷಣೆಯ ಕಡೆಗೂ ಮಹತ್ವ ಕೊಟ್ಟಿರುವದು. ಕೆಳಗಿನವುಗಳ ಬಗ್ಗೆ ಯೋಜನೆಯು ಮಹತ್ವ ಕೊಟ್ಟಿದೆ. (೧) ನೀರಿನ ಪೂರೈಕೆ ಹಾಗು ಆರೋಗ್ಯ ರಕ್ಷಣೆ (೨) ಚಳಿಜ್ವರ ನಿಯಂತ್ರಣ (೩) ಆರೋಗ್ಯ ಪಥಕ ಹಾಗು ಸಂಚಾರಿ ಪಥಕಗಳ ಮುಖಾಂತರ ಹಳ್ಳಿಯ ಜನತೆಗೆ ಪ್ರತಿಬಂಧಕೋಪಾಯಗಳಿಂದ ಆರೋಗ್ಯ ರಕ್ಷಣೆಯ ಉಪಾಯಗಳನ್ನು ತಿಳಿಹೇಳುವದು (೪) ತಾಯಂದಿರ ಹಾಗು ಮಕ್ಕಳ ಆರೋಗ್ಯ ವ್ಯವಸ್ಥೆ (೫) ಆರೋಗ್ಯ ವಿಷಯಕ ಶಿಕ್ಷಣ ಹಾಗು ತರಬೇತಿ (೬) ಔಷಧಿ ಹಾಗು ಸಾಧನ ಸಾಮಗ್ರಿಗಳ ವಿಷಯದಲ್ಲಿ ಸ್ವಾವಲಂಬನ (೭) ಕುಟುಂಬ

ಯೋಜನೆ ಮತ್ತು ಜನಸಂಖ್ಯೆಯ ನಿಯಂತ್ರಣ, ಕೇಂದ್ರ ಹಾಗು ರಾಜ್ಯಸರಕಾರಗಳು ಕೈಕೊಂಡ ಸಾರ್ವಜನಿಕ ಆರೋಗ್ಯ ಕಾರ್ಯಕ್ರಮದ ವೆಚ್ಚವು ೫೦ ೩೮ ಕೋಟಿ ರೂ. ಇದೆ. ಇದರಲ್ಲಿ ಬಹಳ ಹಣವು ನೀರಿನ ಪೂರೈಕೆ, ಹರಿಗಳ ಯೋಜನೆ ಹಾಗು ಚಳಿಜ್ವರ ಪ್ರತಿಬಂಧಕ ಯೋಜನೆಗಾಗಿ ವ್ಯಯವಾಗುವದು. ಭಾರತದಲ್ಲಿ ಸಾರ್ವಜನಿಕ ಆರೋಗ್ಯ ಸಮಸ್ಯೆಯಲ್ಲಿ ಚಳಿಜ್ವರ ಸಮಸ್ಯೆ ಅತ್ಯಂತ ಮಹತ್ವದ್ದಾಗಿದೆ. ಆದ್ದರಿಂದ ಇದಕ್ಕೆ ಅಗ್ರಸ್ಥಾನ ಕೊಡಲೇಬೇಕು. ಚಳಿಜ್ವರ ನಿಯಂತ್ರಣಕ್ಕಾಗಿ ಯೋಜನೆಯಲ್ಲಿ ೧೭.೦೪ ಕೋಟಿ ರೂ ಗಳನ್ನು ತೆಗೆದಿಡಲಾಗಿದೆ.